

ಶಿಷ್ಯಸಮೇತ ಶ್ರೀಶಂಕರಭಗವತ್ಪಾದಾಚಾರ್ಯರವರು

ಅಧ್ಯಾತ್ಮಗ್ರಂಥಾವಳಿ

ಶ್ರೀಶಾಂಕರಭಾಷ್ಯಸಹಿತ

# ಕಾಠಕೋಪನಿಷತ್ತು

ಸಂಸ್ಕೃತಮೂಲ, ಟಿಪ್ಪಣಿ, ಸಾರಾಂಶ, ಅಕ್ಷರಾನುಕ್ರಮಣಿಕೆ
ಇವುಗಳಿಂದ ಕೂಡಿದ ಅನುವಾದ

ಲೇಖಕ

ಈಶಾವಾಸ್ಯೋಪನಿಷತ್ತು, ಮುಂಡಕೋಪನಿಷತ್ತು, ಮಾಂಡೂಕ್ಯೋಪನಿಷತ್ತು
ಮುಂತಾದ ಗ್ರಂಥಗಳನ್ನು ಕನ್ನಡಿಸಿರುವ

ವೈ. ಸುಬ್ಬರಾವ್



ಅಧ್ಯಾತ್ಮಪ್ರಕಾಶಮುದ್ರಣಾಲಯ, ಬೆಂಗಳೂರು ಸಿಟಿ.

1930

# ವಿಷಯಕ್ರಮ





---

# ಪೀಠಿಕೆ

ಕಠೋಪನಿಷತ್ತು ಕೃಷ್ಣಯಜುರ್ವೇದಕ್ಕೆ ಸೇರಿದ್ದೆಂದು ಪ್ರಸಿದ್ಧಿಯಿದೆ. ಆದರೆ ಮಿಕ್ಕ ಭಾಷ್ಯಗಳಲ್ಲಿರುವಂತೆ ಹಿಂದಿನ ಗ್ರಂಥಕ್ಕೂ ಉಪನಿಷತ್ತಿಗೂ ಸಂಬಂಧವನ್ನು ಹೇಳುವ ಭಾಗವು ಈ ಉಪನಿಷತ್ತಿನ ಭಾಷ್ಯದಲ್ಲಿ ಕಾಣದೆ ಇರುವದರಿಂದ ಈ ಉಪನಿಷತ್ತು ಯಾವ ಬ್ರಾಹ್ಮಣಕ್ಕೆ ಸೇರಿದ್ದೆಂದು ಆಚಾರ್ಯರು ಪರಿಗಣಿಸಿದ್ದರೋ ತಿಳಿಯುವದು ಕಷ್ಟವಾಗಿದೆ.

ಈ ಉಪನಿಷತ್ತಿನಲ್ಲಿ ನಚಿಕೇತನೆಂಬ ಹುಡುಗನಿಗೆ ಮೃತ್ಯುದೇವತೆಯಾದ ಯಮನು ಉಪದೇಶಿಸಿದ ಬ್ರಹ್ಮವಿದ್ಯೆಯಿದೆ. ಈ ನಚಿಕೇತನ ಕಥೆಯು ತೈತ್ತಿರೀಯಬ್ರಾಹ್ಮಣದಲ್ಲಿಯೂ ಮಹಾಭಾರತದಲ್ಲಿಯೂ ಬಂದಿರುತ್ತದೆ. ಆದರೆ ಇಲ್ಲಿರುವ ಹಾಗೆ ಬ್ರಹ್ಮವಿದ್ಯೆಯ ವಿಚಾರವೇನೂ ಅಲ್ಲಿ ಕಾಣುವದಿಲ್ಲ. ಈ ಉಪನಿಷತ್ತಿನಲ್ಲಿಯಾದರೋ ನಚಿಕೇತನು ಕೇಳಿದ ಮೊದಲನೆಯ ಎರಡನೆಯ ವಿಷಯಗಳನ್ನು ಬ್ರಹ್ಮವಿದ್ಯೆಗೆ ಸಾಧನವನ್ನಾಗಿ ಮಾಡಿಕೊಂಡಿರುತ್ತದೆ. ತಂದೆಯು ಯಾಗಸಂಪೂರ್ತಿಗಾಗಿ ತನ್ನನ್ನೇ ಮೃತ್ಯುವಿಗೆ ದಾನಮಾಡಿಕೊಂಡು ಬಂದಿದ್ದ ನಚಿಕೇತನು ತನ್ನ ಕಾರ್ಯದಿಂದ ಸಿಟ್ಟಿಗೆದ್ದಿರುವ ತಂದೆಯು ಸಮಾಧಾನಚಿತ್ತದಿಂದ ತನ್ನನ್ನು ಬರಮಾಡಿಕೊಳ್ಳಬೇಕೆಂಬ ವರವನ್ನೇ ಮೊದಲು ಬೇಡಿದನು. ಆಮೇಲೆ ವಿರಾಡಾತ್ಮತ್ವವನ್ನು ಕೊಡುವ ಅಗ್ನಿವಿದ್ಯೆಯನ್ನು ಬೇಡಿಕೊಂಡನು. ತಂದೆತಾಯಿಗಳೇ ಮುಂತಾದ ಗುರುಹಿರಿಯರ ವಿಷಯದಲ್ಲಿ ಧರ್ಮದಿಂದ ನಡೆದುಕೊಂಡು ಕರ್ಮೋಪಾಸನೆಗಳಿಂದ ಚಿತ್ತಶುದ್ಧಿಯನ್ನು ಪಡೆದಾತನೆ ಬ್ರಹ್ಮವಿದ್ಯೆಗೆ ಅರ್ಹನೆಂಬುದನ್ನು ಇದರಿಂದ ಸೂಚಿಸಿದಂತೆ ಆಯಿತು. ಕರ್ಮೋಪಾಸನೆಗಳ ಫಲವು ಎಷ್ಟೇ ದೊಡ್ಡದಾಗಿರಲಿ, ಅವುಗಳಿಂದಲೇ ತೃಪ್ತಿಹೊಂದದೆ ಅತಿವಿರಕ್ತನಾಗಿ ಜ್ಞಾನವೊಂದನ್ನೇ ಬಯಸುವಾತನು ಈ ಉಪನಿಷತ್ತಿನಲ್ಲಿ ಹೇಳಿರುವ ಬ್ರಹ್ಮವಿದ್ಯೆಗೆ ಅಧಿಕಾರಿಯೆಂಬುದನ್ನು ನಚಿಕೇತನ ಯೋಗ್ಯತಾಪರೀಕ್ಷೆಯ ಗ್ರಂಥದಿಂದ ನಾವು ತಿಳಿದುಕೊಳ್ಳಬಹುದಾಗಿದೆ. ಎರಡನೆಯ ವಲ್ಲಿಯ ಮೊದಲಿನ ಹದಿಮೂರು ಮಂತ್ರಗಳಲ್ಲಿ ನಚಿಕೇತನನ್ನು ಹೊಗಳಿರುವದಕ್ಕೆ ಇದೇ ಕಾರಣ.

ಮೂರನೆಯ ವರವಾದ ಬ್ರಹ್ಮವಿದ್ಯೆಯ ವಿಷಯದಲ್ಲಿ ನಚಿಕೇತನು ಕೇಳಿದ್ದೇನು? ಯಮನು ಹೇಳಿದ್ದೇನು? ಎಂಬುದೇ ಹೆಚ್ಚಾಗಿ ವಿಚಾರಿಸಿ ತಿಳಿಯಬೇಕಾದ ವಿಷಯವು. ಈ ವಿಷಯದಲ್ಲಿ ಭಾಷ್ಯಕಾರರ ಮತವು ಏನೆಂಬ ವಿಷಯ

ದಲ್ಲಿ ಮತಭೇದವು ಬರಬಹುದಾದ ಸಂದರ್ಭಗಳನ್ನು ಒಕ್ಕಡೆಗೆ ತಂದು ಮುಖ್ಯ ಸಂಗತಿಗಳನ್ನು ಸಂಗ್ರಹಿಸಿ ಇಲ್ಲಿ ಬರೆಯುತ್ತೇನೆ.

ದೇಹವ್ಯತಿರಿಕ್ತನಾದ ಆತ್ಮನೊಬ್ಬನಿರುವನೆ? ಅವನ ಪರಮಾರ್ಥಸ್ವರೂಪವು ಏನು? ಎಂಬುದೇ ನಚಿಕೇತನ ಮುಖ್ಯಪ್ರಶ್ನೆ (೧-೧-೨೦, ೧-೨-೧೪) ದೇಹ, ಇಂದ್ರಿಯ, ಪ್ರಾಣ, ಮನಸ್ಸು, ಬುದ್ಧಿ- ಇವುಗಳಿಗಿಂತ ಬೇರೆಯಾದ ಆತ್ಮನಿರುವನೇ ಇಲ್ಲವೆ? ಎಂಬ ವಿಷಯದಲ್ಲಿ ಪ್ರತ್ಯಕ್ಷಪ್ರಮಾಣವಾಗಲಿ ಅನುಮಾನವಾಗಲಿ ಸಹಾಯವಾಗುವದಿಲ್ಲ. ಏಕೆಂದರೆ ಬುದ್ಧಿ ಮುಂತಾದವೇ ಅತೀಂದ್ರಿಯವಸ್ತುಗಳಾಗಿವೆ; ಇನ್ನು ಅವಕ್ಕೆಲ್ಲ ಮೀರಿರುವ ವಸ್ತುವಿದ್ದರೆ ಅದು ಇಂದ್ರಿಯಗೋಚರವಾಗುವ ಸಂಭವವಿಲ್ಲ. ಅಂಥ ವಸ್ತುವಿಗೆ ಗುರುತೇನೂ ಇಲ್ಲದ್ದರಿಂದ ಅದನ್ನು ಗುರುತಿನಿಂದ ಊಹಿಸುವ ಅನುಮಾನಪ್ರಮಾಣದಿಂದಲೂ ಅರಿಯುವ ಹಾಗಿಲ್ಲ. ಆದಕಾರಣ ಅದು ಇದೆಯೆಂಬುದಕ್ಕೆ ಪ್ರಮಾಣವೇನು? ಇದ್ದರೆ ಅದರ ಸ್ವರೂಪವೇನು?- ಎಂಬುದೇ ನಚಿಕೇತನ ಪ್ರಶ್ನೆಯ ಸಾರಾಂಶ.

ಇದಕ್ಕೆ ಯಮನು ಕೊಟ್ಟಿರುವ ಉತ್ತರವೇನೆಂದರೆ- ಆತ್ಮತತ್ತ್ವವನ್ನು ಸಾಮಾನ್ಯಜನರು ವಿಚಾರಮಾಡುವದಿಲ್ಲ, ಅಥವಾ ಅವರು ವಿಚಾರಮಾಡಿದರೂ ಅವರಿಗೆ ತಿಳಿಯುವದಿಲ್ಲ (೧-೨-೫, ೬, ೭), ಏಕೆಂದರೆ ಅವಿದ್ಯೆಯು ಇವರ ತಿಳಿವಳಿಕೆಗೆ ಅಡ್ಡಿಯಾಗಿರುವದು. ಈ ಆತ್ಮತತ್ತ್ವವು ಬರಿಯ ತರ್ಕಕ್ಕೆ ಸಿಲುಕುವದಲ್ಲವಾದ್ದರಿಂದ ಸಾಮಾನ್ಯರು ಇದನ್ನು ಹೇಳಿಕೊಡಲಾರರು (೮, ೯) ಆದರೂ ಈ ಆತ್ಮತತ್ತ್ವವು ನಮ್ಮ ಹೃದಯದಲ್ಲಿಯೇ ಗೂಢವಾಗಿರುವದು, ಇದನ್ನು ಅಧ್ಯಾತ್ಮಯೋಗದಿಂದ ತಿಳಿದುಕೊಳ್ಳಬಹುದು (೧೨). ಇದನ್ನು ತಿಳಿದರೆ ಪರಮಾನಂದಪ್ರಾಪ್ತಿಯಾಗುವದು (೧೩, ೧೪). ಸಾಮಾನ್ಯರಿಗೆ ಇದನ್ನು ತಿಳಿಯುವದಕ್ಕೆ ಆಗಲಾರದಾದ್ದರಿಂದ ಅಂಥವರು ಓಂಕಾರದ ಮೂಲಕ ಅದನ್ನು ಧ್ಯಾನಮಾಡಿ ಅರಿಯಬೇಕು (೧೫-೧೭). ಆತ್ಮನಲ್ಲಿ ಯಾವ ವಿಶೇಷಗಳೂ ಇಲ್ಲ, ಮನಸ್ಸೇ ಮುಂತಾದ ಉಪಾಧಿಗಳಿಂದ ವಿಶೇಷಗಳು ಕಾಣುವವು (೨೦, ೨೧).

## ೧. ಅವಿದ್ಯೆಯೆಂದರೇನು?

ಮೇಲೆ ಹೇಳಿದ ಉತ್ತರದಲ್ಲಿ ಅನೇಕ ಸಂಶಯಗಳು ಬರುವವು. ಅವಿದ್ಯೆಯೆಂದರೇನು? ಆತ್ಮನು ತರ್ಕಕ್ಕೆ ಸಿಲುಕುವದಿಲ್ಲವೆಂದರೇನರ್ಥ? ತರ್ಕಕ್ಕೆ ಸಿಲುಕದ ಇವನನ್ನು ಅರಿಯುವದು ಹೇಗೆ? ಯೋಗವೆಂದರೇನು? ಇದರಿಂದ ಆತ್ಮನನ್ನು ತಿಳಿಯುವದೆಂದರೆ ಹೇಗೆ? ಈ ಪ್ರಶ್ನೆಗಳಿಗೆ ಶ್ರುತಿಯಲ್ಲಿ ಸ್ಪಷ್ಟವಾದ ಉತ್ತರಗಳು ದೊರೆಯುವದಿಲ್ಲವಾದ್ದರಿಂದ ಭಾಷ್ಯಕಾರರ ಮತದಿಂದ ಉತ್ತರ

ವನ್ನು ವಿಚಾರಿಸುವುದು ಅವಶ್ಯಕವು. ಮೊದಲು ಅವಿದ್ಯೆಯೆಂದರೇನೆಂಬುದನ್ನು ಇಲ್ಲಿ ವಿಚಾರಿಸೋಣ. ಈಗಿನ ವೇದಾಂತಿಗಳು ಕೆಲವರು ಅವಿದ್ಯೆಯೆಂದರೆ ಆತ್ಮನಲ್ಲಿ ಅನಾದಿಯಾಗಿರುವ ಒಂದಾನೊಂದು ಶಕ್ತಿಯೆಂದೂ ಇದಕ್ಕೆ, 'ಅವ್ಯಾಕೃತ', 'ಮಾಯಾ', 'ಬೀಜ'- ಮುಂತಾದ ಅನೇಕ ಹೆಸರುಗಳು ಇರುವವೆಂದೂ ಬ್ರಹ್ಮಾತ್ಮಜ್ಞಾನದಿಂದ ಇದು ನಾಶವಾಗುವದೆಂದೂ ಅಭಿಪ್ರಾಯಪಡುತ್ತಾರೆ. ಆದರೆ ಈ ಅಭಿಪ್ರಾಯವು ಭಾಷ್ಯಸಮ್ಮತವಲ್ಲ. ಏಕೆಂದರೆ ಈ ರೂಪದ ಅವಿದ್ಯೆಯನ್ನು ಭಾಷ್ಯಕಾರರು ಎಲ್ಲಿಯೂ ಒಪ್ಪಲಿಲ್ಲ. ಅವಿದ್ಯೆಯೆಂದರೆ ಆತ್ಮನಲ್ಲಿ ಕ್ರಿಯಾಕಾರಕಫಲಗಳನ್ನು ಆರೋಪಣೆಮಾಡುವದು (೧-೧-೨೦); ಅವಿದ್ಯೆಯನ್ನು ಮಿಥ್ಯಾಜ್ಞಾನವೆಂದೂ ಕರೆಯಬಹುದು (೧-೩-೧೪); ಕ್ರಿಯಾಕಾರಕಫಲಗಳುಳ್ಳ ಪ್ರಪಂಚವೇ ನಾಮರೂಪಕರ್ಮಗಳಾಗಿ ತೋರುವ ಅನಾತ್ಮವಸ್ತು (೧-೩-೧೪); ಇದು ಆತ್ಮನಿಗಿಂತ ಹೊರಗಿದೆ ಎಂದು ಭಾವಿಸುವದೇ ಅವಿದ್ಯೆ (೨-೧-೨); ಉಪಾಧಿಯ ಸ್ವಭಾವದಿಂದಾದ ಭೇದದೃಷ್ಟಿಯೇ ಅವಿದ್ಯೆ (೨-೧-೧೦); ಈ ಅವಿದ್ಯೆಯೆಂಬುದು ಆತ್ಮನಲ್ಲಿ ಆರೋಪಣೆಯು (೨-೨-೧೧)- ಎಂದು ಆಚಾರ್ಯರು ಬೇರೆ ಬೇರೆ ಸಂದರ್ಭದಲ್ಲಿ ಈ ಉಪನಿಷತ್ತಿನಲ್ಲಿ ಹೇಳಿರುವ ಹಾಗೆಯೆ ಮಿಕ್ಕ ಭಾಷ್ಯಗಳಲ್ಲಿಯೂ ಹೇಳಿರುತ್ತಾರೆ. ಆದ್ದರಿಂದ ಆತ್ಮನನ್ನು ತಿಳಿಯದವರು ಆತ್ಮನಲ್ಲಿಲ್ಲದ ಅಸತ್ಯವಾದ ಅನಾತ್ಮವಸ್ತುವನ್ನು ಅವನಲ್ಲಿ ಆರೋಪಣೆಮಾಡುವದೇ ಅವಿದ್ಯೆಯೆಂದು ತಿಳಿಯುವದು ಯುಕ್ತವಾಗಿರುತ್ತದೆ

## ೨. ಆತ್ಮನು ತರ್ಕಕ್ಕೆ ನಿಲುಕುವದಿಲ್ಲವೆಂದರೇನರ್ಥ?

ಶಾಸ್ತ್ರದಲ್ಲಿ ಹೇಳಿದಂತೆ ಆತ್ಮನನ್ನು ಗ್ರಹಿಸಬೇಕಾಗಿರುವದರಿಂದ ಆತ್ಮವಿದ್ಯೆಗೆ ತರ್ಕವು ಉಪಯೋಗವೇ ಇಲ್ಲವೆಂದು ಕೆಲವರೆನ್ನುವರು. ಆದರೆ ಇದು ಸರಿಯಲ್ಲ. ಏಕೆಂದರೆ ಈ ಉಪನಿಷತ್ತಿನಲ್ಲಿಯೇ ಆತ್ಮಸ್ವರೂಪವನ್ನು ತಿಳಿಸುವದಕ್ಕೆ ತರ್ಕವನ್ನುಪಯೋಗಿಸಿರುತ್ತದೆ. ಭಾಷ್ಯಕಾರರ ಮತವೇನೆಂಬುದನ್ನು (೧-೨-೮) "ಅತರ್ಕ್ಯಃ ಸ್ವಬುದ್ಧ್ಯಭ್ಯೂಹೇನ ಕೇವಲೇನ ತರ್ಕೇಣ" (ಒಬ್ಬನು ತನ್ನ ಬುದ್ಧಿಯಿಂದ ಮಾಡಿದ ಅಭಿಮಾನದ ಊಹೆಯಿಂದ ಮಾಡುವ ತರ್ಕಕ್ಕೆ ನಿಲುಕುವದಿಲ್ಲ) ಎಂಬ ವಾಕ್ಯದಿಂದ ತಿಳಿದುಕೊಳ್ಳಬಹುದು. ವೇದದಲ್ಲಿ ಸೂಚಿಸಿರುವ ತರ್ಕವು ಅನುಭವಾನುಸಾರಿಯಾದ್ದರಿಂದ ಅಂಗೀಕರಿಸತಕ್ಕದ್ದು; ಉಳಿದವರು ತಾವೇ ಊಹಿಸಿರುವ ತರ್ಕವು ಎಷ್ಟು ಸೂಕ್ಷ್ಮವಾಗಿ ಕಂಡರೂ ಅವರಿಗಿಂತ ಜಾಣರು ಮಾಡಿದ ಮತ್ತೊಂದು ತರ್ಕದಿಂದ ಬಾಧಿತವಾಗುತ್ತದೆ- ಎಂಬುದೇ ಇಲ್ಲಿ ತಿಳಿಯಬೇಕಾದದ್ದು. ಆದ್ದರಿಂದಲೇ 'ಆಗಮೋಪಪತ್ತಿಗಳಿಂದ ತಿಳಿದ ಅರ್ಥವು ತತ್ತ್ವವನ್ನು ಅಂಗೈನೆಲ್ಲಿಯಂತೆ ಸ್ಪಷ್ಟವಾಗಿ ತಿಳಿ

ಸುತ್ತದೆ' ಎಂದು ಬೃಹದಾರಣ್ಯಕ, ಮಾಂಡೂಕ್ಯ, ಬ್ರಹ್ಮಸೂತ್ರ- ಮುಂತಾದ ಗ್ರಂಥಗಳ ಭಾಷ್ಯದಲ್ಲಿ ಆಚಾರ್ಯರು ಸ್ಪಷ್ಟವಾಗಿ ಬರೆದಿರುತ್ತಾರೆ. ಈ ಉಪನಿಷತ್ತಿನಲ್ಲಿ ಆತ್ಮಸ್ವರೂಪವನ್ನು ತಿಳಿಯುವದಕ್ಕೆ ಅನುಕೂಲವಾಗಿ ಕೊಟ್ಟಿರುವ ತರ್ಕಗಳು ಯಾವವೆಂದರೆ:—

(೧) ಇಂದ್ರಿಯ, ಮನಸ್ಸು, ಬುದ್ಧಿ, ಅಹಂಕಾರ, ಇದರ ಬೀಜರೂಪವಾದ ಅವ್ಯಕ್ತ— ಇವುಗಳೆಲ್ಲಕ್ಕಿಂತಲೂ ಪರಮಸೂಕ್ಷ್ಮನಾಗಿ, ಪರಮವ್ಯಾಪಕನಾಗಿ, ಎಲ್ಲಕ್ಕೂ ಒಳಗಿರುವವನೇ ಆತ್ಮ (೧—೩—೧೦, ೧೧).

(೨) ಆತ್ಮನ ಇರವೇ ಎಲ್ಲಾ ಜಗತ್ತಿನಲ್ಲಿಯೂ ತೋರಿಕೊಳ್ಳುತ್ತಿರುವದು. ಶರೀರ, ಇಂದ್ರಿಯ—ಮುಂತಾದವುಗಳು ಜಡವಾಗಿರುತ್ತವೆ, ಇವುಗಳಲ್ಲಿ ತೋರುವ ಚೈತನ್ಯವು ಯಾರದ್ದೋ ಆ ಜ್ಞಾತೃವಿನ ಸ್ವರೂಪವೇ ಆತ್ಮ (೨-೧-೩).

(೩) ಜಾಗ್ರತ್ಸ್ವಪ್ನಗಳೆಂಬ ಅವಸ್ಥೆಗಳನ್ನು ಯಾವ ಚೈತನ್ಯದಿಂದ ನಾವು ನೋಡುವೆವೋ ಅಂಥ ಅವಸ್ಥಾಸಾಕ್ಷಿಯಾದ ಚೈತನ್ಯವೇ ಆತ್ಮನು (೨-೧-೪).

(೪) ಕರ್ಮಫಲವನ್ನು ಅನುಭವಿಸುತ್ತಾ ಕಾಲತ್ರಯದಲ್ಲಿಯೂ ಇರುವ ಭೋಕ್ತೃವಿನ ಸ್ವರೂಪವೇ ಕಾಲದ ಪರಿಚ್ಛೇದವಿಲ್ಲದ ಆತ್ಮನು (೨-೧-೫, ೧೩).

(೫) ಶರೀರೇಂದ್ರಿಯಪ್ರಾಣಗಳು ಒಂದಕ್ಕೊಂದು ಕೂಡಿ ಯಾರಿಗಾಗಿ ಯಾರಿಂದ ಪ್ರೇರಿತವಾದಂತೆ ಕೆಲಸಮಾಡುತ್ತಿರುವವೋ, ಅಂಥ ಚೈತನ್ಯರೂಪನಾಗಿ ಅವುಗಳೊಡನೆ ಸೇರಿಕೊಳ್ಳದೆ ಸ್ವತಂತ್ರನಾಗಿ ಸರ್ವವಿಕ್ರಿಯೆಗಳಿಗೂ ಆಧಾರವಾಗಿರುವವನೇ ಆತ್ಮನು (೨-೨-೧).

ಈ ಐದೂ ಆತ್ಮನಿರಬೇಕೆಂದು ಬೋಧಿಸುವ ಕೇವಲ ಅನುಮಾನಪ್ರಮಾಣಗಳೆಂದು ಭಾವಿಸಕೂಡದು. ಏಕೆಂದರೆ ತಾನೆಂಬ ಸ್ವರೂಪವನ್ನು ಇಲ್ಲವೆನ್ನುವದಕ್ಕೆ ಯಾರಿಂದಲೂ ಆಗುವದಿಲ್ಲ. (ನ ಹಾತವ್ಯಾ ೧—೨—೯); ಯಾರಾದರೂ ಒಂದು ವೇಳೆ ಆತ್ಮನು ಇಲ್ಲವೆಂದರೆ ಇಲ್ಲವೆನ್ನುವಾತನ ಸ್ವರೂಪವು ಇದ್ದೇ ಇರಬೇಕಾಗುವದರಿಂದ ಅದೇ ಆತ್ಮನಸ್ತಿತ್ವವಾಗುವದು. ಆದ್ದರಿಂದ ಮೇಲೆ ಕೊಟ್ಟಿರುವವು ಬರಿಯ ಅನುಮಾನಗಳಲ್ಲ; ಚೈತನ್ಯಸ್ವರೂಪದ ಅನುಭವವು ನಿತ್ಯಸಿದ್ಧವೆಂಬುದನ್ನು ನೆನಪುಕೊಡುವದಕ್ಕೆ ಇವು ಬಲವಾದ ಅನುಕೂಲ ತರ್ಕಗಳಾಗಿರುತ್ತವೆ. ಈ ವೈದಿಕತರ್ಕಗಳನ್ನೇ ಅಂಗೀಕರಿಸತಕ್ಕದ್ದು, ವೈದಿಕಸಂಪ್ರದಾಯವನ್ನು ಬಿಟ್ಟು (೧-೨-೯ ಅನಾಗಮುಜ್ಞಾ) ಪ್ರತ್ಯಕ್ಷ ಅಥವಾ ಅನುಮಾನದಿಂದ (೧—೧—೨೦) ಆತ್ಮನು 'ಇದ್ದಾನೆ, ಇಲ್ಲ, ಅಣು' (೧—೨—೮) ಎಂದು ಮುಂತಾಗಿ ಹೇಳುವ ನೈಯಾಯಿಕರು, ಚಾರ್ವಾಕರು, ಕ್ಷಣಿಕವಿಜ್ಞಾನವಾದಿಗಳು— ಮುಂತಾದ (೨—೧-೧೩) ಕುತಾರ್ಕಿಕರ ಮತ್ತು ನಾಸ್ತಿಕರ ವಾದಗಳು ಅನುಭವಕ್ಕೆ ಬರದಂಥ ಪರಸ್ಪರವಿರುದ್ಧವಾದ ಕಲ್ಪನೆಗಳೆಂಬುದೇ

ತರ್ಕಕ್ಕೆ ಆತ್ಮನು ಸಿಕ್ಕುವದಿಲ್ಲವೆಂಬುದರ ಅಭಿಪ್ರಾಯವು. ಈ ಅಭಿಪ್ರಾಯವನ್ನು ಬ್ರಹ್ಮಸೂತ್ರಭಾಷ್ಯದಲ್ಲಿಯೂ ಆಚಾರ್ಯರು ಹೇಳಿದ್ದಾರೆ.

## ೩. ಪ್ರಮಾಣಕ್ಕೆ ನಿಲುಕದ ಆತ್ಮನನ್ನು ಅರಿಯುವದು ಹೇಗೆ ?

ಆತ್ಮನು ತನ್ನ ಸ್ವರೂಪವೇ ಆಗಿರುವದರಿಂದ ನಿತ್ಯಸಿದ್ಧನಾಗಿರುತ್ತಾನೆ. ಅವನನ್ನು ಹೊಸದಾಗಿ ಅರಿಯಬೇಕಾದದ್ದು ಏನೂ ಇಲ್ಲ; ಆತ್ಮನಲ್ಲದುದನ್ನು ಆತ್ಮನೆಂದು ಭಾವಿಸಿಕೊಂಡಿರುವ ತಪ್ಪನ್ನು ತಿದ್ದಿಕೊಂಡರಾಯಿತು. ಹೀಗೆ ತಿದ್ದಿಕೊಳ್ಳುವದಕ್ಕಿಂತ ಬೇರೆ ಆತ್ಮಜ್ಞಾನವಿಲ್ಲವೆಂಬುದನ್ನು [ಅನನ್ಯಾವಗತಿರ್ನಾಸ್ತಿ ಜ್ಞೇಯಸ್ಯಾನ್ಯಸ್ಯಾಭಾವಾತ್' (೧-೨-೮,) ದರ್ಶನಶ್ರವಣಮನನವಿಜ್ಞಾನಲಿಙ್ಗಮ್' (೧-೨-೨೦) ಸ್ಥೂಲಾನ್ಯಾರಭ್ಯ ಸೂಕ್ಷ್ಮತಾರತಮ್ಯಕ್ರಮೇಣ ಪ್ರತ್ಯಗಾತ್ಮತಯಾಧಿಗಮಃ ಕರ್ತವ್ಯಃ (೧-೩-೧೦) ]– ಇವೇ ಮುಂತಾದ ಅನೇಕ ಸ್ಥಳಗಳಲ್ಲಿ ಭಾಷ್ಯಕಾರರು ಹೇಳಿರುತ್ತಾರೆ. ಆದ್ದರಿಂದ ಆತ್ಮಜ್ಞಾನವಾದ ಮೇಲೂ ಆತ್ಮನನ್ನು ಸಾಕ್ಷಾತ್ಕಾರಮಾಡಿಕೊಳ್ಳಬೇಕಾದದ್ದು ಉಳಿದಿರುವದೆಂದು ಹೇಳುವವರ ಪಕ್ಷವು ಭಾಷ್ಯಕಾರರಿಗೆ ಒಪ್ಪಿಲ್ಲವೆಂದು ತಿಳಿಯಬೇಕು.

## ೪. ಯೋಗಕ್ಕೂ ಜ್ಞಾನಕ್ಕೂ ಇರುವ ಸಂಬಂಧ

ಈ ಉಪನಿಷತ್ತಿನಲ್ಲಿ ಅಧ್ಯಾತ್ಮಯೋಗದಿಂದ (೧-೨-೧೨) ಜ್ಞಾನವಾಗುವದೆಂದು ಹೇಳಿದೆ; ನಚಿಕೇತನು ಯೋಗವಿಧಾನವನ್ನು (೨-೩-೧೮) ತಿಳಿದುಕೊಂಡು ಬ್ರಹ್ಮಸ್ವರೂಪವನ್ನು ಹೊಂದಿದನೆಂದೂ ಹೇಳಿರುತ್ತದೆ. ಆದಕಾರಣ ಯೋಗವು ಜ್ಞಾನಕ್ಕೆ ಹೇಗೆ ಸಹಕಾರಿ ?–ಎಂಬುದನ್ನು ವಿಚಾರಿಸುವದು ಅವಶ್ಯ. ಭೇದಜ್ಞಾನವು ಅಸತ್ಯವೆಂಬುದು ನಮಗೆ ಮನಗಾಣಬೇಕಾದರೆ ಆತ್ಮಸಾಕ್ಷಾತ್ಕಾರವು ಅವಶ್ಯಕವೆಂದೂ ಇದಕ್ಕಾಗಿ ಯೋಗವನ್ನು ಹೇಳಿದೆಯೆಂದೂ ಯೋಗವನ್ನು ಮಾಡದೆ ಸುಮ್ಮನೆ ಆತ್ಮೈಕ್ಯವನ್ನು '**ತಿಳಿದರೆ**' ಸಾಲದೆಂದೂ ಅದನ್ನು ನೇರಾಗಿ '**ಕಂಡುಕೊಳ್ಳ**' ಬೇಕೆಂದೂ ಈಗಿನ ವೇದಾಂತಿಗಳು ಕೆಲವರು ಹೇಳುತ್ತಿರುವರು. ಇದು ಭಾಷ್ಯಸಮ್ಮತವಲ್ಲ. ಏಕೆಂದರೆ ವಾಕ್ಯದ ಅರ್ಥವನ್ನು ತಿಳಿದ ಮೇಲೆ ಮತ್ತೇನೂ ಮಾಡಬೇಕಾದದ್ದಿಲ್ಲವೆಂದೂ [ಕೇವಲಶಬ್ದಪ್ರಕಾಶಿತಾರ್ಥಜ್ಞಾನಮಾತ್ರಸ್ಯಾವ್ಯತಿರಿಕ್ತಾಭಾವಾತ್' ಮು|| ೧-೧-೬]. ಉತ್ತಮಾಧಿಕಾರಿಗಳಿಗೆ ಒಂದು ಸಲ ಮಹಾವಾಕ್ಯವನ್ನು ಶ್ರವಣಮಾಡಿದ ಮಾತ್ರದಿಂದಲೇ ಜ್ಞಾನವಾಗುವದಾದರೂ ಕೆಲವರಿಗೆ ಬ್ರಹ್ಮಾತ್ಮಜ್ಞಾನವನ್ನು

ಆವೃತ್ತಿಮಾಡುವದು ಬೇಕಾಗುವದೆಂದೂ [ಭವೇದಾವೃತ್ತ್ಯಾನರ್ಥಕ್ಯಂ ತಂ ಪ್ರತಿ ಯಸ್ತತ್ತ್ವಮಸೀತಿ ಸಕೃದುಕ್ತಮೇವ ಬ್ರಹ್ಮಾತ್ಮತ್ವಮನುಭವಿತುಂ ಶಕ್ನುಯಾತ್ । ಯಸ್ತು ನ ಶಕ್ನೋತಿ ತಂ ಪ್ರತ್ಯುಪಯುಜ್ಯೇತ ಏವಾವೃತ್ತಿಃ ಬ್ರ॥ ೪-೧-೨] ಎಂದೂ ಭಾಷ್ಯಕಾರರು ಸ್ಪಷ್ಟವಾಗಿ ಹೇಳಿರುತ್ತಾರೆ. ಆದ್ದರಿಂದ **ಯೋಗವೂ ತಿಳಿಯುವದಕ್ಕೇ ಸಾಧನ; ತಿಳಿದ ಮೇಲೂ ಅದರಿಂದ ಕಂಡುಕೊಳ್ಳಬೇಕಾದ ತತ್ತ್ವವೇನೂ ಉಳಿದಿರುವದಿಲ್ಲ.**

ಯೋಗವೆಂದರೆ ವಿಷಯಗಳಲ್ಲಿ ನೆಟ್ಟಿರುವ ಮನಸ್ಸನ್ನು ತೆಗೆದು ಆತ್ಮನಲ್ಲಿಡುವದು [ವಿಷಯೇಭ್ಯಃ ಪ್ರತಿಸಂಹೃತ್ಯ ಚೇತಸ ಆತ್ಮನಿ ಸಮಾಧಾನಮ್' ೧-೨-೧೨] ಹೊರಗಿನ ಮತ್ತು ಒಳಗಿನ ಕರಣಗಳನ್ನೆಲ್ಲ ಬಿಗಿಹಿಡಿದು ಸ್ಥಿರವಾಗಿಟ್ಟುಕೊಂಡಿರುವದರಿಂದ ಈ ಅವಸ್ಥೆಯಲ್ಲಿ ಆತ್ಮನು ಅವಿದ್ಯೆಯಿಂದಾದ ಆರೋಪವಿಲ್ಲದ ತನ್ನ ನಿಜವಾದ ಸ್ವರೂಪದಲ್ಲಿ ಇರುತ್ತಿರುವನು [ಅವಿದ್ಯಾಧ್ಯಾರೋಪಣವರ್ಜಿತಸ್ವರೂಪಪ್ರತಿಷ್ಠ ಆತ್ಮಾ ೨-೩-೧೧]. ಆದ್ದರಿಂದ ಆತ್ಮನು ಇದ್ದಾನೆಂದು ಮೊದಲು ತಿಳಿದಾತನಿಗೆ ಸಮಾಧಿಯಲ್ಲಿ ಕಾಣುವ ಯಾವ ಉಪಾಧಿಯೂ ಇಲ್ಲದ ನಿಜವಾದ ಸ್ವರೂಪವೂ ಗೊತ್ತಾಗುವದು. [ನಿರುಪಾಧಿಕಸ್ಯಾಲಿಂಗಸ್ಯ ಸದಸದಾದಿಪ್ರತ್ಯಯವಿಷಯತ್ವವರ್ಜಿತಸ್ಯಾತ್ಮನಸ್ತತ್ತ್ವಭಾವೋ ಭವತಿ ೨-೩-೧೪] ಸಮಾಧ್ಯವಸ್ಥೆಯಲ್ಲಿ ಅವಿದ್ಯೆಯಿರುವದಿಲ್ಲವೆಂತಲೂ ಸುಷುಪ್ತಿಯಲ್ಲಿ ಇರುವದೆಂತಲೂ ಭಾಷ್ಯಕಾರರ ಮತವೆಂದು ಈಗಿನ ಕೆಲವರು ಭಾವಿಸುತ್ತಾರೆ. ಇದಕ್ಕೆ ಆಧಾರವು ಎಲ್ಲಿಯೂ ಇಲ್ಲ. ಏಕಾಗ್ರತೆಯಿಂದ ನೋಡಿದ ಹೊರತು ಆತ್ಮನ ಸ್ವರೂಪವು ಗೊತ್ತಾಗುವದಿಲ್ಲವಾದ್ದರಿಂದ ಏಕಾಗ್ರತೆಯಿಂದ ನೋಡುವದಕ್ಕಾಗಿ ಯೋಗವನ್ನು ಅಭ್ಯಾಸಮಾಡಬೇಕು- ಎಂಬುದೇ ಇಲ್ಲಿ ಗ್ರಹಿಸತಕ್ಕದ್ದು. ಸ್ವಭಾವವಾಗಿಯೇ ಏಕಾಗ್ರತೆ ಇರುವವರು ಇದನ್ನು ಅಭ್ಯಾಸಮಾಡಬೇಕಾದದ್ದು ಏನೂ ಇಲ್ಲವೆಂಬುದು ಸ್ಪಷ್ಟವಾಗಿಯೇ ಇದೆ

## ೫. ಜ್ಞಾನದಿಂದಾಗುವ ಮುಕ್ತಿ

ಮುಕ್ತಿಯು ಎರಡು ಬಗೆ. ಸಗುಣಬ್ರಹ್ಮವನ್ನು ಉಪಾಸನೆಮಾಡುವವರು ಮರಣ ಕಾಲದಲ್ಲಿ ಸುಷುಮ್ನೆ ಎಂಬ ನಾಡಿಯ ಮಾರ್ಗದಿಂದ ಹೃದಯಕ್ಕೆ ಮನಸ್ಸನ್ನು ತಂದು ಅಲ್ಲಿ ಅದನ್ನು ಸ್ಥಿರವಾಗಿಟ್ಟು ಧ್ಯಾನಮಾಡುತ್ತಾ ಇದ್ದರೆ ಅವರಿಗೆ ಅರ್ಚಿರಾದಿಮಾರ್ಗದಿಂದ ಬ್ರಹ್ಮಲೋಕಪ್ರಾಪ್ತಿಯಾಗುವದೆಂದೂ ಅಲ್ಲಿ ಜ್ಞಾನವಾಗಿ ಕಲ್ಪಾಂತದಲ್ಲಿ ಮುಖ್ಯವಾದ ಮುಕ್ತಿಯೇ ಆಗುವದೆಂದೂ ಶಾಸ್ತ್ರದಲ್ಲಿ ಹೇಳಿರುತ್ತದೆ. (೨-೩-೧೬). ಉಪಾಸಕರಿಗೆ ಆಗುವ ಈ ಮುಕ್ತಿಯು **'ಕ್ರಮಮುಕ್ತಿ'** ಯೆನಿಸುವದು. ಆದರೆ ಈ ಗತಿಯು ದೊರೆ

ಯುವದು ಬಲುಕಷ್ಟವೆಂದೂ ಇಲ್ಲಿಯೇ ಜ್ಞಾನದಿಂದ ಮುಕ್ತಿಯನ್ನು ಪಡೆಯಬೇಕೆಂದೂ ಈ ಉಪನಿಷತ್ತಿನಲ್ಲಿ (೨-೩-೪, ೫) ತಿಳಿಸಿರುತ್ತದೆ. ಜ್ಞಾನವನ್ನು ಸಂಪಾದಿಸಿ ಅದರಿಂದ ಕೂಡಲೆ ಹೊಂದುವ ಮುಕ್ತಿಗೆ **'ಸದ್ಯೋಮುಕ್ತಿ'** ಎಂದು ಹೆಸರು. ಸದ್ಯೋಮುಕ್ತಿಯೇ ಮುಖ್ಯವಾದದ್ದೆಂದು ಆಚಾರ್ಯರು (೨-೨-೧, ೨,೩-೮ ೨-೩-೧೪, ೨-೩-೧೫) ಈ ಉಪನಿಷತ್ತಿನ ಭಾಷ್ಯದಲ್ಲಿ ಮತ್ತೆ ಮತ್ತೆ ಹೇಳಿರುತ್ತಾರೆ.

ಹೀಗಿದ್ದರೂ ಈಗಿನ ಕೆಲವರು ಜ್ಞಾನಿಗೂ ಸ್ವಲ್ಪ ಅವಿದ್ಯೆಯಿರುವದೆಂದೂ ಆದ್ದರಿಂದ ಜೀವನ್ಮುಕ್ತಿಯು ಗೌಣವೆಂದೂ ಶರೀರವು ಬಿದ್ದುಹೋದ ಮೇಲೆ ಆಗುವ ವಿದೇಹಮುಕ್ತಿಯೇ ಮುಖ್ಯವಾದದ್ದೆಂದೂ ಹೇಳುತ್ತಿರುವರು. ಇನ್ನು ಕೆಲವರು ಜೀವನ್ಮುಕ್ತಿಯೆಂಬುದೇ ಇಲ್ಲವೆಂತಲೂ ಜ್ಞಾನವಾದ ಮೇಲೆ ದೇಹವು ಬಿದ್ದುಹೋಗುವದೇ ಹೊರತು, ಒಂದು ಗಳಿಗೆಯೂ ನಿಲ್ಲುವದಿಲ್ಲವೆಂತಲೂ ಹೇಳುತ್ತಿರುವರು. ಆತ್ಮನಿಗೆ ಪರಮಾರ್ಥದೃಷ್ಟಿಯಿಂದಲೂ ದೇಹವಿರುವದೆಂದು ಈ ವಾದಿಗಳು ಇಟ್ಟುಕೊಂಡಿರಬೇಕೆಂದು ತೋರುತ್ತದೆ; ಏಕೆಂದರೆ ಹಾಗಿಟ್ಟುಕೊಳ್ಳದವರಿಗೆ ಈ ವಾದವಿವಾದಗಳ ಆವಶ್ಯಕತೆಯೇ ಇರುವದಿಲ್ಲ. ಆದರೆ ದೇಹಾದಿಗಳನ್ನು ಪರಮಾರ್ಥವೆಂದು ಅಂಗೀಕರಿಸಿದರೆ ಸಾಂಖ್ಯಕ್ಕೂ ವೇದಾಂತಕ್ಕೂ ಯಾವ ಭೇದವೂ ಇಲ್ಲದೆ ಹೋಗುವದೆಂಬುದನ್ನು ಈ ವಾದಿಗಳು ನೆನಪಿಡದೆ ಇದ್ದದ್ದು ಆಶ್ಚರ್ಯಕರವಾಗಿದೆ.

## ಈ ಉಪನಿಷತ್ತಿನ ಟೀಕಾಕಾರರು

ಈ ಉಪನಿಷತ್ತಿಗೆ **'ಆನಂದಜ್ಞಾನ'** (ಪ್ರಸಿದ್ಧರಾದ 'ಆನಂದಗಿರಿ') **'ಬಾಲಗೋಪಾಲೇಂದ್ರಯತೀಶ್ವರ'**– ಎಂಬ ಇಬ್ಬರು ವ್ಯಾಖ್ಯಾನವನ್ನು ಬರೆದಿರುತ್ತಾರೆ. ಇದರಲ್ಲಿ 'ಆನಂದಜ್ಞಾನ'– ಎಂಬವರು ಮುಂಡಕೋಪನಿಷತ್ತಿಗೆ ವ್ಯಾಖ್ಯಾನವನ್ನು ಬರೆದವರೇ ಎಂದು ತೋರುತ್ತದೆ. ಏಕೆಂದರೆ ಈ ಎರಡು ವ್ಯಾಖ್ಯಾನಗಳಲ್ಲಿಯೂ "ಪ್ರಕಟಾರ್ಥ"ವೆಂಬ ವೇದಾಂತಗ್ರಂಥವನ್ನು ಪ್ರಮಾಣವಾಗಿ ಬರೆದಿರುತ್ತದೆ, ಭಾಸ್ಕರಾಚಾರ್ಯರ ಮತವನ್ನು ಎರಡರಲ್ಲಿಯೂ ಖಂಡಿಸಿರುತ್ತದೆ. ಇದು ನಿಜವಾದರೆ ಈ ಎರಡು ಉಪನಿಷತ್ತುಗಳಿಗೂ ವ್ಯಾಖ್ಯಾನವನ್ನು ಬರೆದವರು ಬೃಹದಾರಣ್ಯಕೋಪನಿಷತ್ತಿಗೂ ಬ್ರಹ್ಮಸೂತ್ರಕ್ಕೂ ವ್ಯಾಖ್ಯಾನವನ್ನು ಬರೆದು ಪ್ರಸಿದ್ಧರಾಗಿರುವ ಆನಂದಗಿರಿಗಳಲ್ಲವೆಂದು ಹೇಳಬೇಕಾಗಿದೆ. ಏಕೆಂದರೆ ಬೃಹದಾರಣ್ಯಕದ ವ್ಯಾಖ್ಯಾನಕಾರರು ಏಕಜೀವವಾದಿಗಳು; ಮುಂಡಕೋಪನಿಷತ್ತಿನ (ಮತ್ತು ಕಠೋಪನಿಷತ್ತಿನ) ವ್ಯಾಖ್ಯಾನಕಾರರು ನಾನಾಜೀವವಾದಿಗಳು. ಭಾಷ್ಯಕಾರರ ಗ್ರಂಥಗಳಲ್ಲಿ ಏಕಜೀವವಾದನಾನಾಜೀವವಾದ

ಗಳ ಗಡಿಬಿಡಿಯೇನೂ ಕಂಡುಬರುವದಿಲ್ಲ; ಇದು ಆವರಿಂದೀಚೆಗೆ ವೇದಾಂತಿಗಳಲ್ಲಿ ಉಂಟಾದ ಚರ್ಚೆಗೆ ಸೇರಿದ ಪ್ರಶ್ನೆಯಾಗಿರುತ್ತದೆ. ಆನಂದಗಿರಿಯವರು ಶ್ರೀಶಂಕರಾಚಾರ್ಯರಿಗಿಂತ ಬಹಳ ಈಚಿನವರಾದ್ದರಿಂದ ಇವರು ತಮ್ಮ ವ್ಯಾಖ್ಯಾನಗಳಲ್ಲಿ ಹೊಸ ವೇದಾಂತಿಗಳ ವಾದಗಳನ್ನು ಬಹು ಕಡೆಗಳಲ್ಲಿ ಅನುಸರಿಸಿರುತ್ತಾರೆ. ಬಾಲಗೋಪಾಲೇಂದ್ರಯತೀಶ್ವರರು ಆನಂದಗಿರಿಗಳ ವ್ಯಾಖ್ಯಾನದ ಮಾತುಗಳನ್ನೂ ಸೇರಿಸಿ ಅದೇ ಕ್ರಮದಲ್ಲಿ ಇನ್ನೂ ವಿಸ್ತಾರವಾಗಿ ವ್ಯಾಖ್ಯಾನವನ್ನು ಮಾಡಿರುತ್ತಾರೆ. ಈ ವ್ಯಾಖ್ಯಾನಕಾರರ ವಿವರಣೆಗಳು ಭಾಷ್ಯದ ಅಭಿಪ್ರಾಯಕ್ಕೆ ಬಿಡುವ ಹಾಗೆ ನನಗೆ ತೋರಿದ ಕಡೆಗಳಲ್ಲೆಲ್ಲ ಟಿಪ್ಪಣಿಯಲ್ಲಿ ಅರ್ಥಭೇದಗಳನ್ನು ತಿಳಿಸಿರುತ್ತೇನೆ.

ಮುಖ್ಯವಾಗಿ ಈ ವ್ಯಾಖ್ಯಾನಕಾರರು ಎರಡನೆಯ ಅಧ್ಯಾಯದ ಎರಡನೆಯ ವಲ್ಲಿಯಲ್ಲಿ (೧೨ ರಿಂದ ೧೫ರವರೆಗಿನ) ನಾಲ್ಕು ಮಂತ್ರಗಳ ತಾತ್ಪರ್ಯವನ್ನು ತೆಗೆದಿರುವ ಕ್ರಮವು ಅಷ್ಟು ತೃಪ್ತಿಕರವಾಗಿರುವದಿಲ್ಲ. ಶುದ್ಧನಾದ ಸರ್ವಾತ್ಮನೇ ತಾನೆಂದು ತಿಳಿದುಕೊಳ್ಳಬೇಕೆಂಬುದೂ ಆತ್ಮವಸ್ತುವು ಸ್ವಪ್ರಕಾಶವಾದ್ದರಿಂದ ಅದು ನನಗೆ ಗೋಚರವಾಗುವದು ಹೇಗೆ? ಎಂಬ ಸಂದೇಹಕ್ಕೆ ಕಾರಣವೇ ಇಲ್ಲವೆಂಬುದೂ ಈ ಮಂತ್ರಗಳ ಮುಖ್ಯತಾತ್ಪರ್ಯವಾಗಿರುತ್ತದೆ. ಆದರೆ 'ಪರಮಾತ್ಮಪ್ರಾಪ್ತಿಯಿಂದ ಪ್ರಯೋಜನವುಂಟು, ಜ್ಞಾನಿಗಳ ಅನುಭವವು ಈ ಪ್ರಯೋಜನವಿದೆಯೆಂಬುದಕ್ಕೆ ಪ್ರಮಾಣವು, ಅದ್ದರಿಂದ ಪರಮಾತ್ಮನೊಬ್ಬನು ಇದ್ದಾನೆಂದು ತಿಳಿಯಬೇಕು'– ಎಂಬುದೇ ಇವುಗಳ ತಾತ್ಪರ್ಯವೆಂದು ವ್ಯಾಖ್ಯಾನಕಾರರು ಬರೆದಿರುತ್ತಾರೆ.

## ಉಪಸಂಹಾರ

ಉಪನಿಷತ್ತುಗಳ ಉಪದೇಶವನ್ನೂ ಶ್ರೀಶಂಕರಾಚಾರ್ಯರವರು ಅವಕ್ಕೆ ಮಾಡಿರುವ ಭಾಷ್ಯಗಳ ಗಂಭೀರವಾದ ಆಶಯವನ್ನೂ ಹೊರಪಡಿಸುವದು– ವಿಚಾರಕರೆಲ್ಲರ ಕರ್ತವ್ಯವಾಗಿರುತ್ತದೆ. ನನ್ನ ಕೈಲಾದನುಟ್ಟಿಗೆ ಈ ಕಾರ್ಯವನ್ನು ನೆರವೇರಿಸಬೇಕೆಂದು ಪ್ರಾರಂಭಿಸಿ ಇದುವರೆಗೆ ಈಶಾವಾಸ್ಯ, ಮುಂಡಕ, ಮಾಂಡೂಕ್ಯ– ಇಷ್ಟು ಉಪನಿಷತ್ತುಗಳನ್ನು ಭಾಷ್ಯಸಮೇತವಾಗಿ ಕನ್ನಡದಲ್ಲಿ ಪರಿವರ್ತಿಸಿದ್ದೆನು. **ಈಗ ಒಬ್ಬ ಮಹನೀಯರ ಪ್ರೋತ್ಸಾಹದಿಂದ ಕಠೋಪನಿಷತ್ತನ್ನು ಹೊರಕ್ಕೆ ತಂದಿದ್ದೇನೆ.** ಹಿಂದಿನ ಉಪನಿಷತ್ತುಗಳ ಹಾಗೆಯೆ, ಇದಕ್ಕೂ ಟಿಪ್ಪಣಿ, ಸಾರಾಂಶ, ಶಬ್ದಾನುಕ್ರಮಣಿಕೆ– ಮುಂತಾದವುಗಳನ್ನು ಸೇರಿಸಿರುತ್ತೇನೆ. ಇದರ ಪ್ರಕಟನೆಗೆ ಮನಃಪೂರ್ವಕವಾಗಿ ಸಹಾಯಮಾಡಿ ತಮ್ಮ ಹೆಸರನ್ನು ಎಲ್ಲಿಯೂ ಪ್ರಕಟಿಸಬಾರದೆಂದು ನನಗೆ ಆಶ್ರಯದಾತರು

ತಿಳಿಸಿರುವದರಿಂದ ಇವರು ಮಾಡಿರುವ ಧನಸಹಾಯದ ಬೆಲೆಯು ಮತ್ತಷ್ಟು ಹೆಚ್ಚಿರುತ್ತದೆ.

ದ್ರವ್ಯದ ಅನುಕೂಲವಿಲ್ಲದೆ ನಾನು ಅಖಿಲ ಭಕ್ತಿಯಿಂದ ಮಾಡುತ್ತಿದ್ದ ಸೇವೆಗೆ ಉದಾರರಾದ ಈ ದಾತೃವರ್ಯರನ್ನು ಪ್ರೇರಿಸಿದ ಶ್ರೀಮದಾಚಾರ್ಯರು ವೇದಾಂತಜ್ಞಾನಕ್ಕೆ ಅತ್ಯವಶ್ಯವಾದ ಸಾಧನಚತುಷ್ಟಯಗಳನ್ನು ಅನುಗ್ರಹಿಸುವದರ ಮೂಲಕ ಈ ಮಹನೀಯರ ಉತ್ತಮಸಂಕಲ್ಪವನ್ನು ನೆರವೇರಿಸಿಕೊಟ್ಟು ಇವರಿಗೂ ಇವರ ವಂಶಿಕರಿಗೂ ಪರಬ್ರಹ್ಮಪ್ರಾಪ್ತಿಗೆ ದಾರಿಯನ್ನುಂಟುಮಾಡಿಕೊಡಲೆಂದು ಮನಃಪೂರ್ವಕವಾಗಿ ಪ್ರಾರ್ಥಿಸಿ ಈ ಪೀಠಿಕೆಯನ್ನು ಇಲ್ಲಿಗೆ ಮುಗಿಸುತ್ತೇನೆ

ಪ್ರಮೋದೂತ, ಆಷಾಢ, ಬ|| ಸಪ್ತಮಿ
ಬೆಂಗಳೂರು ಸಿಟಿ

**ಗ್ರಂಥಕರ್ತ.**

——o——

# ವಾಚಕರಿಗೆ

ಈ ಅನುವಾದದಲ್ಲಿ

(೧) ದಪ್ಪಕ್ಷರದಲ್ಲಿ ಬರೆದಿರುವ ತಲೆಬರಹ( 'ಹೆಡ್ಡಿಂಗ್' )ಗಳು ಅನುವಾದಕರು ಹೊಸದಾಗಿ ಸೇರಿಸಿದವುಗಳಾಗಿವೆ. ಭಾಷ್ಯದಲ್ಲಿ ಮಹಾವಾಕ್ಯ( 'ಪ್ಯಾರಾ' )ಗಳನ್ನು ಅರ್ಥಕ್ಕನುಸಾರವಾಗಿ ವಿಂಗಡಿಸಿದೆ. ಸಂಸ್ಕೃತಮುದ್ರಣಕ್ಕೂ ಈ ಅನುವಾದಕ್ಕೂ ಅಲ್ಲಲ್ಲಿ ಈ ವಿಷಯದಲ್ಲಿ ಹೆಚ್ಚುಕಡಿಮೆಯು ಕಂಡುಬರಬಹುದು.

(೨) ಭಾಷ್ಯದಲ್ಲಿ ಮುಖ್ಯವಾದ ಅಥವಾ ವಾದಾಸ್ಪದವಾದ ವಿಷಯಗಳನ್ನು ತಿಳಿಸುವ ವಾಕ್ಯಗಳನ್ನೂ ಸಂಕೇತನಾಮಗಳನ್ನೂ ಹೆಚ್ಚು ಕಪ್ಪಕ್ಷರ (antique)ದಲ್ಲಿ ಅಚ್ಚುಮಾಡಿಸಿದೆ

(೩) ಮೂಲದಲ್ಲಿಲ್ಲದೆ ಇದ್ದರೂ ಅರ್ಥಕ್ಕೆ ಬೇಕಾಗುವಂತೆ ಸೇರಿಸಿದ ಮಾತುಗಳನ್ನು ದುಂಡುಕಂಸದಲ್ಲಿ ( ) ಹೀಗೆ ತೋರಿಸಿರುತ್ತವೆ.

(೪) ಭಾಷ್ಯದ ಯಾವ ಮಾತಿನ ಪರಿವರ್ತನೆಯಿರಬಹುದೆಂಬ ಸಂಶಯವು ಬರಬಹುದಾದ ಕಡೆಗಳಲ್ಲಿ ಚೌಕಕಂಸಗಳಲ್ಲಿ [ ] ಹೀಗೆ ಆ ಸಂಸ್ಕೃತಮಾತುಗಳನ್ನು ಮುಂದುಗಡೆಯಲ್ಲಿ ತೋರಿಸಿರುತ್ತದೆ

(೫) ಈ ಉಪನಿಷತ್ತಿನ ವಲ್ಲಿಗಳ ವಿಂಗಡವನ್ನು ಕೊಡುವಾಗ ಆನಂದಾಶ್ರಮಮುದ್ರಣದ ವಿಭಾಗವನ್ನು ಇಟ್ಟುಕೊಂಡಿದೆ ಉದಾ· ೨-೩-೧ ಎಂದಿದ್ದರೆ ೨ನೆಯ ಅಧ್ಯಾಯ ೩ನೆಯ ವಲ್ಲಿ, ೧ನೆಯ ಮಂತ್ರ ಎಂದು ಓದಿಕೊಳ್ಳಬೇಕು. ಕೆಲವು ಮುದ್ರಣಗಳಲ್ಲಿ ವಲ್ಲಿಗಳನ್ನೆಲ್ಲ ಸೇರಿಸಿ ೧ರಿಂದ ೬ವಲ್ಲಿಗಳೆಂತ ಲೆಕ್ಕಮಾಡಿರುತ್ತದೆ ಆದ್ದರಿಂದ ಅವುಗಳಲ್ಲಿರುವ ೫ನೆಯ ವಲ್ಲಿಯೆಂದರೆ ಇಲ್ಲಿ ೨ನೆಯ ಅಧ್ಯಾಯದ ೨ನೆಯ ವಲ್ಲಿಯಾಗುವದು ಹೀಗೆಯೇ ಮಿಕ್ಕದ್ದನ್ನು ತಿಳಿಯಬೇಕು.

(೬) ಸಂಕೇತಾಕ್ಷರಗಳು ಸಾಮಾನ್ಯವಾಗಿ ಆಯಾ ಮಾತಿನ ಮೊದಲಕ್ಷರವಾಗಿವೆ. ಉದಾಹರಣೆಗೆ: ಬೃ = ಬೃಹದಾರಣ್ಯಕ, ಬ್ರ|| ಸೂ|| = ಬ್ರಹ್ಮಸೂತ್ರ, ಆ = ಆನಂದಗಿರಿವ್ಯಾಖ್ಯಾ, ಗೋ = ಬಾಲಗೋಪಾಲೇಂದ್ರಯತೀಶ್ವರವ್ಯಾಖ್ಯಾ. ಉಪನಿಷತ್ತುಗಳು, ಗೀತೆ, ಬ್ರಹ್ಮಸೂತ್ರ– ಇವುಗಳ ಹೆಸರಿನಲ್ಲಿ ಆಯಾ ಭಾಷ್ಯವನ್ನೂ ಅಡಕಮಾಡಿರುತ್ತದೆ.

——o——

ॐ

ಶ್ರೀ ಶಾಂಕರ ಭಾಷ್ಯಸಮೇತವಾದ

# ಕಾಠಕೋಪನಿಷತ್ತು

---

## ಭಾಷ್ಯಕಾರರ ಅವತರಣಿಕೆ

ಓಂ. ಭಗವಂತನೂ* ವಿವಸ್ವಂತನ ಮಗನೂ† ಬ್ರಹ್ಮವಿದ್ಯಾಚಾರ್ಯನೂ‡ ಆದ ಮೃತ್ಯುವಿಗೂ§ ನಚಿಕೇತಸ್ಸಿಗೂ ನಮಸ್ಕಾರವು.

* ಉತ್ಪತ್ತಿಂ ಚ ವಿನಾಶಂ ಚ ಭೂತಾನಾಮಾಗತಿಂ ಗತಿಂ । ವೇತ್ತಿ ವಿದ್ಯಾಮವಿದ್ಯಾಂ ಚ ಸ ವಾಚ್ಯೋ ಭಗವಾನಿತಿ ॥ (ಪ್ರಾಣಿಗಳ ಉತ್ಪತ್ತಿಯನ್ನೂ ಪ್ರಲಯವನ್ನೂ, ಆಗುಹೋಗುಗಳನ್ನೂ, ವಿದ್ಯೆಯನ್ನೂ ಅವಿದ್ಯೆಯನ್ನೂ ಅರಿತಿರುವವನನ್ನು ಭಗವಂತನೆನ್ನಬೇಕು) ಎಂದು ವಿಷ್ಣುಪುರಾಣ ವಾಕ್ಯ (೬-೫-೭೮)

† ಸೂರ್ಯನ ಮಗನು ಸೂರ್ಯನು ಬ್ರಹ್ಮವಿದ್ಯೆಯನ್ನು ಮನುವಿಗೆ ಹೇಳಿದನೆಂದು ಗೀತೆಯಲ್ಲಿದೆ (೪-೧)

‡ “ಬ್ರಹ್ಮವಿದ್ಯಾಚಾರ್ಯ” ಎಂಬ ವಿಶೇಷಣವನ್ನು ಹಿಂದಕ್ಕೆ ಅನ್ವಯಿಸಿದರೆ ಮೃತ್ಯುವಿಗೂ ಮುಂದಕ್ಕೆ ಅನ್ವಯಿಸಿದರೆ ನಚಿಕೇತಸ್ಸಿಗೂ ಹೊಂದುವ ಹಾಗೆ ಇವೆರಡು ಮಾತುಗಳ ನಡುವ ಆಚಾರ್ಯರು ಇಟ್ಟಿರುತ್ತಾರೆ ಉಪನಿಷತ್ತಿನಲ್ಲಿ ಮೃತ್ಯುವೇ ಬ್ರಹ್ಮವಿದ್ಯೆಯ ಆಚಾರ್ಯನಾಗಿರುವನು ನಚಿಕೇತಸ್ಸು ಯಮನಿಂದ ಈ ವಿದ್ಯೆಯನ್ನು ಪಡೆದು ಭೂಲೋಕಕ್ಕೆ ಬಂದು ತಾನೂ ಇಲ್ಲಿ ಆಚಾರ್ಯನಾದನು- ಎಂಬ ಅರ್ಥವನ್ನು ಸೂಚಿಸುವದಕ್ಕಾಗಿ “ನಚಿಕೇತಸ್ಸು” ಎಂಬ ಮಾತಿನ ಹಿಂದೆ ಈ ವಿಶೇಷಣವನ್ನು ಹಾಕಿ (ಮೃತ್ಯವೇ ಬ್ರಹ್ಮವಿದ್ಯಾಚಾರ್ಯಾಯ ನಚಿಕೇತಸೇ ಚ ಎಂದು) ಬರೆದಿರಬಹುದು

§ ಯಮನಿಗೂ ಯಮನು ಜ್ಞಾನಿಯಾದರೂ ಅಧಿಕಾರಪುರುಷನಾದದ್ದರಿಂದ ತನ್ನ ಅಧಿಕಾರವು ಇರುವವರೆಗೆ ಲೋಕಸಂಗ್ರಹಕ್ಕಾಗಿ ಆ ಕೆಲಸವನ್ನು ಮಾಡುತ್ತಿರುವನು ಎಂದು (ಆ॥) ವ್ಯಾಖ್ಯಾನಕಾರರು ಬರೆದಿರುತ್ತಾರೆ

## ಉಪನಿಷತ್ತೆಂದರೆ ಏನು?

ಈಗ ಕಾರಕೋಪನಿಷತ್ತಿನ* ವಲ್ಲಿಗಳಿಗೆ† ಸುಲಭವಾಗಿ ಅರ್ಥವು ತಿಳಿಯಲೆಂದು ಸ್ವಲ್ಪ ಗ್ರಂಥದ ‡**ವೃತ್ತಿ**ಯನ್ನು ಆರಂಭಿಸಿರುತ್ತೇವೆ. (೧) ಹಿಂಸೆಮಾಡುವದು (೨) ಪಡೆಯುವದು (೩) ಸಡಿಲಮಾಡುವದು- ಎಂಬ ಅರ್ಥಗಳುಳ್ಳ 'ಸದ್' ಧಾತುವಿಗೆ ಹಿಂದೆ 'ಉಪ', 'ನಿ'- ಎಂಬ ಉಪಸರ್ಗಗಳೂ ಮುಂದೆ ಕ್ವಿಪ್ ಪ್ರತ್ಯಯವೂ§ ಬಂದು 'ಉಪನಿಷದ್' ಎಂಬ ರೂಪವಾಗಿರುತ್ತದೆ. ಮತ್ತು (ಈ) 'ಉಪನಿಷತ್ತು' ಎಂಬ ಶಬ್ದದಿಂದ– ನಾವು ವ್ಯಾಖ್ಯಾನಮಾಡಬೇಕೆಂದಿರುವ (ಈ) ಗ್ರಂಥದಲ್ಲಿ ಹೇಳಿರುವದಾಗಿಯೂ (ಮುಮುಕ್ಷುಗಳು) ತಿಳಿಯಬೇಕಾದದ್ದಾಗಿಯೂ ಇರುವ ವಸ್ತುವಿನ|| ವಿಷಯವಾದ– ವಿದ್ಯೆಯು ಹೇಳಲ್ಪಡುವದು.

ಹಾಗಾದರೆ ಉಪನಿಷತ್ತು ಎಂಬ ಶಬ್ದಕ್ಕೆ ಯಾವ ಅರ್ಥದ ಯೋಗದಿಂದ** ವಿದ್ಯೆಯೆಂಬ ಅರ್ಥವಾಗಿರುತ್ತದೆ?

ಇದಕ್ಕೆ (ಉತ್ತರವನ್ನು) ಹೇಳುತ್ತೇವೆ (ಕೇಳಿರಿ): ಯಾವ ಮುಮುಕ್ಷುಗಳು (ಈ ಲೋಕದಲ್ಲಿ) ಕಂಡಿರುವವುಗಳಾಗಿಯೂ (ಪರಲೋಕದಲ್ಲಿನೆಯೆಂದು) ಶ್ರುತಿ

* ಕೃಷ್ಣಯಜುರ್ವೇದದಲ್ಲಿ ಕಾರಕವೆಂಬುವೊಂದು ಶಾಖೆಯುಂಟು ಈ ಉಪನಿಷತ್ತು ಅದಕ್ಕೆ ಸೇರಿದ್ದು ಎಂದು ಹೇಳುತ್ತಾರೆ ಪೀಠಿಕೆಯನ್ನು ನೋಡಿ

† ಈ ಉಪನಿಷತ್ತಿನ ಅಧ್ಯಾಯದ ಭಾಗಗಳಿಗೆ ವಲ್ಲಿಗಳೆಂದು ಹೆಸರು.

‡ ಭರ್ತೃಪ್ರಪಂಚರೇ ಮುಂತಾದವರು ವ್ಯಾಖ್ಯಾನವನ್ನು ಬರೆದಿರುತ್ತಾರಾದರೂ ಅವರ ಗ್ರಂಥವು ದೊಡ್ಡದು, ಅಲ್ಲಿ ಅರ್ಥವೂ ಸರಿಯಾಗಿ ತಿಳಿಯುವ ಹಾಗಿಲ್ಲ– ಎಂದು ಭಾವ ವೃತ್ತಿಯೆಂಬ ಮಾತನ್ನು ಭಾಷ್ಯ ಎಂಬ ಅರ್ಥದಲ್ಲಿಯೆ ಹಿಂದಕ್ಕೆ ಉಪಯೋಗಿಸುತ್ತಿದ್ದಂತೆ ತೋರುತ್ತದೆ ಪೀಠಿಕೆಯನ್ನು ನೋಡಿ.

§ ಕ್ವಿಪ್ ಎಂಬ ಪ್ರತ್ಯಯವು ಬಂದು ಲೋಪವಾಗಿದೆ ಉಪ+ನಿ+ಸದ್+ಕ್ವಿಪ್ = ಉಪನಿಷದ್.

|| ಬ್ರಹ್ಮವಸ್ತುವಿನ

** ರೂಢಿಯೆಂದೂ ಯೋಗವೆಂದೂ ಅರ್ಥವು ಎರಡು ವಿಧವಾಗಿರುವದು. ಉದಾಹರಣೆಗೆ ಕಲ್ಲು, ಮಣ್ಣು- ಮುಂತಾದ ಮಾತುಗಳು ರೂಢಿಯಿಂದ ಆಯಾ ವಸ್ತುವನ್ನು ಹೇಳುತ್ತವೆ. ಎಳನೀರು, ಒಡನಾಡಿ- ಮುಂತಾದ ಅವಯವಾರ್ಥವುಳ್ಳ ಮಾತುಗಳು ಯೋಗಾರ್ಥವುಳ್ಳ ಮಾತುಗಳು ಇಲ್ಲಿ ಉಪನಿಷತ್ತು ಎಂಬ ಮಾತಿಗೆ ಯಾವ ಅರ್ಥದ ಯೋಗ ? ಎಂದರೆ ಉಪನಿಷತ್ತು ಎಂಬುದರ ಅವಯವಾರ್ಥವೇನು ? ಎಂದು ಪ್ರಶ್ನೆ

ಯಲ್ಲಿ (ಹೇಳಿ)ರುವವುಗಳಾಗಿಯೂ ಇರುವ ವಿಷಯಗಳಲ್ಲಿ ಬಯಕೆಯಿಲ್ಲದೆ* ಉಪನಿಷತ್ತು ಎಂಬ ಶಬ್ದಕ್ಕೆ ವಾಚ್ಯವಾದ ಮುಂದೆ ಹೇಳುವಂಥ ವಿದ್ಯೆಯನ್ನೂ (ಅದರ) ಹತ್ತಿರಕ್ಕೆ ಬಂದು ('ಉಪ'), ಅದರಲ್ಲಿಯೇ ತಾತ್ಪರ್ಯವುಳ್ಳವರಾಗಿ ನಿಶ್ಚಯದಿಂದ† ('ನಿ'), ಪರಿಶೀಲಿಸುವರೋ‡ ಅವರ ಸಂಸಾರಕ್ಕೆ ಬೀಜವಾದ§ ಅವಿದ್ಯೆ- ಮುಂತಾದ್ದನ್ನು|| ವಿಶರಣಮಾಡಿ ('ಸದ್') ಎಂದರೆ ಹಿಂಸೆಮಾಡಿ ಚೆನ್ನಾಗಿ ನಾಶಮಾಡುವದು- ಹೀಗೆಂಬ ಅರ್ಥದ ಯೋಗದಿಂದ ವಿದ್ಯೆಯು ಉಪನಿಷತ್ತೆಂದು ಕರೆಯಲ್ಪಡುವದು. ಆದ್ದರಿಂದಲೇ ಮುಂದೆ (ಶ್ರುತಿಯಲ್ಲಿ)"ಅವನನ್ನು ತಿಳಿದರೆ ಮೃತ್ಯುವಿನ** ಬಾಯಿಯಿಂದ ಬಿಡುಗಡೆಹೊಂದುತ್ತಾನೆ" (೧-೩-೧೫) ಎಂದು ಹೇಳಿರುತ್ತದೆ. ಅಥವಾ ಮೇಲೆ ಹೇಳಿರುವಂಥ ಲಕ್ಷಣವುಳ್ಳ ಮುಮುಕ್ಷುಗಳನ್ನು ಹೆಚ್ಚಿನ ಬ್ರಹ್ಮವನ್ನು ಪಡೆಸುತ್ತದೆ ಎಂದು ಬ್ರಹ್ಮವನ್ನು ಪಡೆಸುವದು†† ('ಸದ್') ಎಂಬ (ಅರ್ಥದ) ಯೋಗವಿರುವದರಿಂದ ಬ್ರಹ್ಮವಿದ್ಯೆಗೆ 'ಉಪನಿಷತ್ತು' (ಎಂದು ಹೆಸರಾಗುವದು ) "ಬ್ರಹ್ಮವನ್ನು ಹೊಂದಿ ಕಲ್ಮಷವಿಲ್ಲದವನೂ ಮೃತ್ಯುವಿಲ್ಲದವನೂ ಆದನು" (೨-೩-೧೮) ಎಂದು ಇದನ್ನೂ ಮುಂದೆ (ಶ್ರುತಿಯಲ್ಲಿ) ಹೇಳಿರುತ್ತದೆ. (ಇನ್ನು) ಲೋಕಕ್ಕೆಲ್ಲ ಮೊದಲನೆಯವನಾಗಿಯೂ‡‡ ಬ್ರಹ್ಮದಿಂದ ಹುಟ್ಟಿದವನಾಗಿಯೂ ತಿಳಿಯುವಾತನಾಗಿಯೂ ಇರುವ ಅಗ್ನಿಯುಂಟಷ್ಟೆ; (ನಚಿಕೇತನು) ತನಗೆ ಎರಡನೆಯ ವರವೆಂದು ಪ್ರಾರ್ಥಿಸಿರುವ ಆ(ಅಗ್ನಿಯ)ವಿಷಯವಾದ ವಿದ್ಯೆಯು§§ ಸ್ವರ್ಗಲೋಕವೆಂಬ ಫಲವನ್ನು ಹೊಂದುವದಕ್ಕೆ ಕಾರಣವಾಗಿರುವದರಿಂದಲೂ ಅದಕ್ಕಿಂತ ಬೇರೆಯಾದ (ಭೂ)ಲೋಕದಲ್ಲ ಮತ್ತೆ ಮತ್ತೆ ಆಗುತ್ತಿರುವ ಗರ್ಭವಾಸ,

---

* ಈ ಮಾತು 'ಇಹಾಮುತ್ರ ಫಲಭೋಗ ವಿರಾಗ' ಎಂಬ ಸಾಧನವನ್ನು ಸೂಚಿಸುತ್ತದೆ.

† ಶಮಾದಿಗಳ ಸೂಚನೆ.

‡ ವಿವೇಕವೆಂಬ ಸಾಧನದ ಸೂಚನೆ.

§ ಕಾರಣವಾದ.

|| ಕಾಮಕರ್ಮಗಳನ್ನು

** ಅವಿದ್ಯಾದಿಗಳೆಂಬ ಮೃತ್ಯುವನ್ನು ವಿದ್ಯೆಯು ನಾಶಗೊಳಿಸಿ ಮುಕ್ತಿಯನ್ನು ಕೊಡುವದೆಂದು ಶ್ರುತಿಯ ಅರ್ಥ.

†† ಷದ್ಲ್- ವಿಶರಣಗತ್ಯವಸಾದನೇಷು- ಎಂದು ಈ ಧಾತುವಿಗೆ ಮೂರು ಅರ್ಥವನ್ನು ಹೇಳಿರುತ್ತಾರಷ್ಟೆ, ಹಿಂಸೆಮಾಡುವದು ['ವಿಶರಣ'] ಪಡೆಸುವದು ['ಗತಿ']- ಎಂಬ ಎರಡರ್ಥಗಳನ್ನೂ ವಿದ್ಯೆಗೆ ಹೊಂದಿಸಬಹುದು. ಏಕೆಂದರೆ ಈ ವಿದ್ಯೆಯು ಅವಿದ್ಯಾದಿಗಳನ್ನು ಹಿಂಸಿಸುತ್ತದೆ, ಮತ್ತು ಬ್ರಹ್ಮವನ್ನು ಪಡೆಸುತ್ತದೆ

‡‡ ೧-೧-೧೪, ೧-೧-೧೫ ಮಂತ್ರಗಳ ಸೂಚನೆ

§§ ಬ್ರಹ್ಮವಿದ್ಯೆಗೆ ಉಪನಿಷತ್ತು ಎಂಬ ಹೆಸರು ಒಪ್ಪುವಂತೆ ಅಗ್ನಿವಿದ್ಯೆಗೂ ಆ ಹೆಸರು ಒಪ್ಪುತ್ತದೆ; ಏಕೆಂದರೆ ಇದಕ್ಕೂ ('ಗತಿ' 'ಅವಸಾದನ' ಎಂದರೆ) ಹೊಂದಿಸುವದು, ಸಡಿಲ ಮಾಡುವದು ಎಂಬ (ಸದ್) ಧಾತುವಿನ ಅರ್ಥಗಳು ಹೊಂದುತ್ತವೆ.

ಹುಟ್ಟು, ಮುಪ್ಪು- ಮುಂತಾದ ತೊಂದರೆಗಳ ಸಮೂಹವನ್ನು ಅವಸಾದನ ಮಾಡುವದರಿಂದ ಎಂದರೆ ಸಡಿಲಮಾಡುವದರಿಂದಲೂ 'ಸದ್'' ಧಾತುವಿನ ಅರ್ಥದ ಸಂಬಂಧವು (ಅಗ್ನಿವಿದ್ಯೆಗೂ) ಇರುವದರಿಂದ ಅಗ್ನಿವಿದ್ಯೆಯು 'ಉಪನಿಷತ್ತು' ಎನಿಸುವದು. "ಸ್ವರ್ಗಲೋಕವನ್ನು ಪಡೆದವರಾಗಿ ಅಮೃತತ್ವವನ್ನು ಪಡೆಯುವರು" (೧-೧-೧೩) ಎಂದು ಮುಂತಾಗಿ ಇದನ್ನೂ ಮುಂದೆ ಹೇಳಿರುತ್ತದೆ.

(ಆಕ್ಷೇಪ) ಅಧ್ಯಯನಮಾಡುವವರು 'ಉಪನಿಷತ್ತನ್ನು ಅಧ್ಯಯನ ಮಾಡುತ್ತಿದ್ದೇವೆ', '(ಉಪನಿಷತ್ತನ್ನು) ಹೇಳಿಕೊಡುತ್ತಿದ್ದೇವೆ' ಎಂದು ಉಪನಿಷತ್ತು ಎಂಬ ಶಬ್ದದಿಂದ ಗ್ರಂಥವನ್ನೂ ಹೇಳುತ್ತಾರಲ್ಲ?

(ಪರಿಹಾರ) ಇದೇನೂ ತಪ್ಪಲ್ಲ. ಏಕೆಂದರೆ ಅವಿದ್ಯೆಯೇ ಮುಂತಾದ ಸಂಸಾರಹೇತುಗಳನ್ನು ನಾಶಮಾಡುವದೇ ಮುಂತಾದ– ಸದ್ ಧಾತುವಿನ–ಅರ್ಥವು ಬರಿಯ ಗ್ರಂಥಕ್ಕೆ ಹೊಂದುವದಿಲ್ಲ, ಮತ್ತು ವಿದ್ಯೆಗೆ ಹೊಂದುತ್ತದೆ. (ಆದ್ದರಿಂದ ವಿದ್ಯೆಯೇ ನಿಜವಾದ ಉಪನಿಷತ್ತು); (ಆ ವಿದ್ಯೆ)ಗೋಸ್ಕರ (ಹುಟ್ಟಿರುವ) ಗ್ರಂಥವೂ ಆ (ಉಪನಿಷತ್ತೆಂಬ) ಮಾತಿನಿಂದ (ಕರೆಯಲ್ಪಡುವದೆಂಬುದೂ) ಯುಕ್ತವಾಗಿದೆ. "ತುಪ್ಪವೇ ಆಯುಸ್ಸು"* ಮುಂತಾದ ಪ್ರಯೋಗಗಳಂತೆಯೇ (ಇದು). ಆದ್ದರಿಂದ ಉಪನಿಷತ್ತು ಎಂಬ ಶಬ್ದಕ್ಕೆ ವಿದ್ಯೆಯೆಂಬ ಅರ್ಥವು ಮುಖ್ಯವೃತ್ತಿಯಿಂದ † ಬಂದಿರುತ್ತದೆ ಗ್ರಂಥವೆಂಬ ಅರ್ಥವು ಗೌಣವೃತ್ತಿಯಿಂದ (ಬಂದಿರುತ್ತದೆ).

## ಕಠೋಪನಿಷತ್ತಿನ ಅನುಬಂಧಚತುಷ್ಟಯ

ಈ ರೀತಿಯಲ್ಲಿ ಉಪನಿಷತ್ತು ಎಂಬ ಮಾತನ್ನು ಬಿಡಿಸಿ ಅರ್ಥವನ್ನು ಹೇಳಿದ್ದರಿಂದಲೇ ವಿದ್ಯೆಗೇ ತಕ್ಕವನಾಗಿರುವ **ಅಧಿಕಾರಿ** ‡ ಯಾರೆಂಬುದನ್ನೂ ಹೇಳಿದಂತಾಯಿತು. ಒಳಗಿನ ಆತ್ಮವಾಗಿರುವ ಪರಬ್ರಹ್ಮವೇ ಇದಕ್ಕೆ ಅಸಾಧಾರಣ **ವಿಷಯ**ವೆಂದೂ ಹೇಳಿದಂತಾಯಿತು. ಬ್ರಹ್ಮಪ್ರಾಪ್ತಿರೂಪವಾದ

---

* 'ತುಪ್ಪವೇ ಆಯುಸ್ಸು' ಎಂದರೆ ತುಪ್ಪದಿಂದ ಆಯುಸ್ಸು ಹೆಚ್ಚುವದೆಂದು ಅರ್ಥ. ಈ ಪ್ರಯೋಗದಲ್ಲಿ ಆಯುಸ್ಸು ಎಂದರೆ ಆಯುಸ್ಸನ್ನುಂಟುಮಾಡುವದು ಎಂಬರ್ಥವಿರುವಂತೆ 'ಗ್ರಂಥವು ಉಪನಿಷತ್ತು' ಎಂಬ ಪ್ರಯೋಗದಲ್ಲಿ ಉಪನಿಷತ್ತು ಎಂದರೆ ಉಪನಿಷತ್ತನ್ನುಂಟುಮಾಡುವದು, ಎಂದರೆ ಜ್ಞಾನವನ್ನುಂಟುಮಾಡುವದಕ್ಕೆ ಕಾರಣವಾಗಿರುವದು– ಎಂದು ಅರ್ಥ.

† ವಿದ್ಯೆಯೆಂಬುದು ಮುಖ್ಯವಾದ ಅರ್ಥ; ಗ್ರಂಥವನ್ನು ಉಪಚಾರಕ್ಕೆ ಉಪನಿಷತ್ತು ಎಂದು ಕರೆದಿದೆ. ‡ ವಿದ್ಯೆಯಿಂದ ಆಗುವ ಪ್ರಯೋಜನವನ್ನು ಬಯಸುವವನೇ ಅದಕ್ಕೆ ಅಧಿಕಾರಿ.

ಪೂರ್ಣವಾದ ಸಂಸಾರನಿವೃತ್ತಿಯೇ ಈ ಉಪನಿಷತ್ತಿಗೆ **ಪ್ರಯೋಜನವು.** ವಿದ್ಯೆಗೂ ಇಂಥ ಪ್ರಯೋಜನಕ್ಕೂ (ಸಾಧ್ಯಸಾಧನಲಕ್ಷಣವಾದ) ಸಂಬಂಧ ವನ್ನೂ * ಹೇಳಿದಂತಾಯಿತು. ಆದ್ದರಿಂದ ಮೇಲೆ ಹೇಳಿದಂತೆ ಅಧಿಕಾರಿ, ವಿಷಯ, ಪ್ರಯೋಜನ, ಸಂಬಂಧ- ಇವುಗಳನ್ನುಳ್ಳ ವಿದ್ಯೆಯನ್ನು ಅಂಗೈಯಲ್ಲಿಟ್ಟ ಹಲ್ಲಿಯ † ಹಾಗೆ ಚೆನ್ನಾಗಿ ತೋರಿಸಿ ಕೊಡುವದರಿಂದ ಈ ವಲ್ಲಿಗಳಿಗೆ ಅಸಾಧಾರಣವಾದ ಅಧಿಕಾರಿ, ವಿಷಯ, ಪ್ರಯೋಜನ, ಸಂಬಂಧ- ಇವುಗಳಿದ್ದಂತಾಯಿತು. ‡ ಆದ್ದರಿಂದ ಇವುಗಳನ್ನು ತಿಳಿದ ಮಟ್ಟಿಗೆ ವ್ಯಾಖ್ಯಾನಮಾಡುತ್ತೇವೆ.



# ಒಂದನೆಯ ಅಧ್ಯಾಯ—ಒಂದನೆಯ ವಲ್ಲಿ

## ನಚಿಕೇತನು ಯಮನ ಬಳಿಗೆ ಹೋದದ್ದು

**ಓಂ. ಆಸೆಯಿಂದ ವಾಜಶ್ರವಸನೆಂಬವನು ತನ್ನದನ್ನೆಲ್ಲ ದಾನ ಮಾಡಿದನಂತೆ. ಅವನಿಗೆ ನಚಿಕೇತಸ್ಸೆಂಬ ಒಬ್ಬ ಮಗನಿದ್ದನಂತೆ. ॥೧॥**

ಇಲ್ಲಿ ಕಥೆಯನ್ನು (ಪ್ರಾರಂಭಿಸಿರುವದು) ವಿದ್ಯೆಯನ್ನು ಹೊಗಳುವದಕ್ಕೆ. ಆಸೆಯಿಂದ ಎಂದರೆ (ಫಲದ) ಬಯಕೆಯಿಂದ. ಮೂಲದಲ್ಲಿ 'ಹ', 'ವಾ'- ಎಂಬೆರಡೂ ಹಿಂದೆ ನಡೆದ ವಿಷಯವನ್ನು ನೆನಪುಕೊಡುವ ನಿಪಾತಗಳು. ವಾಜ ಎಂದರೆ ಅನ್ನವು ; ಅನ್ನವನ್ನು ಕೊಡುವದೇ ಮುಂತಾದ ನಿಮಿತ್ತದಿಂದ ಶ್ರವ ಎಂದರೆ ಯಶಸ್ಸು ಬಂದಾತನಾದ್ದರಿಂದ ಅವನಿಗೆ 'ವಾಜಶ್ರವಸ್ಸು' (ಎಂದು ಹೆಸರು). ಅಥವಾ (ಅವನಿಗೆ ವಾಜಶ್ರವಸ್ಸು ಎಂದು) ರೂಢಿಯಿಂದಲೇ§ (ಹೆಸರು ಬಂದಿರಬಹುದು). ಆತನ ಮಗನಿಗೆ 'ವಾಜಶ್ರವಸ' ಎಂದು ಹೆಸರು. ಆತನು **'ವಿಶ್ವಜಿತ್ತು'** ಎಂಬ ಸರ್ವದಕ್ಷಿಣೆಯ ಯಾಗವನ್ನು ನಡೆಸುವ

---

* ಕರ್ಮದಿಂದ ಬ್ರಹ್ಮಪ್ರಾಪ್ತಿಯಾಗಲಾರದು, ವಿದ್ಯೆಯಿಂದಲೇ ಆಗುವದು- ಎಂಬುದು ಸಂಬಂಧವು.

† ನೇರಾಗಿ, ಸಂಶಯಾದಿಗಳುಂಟಾಗದ ಹಾಗೆ.

‡ ಅಧಿಕಾರಿ ಮುಂತಾದವುಗಳು ನಾಲ್ಕನ್ನೂ ಸೇರಿಸಿ ಅನುಬಂಧಚತುಷ್ಟಯವೆಂದು ಕರೆಯುತ್ತಾರೆ. ಯಾವ ಗ್ರಂಥಕ್ಕೆ ಅನುಬಂಧವುಂಟೋ ಅದನ್ನು ಮಾತ್ರ ಜನರು ಓದುವರು.

§ ವಾಜಶ್ರವಸ್ಸು- ಎಂಬ ಹೆಸರು ಅವಯವಾರ್ಥಕ್ಕೆ ಅನುಗುಣವಾಗಿ ಬಂದಿರದೆ ಅವನಿಗೆ ಇಟ್ಟ ಸಂಕೇತನಾಮವಾಗಿದ್ದರೂ ಇರಬಹುದು.

ನಾದನಂತೆ ; ಆತನು ಆ ಯಜ್ಞದಲ್ಲಿ ಅದರ ಫಲದ ಬಯಕೆಯಿಂದ * ತನ್ನ ಎಲ್ಲಾ ಧನವನ್ನೂ ದಾನಮಾಡಿದನು. ಆ ಯಜಮಾನನಿಗೆ † ನಚಿಕೇತನೆಂಬ ಮಗನಿದ್ದನಂತೆ.

**ದಕ್ಷಿಣೆಗಳನ್ನು ಕೊಡುವದಕ್ಕೆ ಒಯ್ಯುತ್ತಿರುವಾಗ ಚಿಕ್ಕವನಾಗಿರುವ ಅವನಿಗೆ ಶ್ರದ್ಧೆಯು ಬಂದು ಸೇರಿತು. ಅವನು ಯೋಚಿಸಿದನೇನೆಂದರೆ:— ॥ ೨ ॥**

**" ನೀರುಕುಡಿದವುಗಳಾಗಿಯೂ ಹುಲ್ಲುಮೇದವುಗಳಾಗಿಯೂ ಹಾಲು ಕರೆದವುಗಳಾಗಿಯೂ ಇಂದ್ರಿಯಶಕ್ತಿಯಿಲ್ಲದವುಗಳಾಗಿಯೂ (ಇರುವ ಇಂಥ ಹಸುಗಳನ್ನು) ಕೊಡುವಾತನು 'ಅನಂದ' ಎಂಬ ಲೋಕಗಳನ್ನು ಪಡೆಯುವನು. " ॥ ೩ ॥**

ಚಿಕ್ಕವನಾದ ಎಂದರೆ ಇನ್ನೂ ಹುಡುಗತನದಲ್ಲಿಯೇ ಇದ್ದು, ಹಡೆಯುವ ಶಕ್ತಿಯಿನ್ನೂ ಬಂದಿಲ್ಲದೆ ಇದ್ದ, ಆ ನಚಿಕೇತನೆಂಬ ಬಾಲಕನಿಗೆ ಶ್ರದ್ಧೆಯು ಎಂದರೆ ತನ್ನ ತಂದೆಗೆ ಒಳ್ಳೆಯದಾಗಲೆಂಬ ಬಯಕೆಯಿಂದಾದ ಆಸ್ತಿಕ್ಯಬುದ್ಧಿಯು ಬಂದು ಸೇರಿತು. ಯಾವ ಕಾಲದಲ್ಲಿ (ಬಂದಿತು)? ಎಂದರೆ ಹೇಳುತ್ತಾರೆ:– ಋತ್ವಿಕ್ಕರುಗಳಿಗೂ ‡ ಸದಸ್ಸಿನಲ್ಲಿರುವವರಿಗೂ § ದಕ್ಷಿಣೆಗಳನ್ನು ಒಯ್ಯುತ್ತಿರುವಾಗ ದಕ್ಷಿಣೆಗಾಗಿ ಗೋವುಗಳನ್ನು ಕೊಡುವದಕ್ಕೆಂದು ಬೇರೆ ಬೇರೆಯಾಗಿ ಒಯ್ಯುತ್ತಿರುವಾಗ ಆ ಶ್ರದ್ಧೆಯಿಂದೊಡಗೂಡಿದ ನಚಿಕೇತನು (ಹೀಗೆಂದು) ಯೋಚಿಸಿಕೊಂಡನು:

ಹೇಗೆ (ಯೋಚಿಸಿಕೊಂಡನು)? ಎಂದರೆ ಹೇಳುತ್ತಾರೆ. 'ನೀರುಕುಡಿದಿರುವವುಗಳಾಗಿಯೂ' ಮುಂತಾದವು ದಕ್ಷಿಣೆಗಾಗಿ ಒಯ್ಯುತ್ತಿದ್ದ ಗೋವುಗಳ ವಿಶೇಷಣಗಳು. ನೀರನ್ನು ಆಗಲೆ ಕುಡಿದದ್ದು ಆಗಿಬಿಟ್ಟಿದೆ, ಹುಲ್ಲನ್ನು ತಿಂದದ್ದು ಆಗಲೇ ಆಗಿ ಬಿಟ್ಟಿದೆ. ಹಾಲನ್ನು ಕರೆದದ್ದೂ ಆಗಿಬಿಟ್ಟಿದೆ, ಇಂದ್ರಿಯಶಕ್ತಿಯೂ ಇಲ್ಲ, ಎಂದರೆ ಇನ್ನು ಕರುಹಾಕಲಾರದಷ್ಟು ಮುದಿಯಾಗಿವೆ–ಅಂತೂ ನಿಷ್ಫಲವಾದ ಹಸುಗಳು ಎಂದರ್ಥ. ಇಂಥ ಗೋವುಗಳನ್ನು ದಕ್ಷಿಣೆಗೆಂದು ಯಾವ ಯಜಮಾನನು ಋತ್ವಿಕ್ಕರುಗಳಿಗೆ ಕೊಡುತ್ತಾನೋ ಆತನು 'ಅನಂದ' ಎಂಬ– ಎಂದರೆ ಅನಾನಂದವಾದ– ಸುಖವಿಲ್ಲದ ಲೋಕಗಳನ್ನು ಪಡೆಯುವನು.

---

* ಇದನ್ನು 'ಯಾಗಮಾಡಿದನು' ಎಂಬ ಕ್ರಿಯೆಗೂ ಅನ್ವಯಿಸಿಕೊಳ್ಳಬಹುದು.

§ ಯಜ್ಞಮಾಡುತ್ತಿದ್ದ ಆ ವಾಜಶ್ರವಸನಿಗೆ.

† ಯಾಗದಲ್ಲಿ ಯಜಮಾನನಿಗೆ ಸಹಾಯ ಮಾಡುವವರು.

‡ ಯಜ್ಞವು ನಡೆಯುತ್ತಿರುವಾಗ ಅದನ್ನು ನೋಡುತ್ತಾ ಸಭೆಯಲ್ಲಿ ಕುಳಿತಿರುವ ವಿದ್ವಾಂಸರು.

**ಅವನು ತನ್ನ ತಂದೆಗೆ ಹೇಳಿದ್ದೇನೆಂದರೆ: "ತಂದೆಯೆ, ನನ್ನನ್ನು ಯಾರಿಗೆ ಕೊಡುವೆ?" ಹೀಗೆಂದು ಎರಡನೆಯ ಸಲವೂ ಮೂರನೆಯ ಸಲವೂ ಕೇಳಿದನು. ಅವನಿಗೆ (ಆತನು) ಹೇಳಿದ್ದೇನೆಂದರೆ: "ಮೃತ್ಯುವಿಗೆ ನಿನ್ನನ್ನು ಕೊಡುತ್ತೇನೆ"** ‖ ೪ ‖

ಹೀಗೆ ಯಜ್ಞವು ಪೂರ್ತಿಯಾಗದೆ ಇರುವ ನಿಮಿತ್ತದಿಂದ ತಂದೆಗೆ ಅನಿಷ್ಟವಾದ ಫಲವನ್ನು ಮಗನಾದ ನಾನು ನಿವಾರಿಸಬೇಕು– ಎಂದು ತನ್ನನ್ನಾದರೂ ಕೊಟ್ಟು ಯಜ್ಞವನ್ನು ಪರಿಪೂರ್ತಿಗೊಳಿಸೋಣವೆಂದು ಯೋಚಿಸಿ ತಂದೆಯ ಬಳಿಗೆ ಒಂದು (ಆ) ತಂದೆಯನ್ನು ಕುರಿತು ಹೇಳಿದನೇನೆಂದರೆ– "ಎಲೈ ತಂದೆಯೆ, ಯಾವ ಋತ್ವಿಜನಿಗೆ ದಕ್ಷಿಣೆಗಾಗಿ ನನ್ನನ್ನು ಕೊಡುತ್ತೀಯೆ?" ಹೀಗೆನಲು ತಂದೆಯು ಉಪೇಕ್ಷೆಮಾಡಿದನು; (ಆ) ಮೇಲೆಯೂ ಎರಡನೆಯ ಸಲವೂ ಮೂರನೆಯ ಸಲವೂ "ನನ್ನನ್ನು ಯಾರಿಗೆ ಕೊಡುವೆ? ನನ್ನನ್ನು ಯಾರಿಗೆ ಕೊಡುವೆ?" ಎಂದು (ಮತ್ತೆ ಮತ್ತೆ) ಕೇಳಿದನು. ತಂದೆಯು ಇವನು ಹುಡುಗನಾಗಿಲ್ಲ, ಎಂದು ಸಿಟ್ಟಾಗಿ ಆ ಪುತ್ರನನ್ನು ಕುರಿತು "ನಿನ್ನನ್ನು ಮೃತ್ಯುವಿಗೆ ಎಂದರೆ ವಿವಸ್ವಂತನ ಮಗನಾದ ಯಮನಿಗೆ ಕೊಟ್ಟಿರುತ್ತೇನೆ" ಎಂದನು.

**(ನಚಿಕೇತನ್ನು ಯೋಚಿಸಿದ್ದೇನೆಂದರೆ-) ಬಹುಜನರಲ್ಲಿ (ನಾನು ಮೊದಲನೆಯವನಾಗಿ ಹೋಗುವೆನು, ಬಹುಜನರಲ್ಲಿ ನಾನು ನಡುವೆಯವನಾಗಿ ಹೋಗುವೆನು; ನನ್ನಿಂದ ಈಗ (ಆತನು) ಮಾಡಬೇಕಾಗಿರುವ ಯಮನ ಕರ್ತವ್ಯವೇನಿದ್ದೀತು?** ‖ ೫ ‖

ಹೀಗೆ ಹೇಳಲು ಆ ಮಗನು ಏಕಾಂತದಲ್ಲಿ (ತನ್ನಲ್ಲಿ ತಾನು) ದುಃಖಪಡುತ್ತಿದ್ದನು. ಹೇಗೆಂದರೆ ಹೇಳುತ್ತಾರೆ. ಬಹುಜನ ಶಿಷ್ಯರಲ್ಲಿ ಅಥವಾ ಮಕ್ಕಳಲ್ಲಿ (ನಾನು) ಮೊದಲನೆಯವನಾಗಿಯೇ ಹೋಗುವೆನು, ಮುಖ್ಯವಾದ ಶಿಷ್ಯವೃತ್ತಿಯೇ ಮುಂತಾದ (ಗುಣದಿಂದಲೇ) ನಡೆದುಕೊಳ್ಳುತ್ತಿದ್ದೇನೆ ಎಂದರ್ಥ ನಡುತರದ ಬಹುಜನಗಳಲ್ಲಿ ನಾನು ನಡುತರದವನಾಗಿಯೇ ನಡೆದುಕೊಳ್ಳುತ್ತಿರುವೆನು, ಅಧಮವೃತ್ತಿಯಿಂದ (ನಾನು) ಯಾವಾಗಲೂ (ನಡೆದುಕೊಂಡಿಲ್ಲ.) ಹೀಗಿದ್ದರೂ* ಇಂಥ ಗುಣವುಳ್ಳ ಪುತ್ರನಾದರೂ ನನ್ನನ್ನು ಮೃತ್ಯು

---

* "ಗುರುವಿನ ಮನೋವೃತ್ತಿಯನ್ನು ಅರಿತು ನಡೆಯುವದು ಉತ್ತಮಶಿಷ್ಯನ ಸ್ವಭಾವವು; ಹೇಳಿದಂತೆ ನಡೆಯುವದು ಮಧ್ಯಮಶಿಷ್ಯನ ಸ್ವಭಾವವು; ಹೇಳಿದರೂ ನಡೆಯದಿರುವದು ಅಧಮನ ಲಕ್ಷಣವು. ನಾನು ಕೈಲಾದ ಮಟ್ಟಿಗೂ ಉತ್ತಮಶಿಷ್ಯನಾಗಿ, ಮಧ್ಯಮತರಗತಿಯ ಶಿಷ್ಯರ ಗುಂಪನ್ನು ಎಂದಿಗೂ ಬಿಡದೆ ನಡೆದುಕೊಳ್ಳುತ್ತೇನಲ್ಲ, ಯಾವಾಗ್ಗೂ ಇವನ ಆಜ್ಞೆಯನ್ನು ಉಲ್ಲಂಘಿಸಿದವನಲ್ಲವಲ್ಲ! ಹೀಗಿದ್ದರೂ ತಂದೆಯು ಈ ರೀತಿ ನುಡಿದಿದ್ದೇಕಿರಬಹುದು?" ಎಂದು ಭಾವ.

ಏಗೆ ಕೊಟ್ಟಿರುತ್ತೇನೆಂದು ತಂದೆ ಹೇಳಿರುವನಲ್ಲ ! ನನ್ನನ್ನು ಯಮನಿಗೆ ಕೊಟ್ಟು ಈಗ (ನಮ್ಮ ತಂದೆಯು) ಮಾಡಬೇಕಾಗಿರುವ ಯಮನ ಕರ್ತವ್ಯವು ಎಂದರೆ (ಯಮನಿಂದಾಗಬೇಕಾದ) ಪ್ರಯೋಜನವು ಏನಿರಬಹುದು ? * ನಿಜವಾಗಿಯೂ ಪ್ರಯೋಜನವನ್ನು ಲಕ್ಷ್ಯದಲ್ಲಿಡದೆಯೇ ಸಿಟ್ಟಿನಿಂದ(ಲೇ) ತಂದೆಯು (ಹೀಗೆಂದು) ನುಡಿದಿರಬೇಕು. ಹೀಗಿದ್ದರೂ ಆ ತಂದೆಯ ಮಾತು ಸುಳ್ಳಾಗಬಾರದು.

ಹೀಗೆಂದು ಯೋಚಿಸಿಕೊಂಡು "ಅಯ್ಯೋ ! ಏನೋ ಹೇಳಿ ಬಿಟ್ಟೆನಲ್ಲ!" ಎಂದು ಪೇಚಾಡುತ್ತಿದ್ದ ತಂದೆಯನ್ನು ಕುರಿತು ದುಃಖದಿಂದ ಹೇಳುತ್ತಾನೆ:–

**ಪೂರ್ವಿಕರು ಹೇಗೆ (ಇದ್ದರೆಂಬುದನ್ನು) ನೋಡು; ಮತ್ತು ಉಳಿದವರು ಹೇಗಿರುತ್ತಾರೆಂಬುದನ್ನು ನೋಡು. ಮನುಷ್ಯನು ಸಸ್ಯದ ಹಾಗೆ ಪಕ್ವವಾಗುತ್ತಿರುವನು, ಸಸ್ಯದ ಹಾಗೆ ಮತ್ತೆ ಹುಟ್ಟುತ್ತಿರುವನು. ॥ ೬ ॥**

ಪೂರ್ವಿಕರಾದ ನಿನ್ನ ತಂದೆ, ಅಜ್ಜ– ಮುಂತಾದವರು ಯಾವ ರೀತಿಯಿಂದ ಬಾಳಿದರೆಂಬುದನ್ನು ಒಬ್ಬೊಬ್ಬರನ್ನಾಗಿ ನೋಡಿ ಆಲೋಚಿಸಿಕೋ. ಅವರನ್ನು ನೋಡಿ (ನೀನೂ) ಅವರ ಆಚಾರವನ್ನು ಸ್ವೀಕರಿಸುವದು ಒಳ್ಳೆಯದು. ಮತ್ತು ಇನ್ನೂ ಉಳಿದವರು ಎಂದರೆ ಈಗ ಇರುವ ಸಜ್ಜನರು ಹೇಗೆ ಇರುವರೋ ಅವರನ್ನೂ ನೋಡಿ ಯೋಚಿಸು. (ಹಿಂದಿನವರಾಗಲಿ ಈಗಿನವರಾಗಲಿ,) ಅವರಲ್ಲಿ ಸುಳ್ಳಾಡುವದೆಂಬುದು ಇರಲೂ ಇಲ್ಲ, ಇರುವದೂ ಇಲ್ಲ. ಇದಕ್ಕೆ ವಿರುದ್ಧವಾಗಿ ಸುಳ್ಳಾಡುವದು ದುರ್ಜನರ ಸ್ವಭಾವವು. (ಹೀಗೆ) ಸುಳ್ಳಾಡಿಯಾದರೂ ಯಾವನೂ ಮುಪ್ಪುಮರಣಗಳಿಲ್ಲದವನಾಗಲಾರನು ; ಏಕೆಂದರೆ ಮನುಷ್ಯನು ಸಸ್ಯದ ಹಾಗೆ ಪಕ್ವವಾಗಿ ಸಾಯುತ್ತಿರುತ್ತಾನೆ; ಸತ್ತು ಸಸ್ಯದಂತೆಯೇ ಮತ್ತೆ ಹುಟ್ಟಿ ತೋರಿಕೊಳ್ಳುತ್ತಿರುತ್ತಾನೆ; ಹೀಗೆ ಜೀವಲೋಕವೇ ಅನಿತ್ಯವಾಗಿರುವಲ್ಲಿ ಸುಳ್ಳಾಡಿದ್ದರಿಂದ ಏನು ಪ್ರಯೋಜನ? ನಿನ್ನ ಸತ್ಯವೊಂದನ್ನು ಕಾಪಾಡಿಕೊ, ನನ್ನನ್ನು ಯಮನಲ್ಲಿಗೆ ಕಳುಹಿಸಿಕೊಡು– ಎಂದು ಅಭಿಪ್ರಾಯವು

ಹೀಗೆನ್ನಲು ತಂದೆಯು ತನ್ನ ಸತ್ಯವನ್ನು (ರಕ್ಷಿಸುವದಕ್ಕೆಂದು ಮಗನನ್ನು) ಕಳುಹಿಸಿಕೊಟ್ಟನು. (ಆ ನಚಿಕೇತನು) ಯಮನ ಮನೆಗೆ ಹೋಗಿ, ಯಮನು ಎಲ್ಲಿಯೋ ಹೊರಗೆ ಹೋಗಿರುವಲ್ಲಿ ಮೂರು ರಾತ್ರಿಗಳು ಇರುತ್ತಿದ್ದನು. ಹೊರಗೆ ಹೋಗಿದ್ದು ಬಂದ ಯಮನನ್ನು ಕುರಿತು ಅವನ ಅಮಾತ್ಯರೋ ಹೆಂಡತಿಯೋ ವಿಷಯವನ್ನು ತಿಳಿಸುವದಕ್ಕಾಗಿ ಈ ಮಾತನ್ನು ಹೇಳಿದರು:—

**" ವೈಶ್ವಾನರನೇ ಅತಿಥಿಯಾದ ಬ್ರಾಹ್ಮಣನಾಗಿ ಮನೆಯನ್ನು ಪ್ರವೇಶಿಸುತ್ತಾನೆ. ಆತನಿಗೆ ಈ ಶಾಂತಿಯನ್ನು ಮಾಡುವರು. ಎಲೈ ವೈವಸ್ವತನೆ, ಉದಕವನ್ನು ತೆಗೆದುಕೊಂಡು ಬಾ. " ॥ ೭ ॥**

---

* ಯಮನಿಗೆ ಇಂಥ ದಾನವನ್ನು ಕೊಡಬೇಕೆಂಬ ವಿಧಿಯೇನೂ ಇಲ್ಲವಲ್ಲ? ಎಂದು ಭಾವ

ವೈಶ್ವಾನರನು ಎಂದರೆ ಸಾಕ್ಷಾದಗ್ನಿಯೇ ಅತಿಥಿಯಾದ ಬ್ರಾಹ್ಮಣನಾಗಿ ಮನೆಯನ್ನು ಸುಡುವವನಂತೆ ಪ್ರವೇಶಿಸುತ್ತಾನೆ. ಆ ಅಗ್ನಿಯ ತಾಪವನ್ನು ಶಮನಮಾಡುವರೋ ಎಂಬಂತೆ ತಿಳಿದವರು ಅತಿಥಿಗೆ ಪಾದ್ಯ, ಆಸನ- ಮುಂತಾದ್ದನ್ನು ಕೊಡುವದೆಂಬ ಈ ಶಾಂತಿಯನ್ನು ಮಾಡುವರು. ಆದ್ದರಿಂದ ಎಲೈ ವೈವಸ್ವತನೆ, ಈ ನಚಿಕೇತನಿಗೆ ಕಾಲುತೊಳೆದುಕೊಳ್ಳುವದಕ್ಕಾಗಿ ನೀರನ್ನು ತೆಗೆದುಕೊಂಡು ಬಾ.

ಇದೂ ಅಲ್ಲದೆ (ಹೀಗೆ ಸತ್ಕಾರ)ಮಾಡದೆ ಇದ್ದರೆ **ಪ್ರತ್ಯವಾಯ**ವನ್ನು ಶ್ರುತಿಯಲ್ಲಿ ಹೇಳಿರುತ್ತದೆ. ಹೇಗೆಂದರೆ:—

**ಆಶೆ, ಪ್ರತೀಕ್ಷೆ- ಇವುಗಳನ್ನೂ ಸಿಕ್ಕಿರುವದನ್ನೂ ಸೂನೃತವನ್ನೂ ಇಷ್ಟಾಪೂರ್ತಗಳನ್ನೂ ಪುತ್ರಪಶುಗಳನ್ನೂ- ಯಾವ ಅಲ್ಪಬುದ್ಧಿಯ ಮನೆಯಲ್ಲಿ ಬ್ರಾಹ್ಮಣನು ಊಟವಿಲ್ಲದೆ ವಾಸಮಾಡುವನೋ ಆ ಪುರುಷನ- ಈ ಎಲ್ಲವನ್ನೂ (ಅತಿಥಿಯು) ವಶಮಾಡಿಕೊಳ್ಳುತ್ತಾನೆ. ॥ ೮ ॥**

ಆಶಾಪ್ರತೀಕ್ಷೆಗಳನ್ನು- ತನಗೆ ಗೊತ್ತಿಲ್ಲದೆ ಇದ್ದರೂ ಪದಾರ್ಥಗಳು ಸಿಕ್ಕಬೇಕೆಂಬ ಬಯಕೆಗೆ ಆಶೆಯೆಂದು ಹೆಸರು; ಗೊತ್ತಿದ್ದ ಇಂಥ ಪದಾರ್ಥವು ಬರಬೇಕೆಂಬ ನಿರೀಕ್ಷೆಯೇ ಪ್ರತೀಕ್ಷೆ- ಈ ಎರಡನ್ನೂ, ಅವುಗಳು ಸಿಕ್ಕಿದ್ದರಿಂದ ಆದ ಫಲವನ್ನೂ, ಸೂನೃತವನ್ನೂ ಎಂದರೆ ಪ್ರಿಯವಾದ ವಾಕ್ಕಿನಿಂದಪಡೆದ ಫಲವನ್ನೂ, ಇಷ್ಟಾಪೂರ್ತಗಳನ್ನೂ- ಇಷ್ಟವೆಂದರೆ ಯಾಗವು; ಪೂರ್ತವೆಂದರೆ ತೋಟವೇ ಮುಂತಾದದ್ದನ್ನು ನಿರ್ಮಿಸುವದು- ಈ ಕರ್ಮಫಲವನ್ನೂ ಪುತ್ರಪಶುಗಳನ್ನೂ ಎಂದರೆ ಮಕ್ಕಳನ್ನೂ ದನಕರುಗಳನ್ನೂ- ಈ ಎಲ್ಲವನ್ನೂ (ಅತಿಥಿಯು) ವಶಮಾಡಿಕೊಳ್ಳುತ್ತಾನೆ, ಎಂದರೆ ನಾಶಗೊಳಿಸುತ್ತಾನೆ ಎಂದು ಅಭಿಪ್ರಾಯ. ಅಲ್ಪಬುದ್ಧಿಯಾದ ಯಾವ ಪುರುಷನ ಮನೆಯಲ್ಲಿ ಊಟಮಾಡದೆ ಬ್ರಾಹ್ಮಣನು ಇರುತ್ತಿರುವನೋ (ಅವನ ಆಶೆಯೆ ಮುಂತಾದವುಗಳೆಲ್ಲವೂ ನಾಶವಾಗುತ್ತವೆ) ಆದ್ದರಿಂದ ಯಾವ ಅವಸ್ಥೆಯಲ್ಲಿದ್ದರೂ ಅತಿಥಿಯನ್ನು ಉಪೇಕ್ಷೆ ಮಾಡತಕ್ಕದ್ದಲ್ಲ- ಎಂದರ್ಥ.

## ನಚಿಕೇತನಿಗೆ ಯಮನು ಕೊಟ್ಟ ವರಗಳು

**ಎಲೈ ಬ್ರಾಹ್ಮಣನೆ, ಅತಿಥಿಯೂ ನಮಸ್ಕಾರಾರ್ಹನೂ ಆದ (ನೀನು) ಮೂರು ರಾತ್ರಿಗಳು ಊಟಮಾಡದೆ ನನ್ನ ಮನೆಯಲ್ಲಿ ಇದ್ದುಕೊಂಡಿರುವೆಯಷ್ಟೆ; ಆದ್ದರಿಂದ ಎಲೈ ಬ್ರಾಹ್ಮಣನೆ, ನಮಸ್ಕಾರವಿರಲಿ,**

**ಅದರಿಂದ ನನಗೆ ಸ್ವಸ್ತಿಯಾಗಲಿ. ಇದಕ್ಕಾಗಿ ಮೂರು ವರಗಳನ್ನು ಕೇಳಿಕೊ. ॥ ೯ ॥**

ಹೀಗೆಂದು ಹೇಳಲು ಮೃತ್ಯುವು ನಚಿಕೇತಸ್ಸಿನ ಬಳಿಗೆ ಬಂದು ಪೂಜೆಯನ್ನು ಮಾಡಿ ಇಂತೆಂದನು "ಎಲೈ ಬ್ರಾಹ್ಮಣನೆ, ಅತಿಥಿಯೂ ನಮಸ್ಕಾರಕ್ಕೆ ಯೋಗ್ಯನೂ ಆಗಿರುವ ನೀನು ಮೂರು ರಾತ್ರಿಗಳು ನನ್ನ ಮನೆಯಲ್ಲಿ ಊಟಮಾಡದೆ ಇದ್ದೆಯಷ್ಟೆ. ಆದ್ದರಿಂದ ನಿನಗೆ ನಮಸ್ಕಾರವಿರಲಿ. ಅದರಿಂದ, ಎಂದರೆ ನೀನು ಊಟಮಾಡದೆ ನನ್ನ ಮನೆಯಲ್ಲಿ ವಾಸಮಾಡಿದ್ದರಿಂದಾಗಿರುವ ದೋಷದಿಂದ, ಅದು ನನಗೆ ತಗಲದಂತೆ ಪರಿಹಾರವಾಗಿ, ನನಗೆ ಸ್ವಸ್ತಿಯಾಗಲಿ, ಎಂದರೆ ಮಂಗಳವಾಗಲಿ ನಿನ್ನ ಅನುಗ್ರಹದಿಂದಲೇ ನನಗೆ ಎಲ್ಲಾ ಮಂಗಳವೂ ಆದೀತಾದರೂ ನೀನು ಅಧಿಕವಾಗಿ ಪ್ರಸನ್ನನಾಗಲೆಂದು, ನೀನು ಊಟಮಾಡದೆ ಇಲ್ಲಿದ್ದ ಒಂದೊಂದು ರಾತ್ರಿಗೂ (ಒಂದೊಂದರಂತೆ) ಮೂರು ವರಗಳನ್ನು (ಕೊಡುತ್ತೇನೆ); ನನ್ನಿಂದ ನಿನಗೆ ಬೇಕಾದ ಮೂರು ವರಗಳನ್ನು ಕೇಳಿಕೊ."

## ಮೊದಲನೆಯ ವರ ತಂದೆಯ ಪ್ರಸನ್ನತೆ

**ಎಲೈ ಮೃತ್ಯುವೆ, ಗೌತಮನು ನನ್ನ ವಿಷಯದಲ್ಲಿ ಸಿಟ್ಟುಬಿಟ್ಟು ಶಾಂತಸಂಕಲ್ಪನಾಗಿಯೂ ಒಳ್ಳೆಯ ಮನಸ್ಸುಳ್ಳವನಾಗಿಯೂ ಆಗುವಂತೆಯೂ ನೀನು ನನ್ನನ್ನು ಹಿಂದಕ್ಕೆ ಕಳುಹಿಸಿದರೆ ಗುರುತುಹಿಡಿದು ಮಾತಾಡಿಸುವಂತೆಯೂ ಆಗಲಿ. ಮೂರು ವರಗಳಲ್ಲಿ ನಾನು ಕೇಳುವದು ಇದೇ ಒಂದನೆಯದು. ॥ ೧೦ ॥**

ಆಗ ನಚಿಕೇತಸು ಹೇಳುತ್ತಾನೆ:— "ಎಲೈ ಮೃತ್ಯುವೆ, (ನೀನು) ವರಗಳನ್ನು ಕೊಡಬೇಕೆಂದಿದ್ದರೆ, ನನ್ನ ತಂದೆಯಾದ ಗೌತಮನು 'ಯಮನ ಹತ್ತಿರಕ್ಕೆ ಹೋಗಿ ನನ್ನ ಮಗನು ಏನು ಮಾಡುವನೋ' ಎಂದು ನನ್ನ ವಿಷಯದಲ್ಲಿ ಮನಸ್ಸಿನಲ್ಲಿ ಸಂಕಲ್ಪವನ್ನು ತರದಂತೆ ಶಾಂತಸಂಕಲ್ಪನಾಗಿಯೂ, ಒಳ್ಳೆಯ ಮನಸ್ಸುಳ್ಳವನಾಗಿಯೂ ಎಂದರೆ ಪ್ರಸನ್ನವಾದ ಮನಸ್ಸುಳ್ಳವನಾಗಿಯೂ ಆಗುವಂತೆಯೂ ಸಿಟ್ಟುಬಿಟ್ಟು ನನ್ನ ವಿಷಯದಲ್ಲಿ ರೋಷವಿಲ್ಲದೆ ಇರುವಂತೆಯೂ ನೀನು ಬಿಟ್ಟು ಮನೆಗೆ ಕಳುಹಿಸಿದ ಮೇಲೆ 'ಅದೇ ನನ್ನ ಮಗನೇ ಬಂದಿರುವನು' ಎಂದು ನನ್ನನ್ನು ಗುರುತುಹಿಡಿದು ಮಾತಾಡಿಸುವಂತೆಯೂ ಆಗಲಿ. ಈ ಪ್ರಯೋಜನವೇ ಮೂರು ವರಗಳಲ್ಲಿ ಮೊದಲನೆಯದು, ತಂದೆಯನ್ನು ಸಂತೋಷಗೊಳಿಸುವದೆಂಬ ಇದನ್ನೇ ನಾನು ಕೇಳಿಕೊಳ್ಳುತ್ತೇನೆ.

**ಔದ್ದಾಲಕಿಯಾದ ಆರುಣಿಯು ನನ್ನಿಂದ ಅನುಜ್ಞಾತನಾಗಿ ಮೊದಲಿನಂತೆಯೇ ನಿನ್ನನ್ನು ಗುರುತುಹಿಡಿಯುವನು, ರಾತ್ರಿಗಳಲ್ಲಿ ಸುಖವಾಗಿ ನಿದ್ರಿಸುವನು; ಮೃತ್ಯುಮುಖದಿಂದ ಬಿಡುಗಡೆಯಾದ ನಿನ್ನನ್ನು ಸಿಟ್ಟಿಲ್ಲದೆಯೇ ಕಾಣುವನು. ॥ ೧೧ ॥**

ಮೃತ್ಯು ಹೇಳಿದನೇನೆಂದರೆ:— ನಿನ್ನಲ್ಲಿ ನಿನ್ನ ತಂದೆಯ ಬುದ್ಧಿಯು ಮೊದಲು ಹೇಗೆ ಪ್ರೀತಿಯಿಂದ ಕೂಡಿ ಇದ್ದಿತ್ತೋ ಹಾಗೆಯೇ (ಇನ್ನುಮುಂದೆಯೂ ಇರುವದು;) ನಿನ್ನ ತಂದೆಯು ನಿನ್ನ ಗುರುತುಹಿಡಿದುಕೊಂಡು (ಇನ್ನು ಮುಂದೆಯೂ) ಪ್ರೀತಿಯುಕ್ತನಾಗಿಯೇ ಇರುವನು. ಔದ್ದಾಲಕಿಃ* ಎಂದರೆ, ಉದ್ದಾಲಕನೇ; ಅರುಣನ ಮಗನಾದ್ದರಿಂದ ಇವನಿಗೆ ಆರುಣಿಯೆಂದು ಹೆಸರು. ಅಥವಾ ಇವನು ಇಬ್ಬರಿಗೂ† ಮಗನಾಗಿರಬಹುದು, (ಆದ್ದರಿಂದ ಔದ್ದಾಲಕಿ ಆರುಣಿ ಎಂಬ ಎರಡು ಹೆಸರುಗಳಿವೆ) ನನ್ನಿಂದ ಬಿಡಲ್ಪಟ್ಟ [ಪ್ರಸೃಷ್ಟಃ] ಎಂದರೆ ನನ್ನ ಅನುಜ್ಞೆಯುಳ್ಳವನಾಗಿ (ಎಂದರ್ಥ.) ಮಗನಾದ ನೀನು ಉಳಿದ ರಾತ್ರಿಗಳಲ್ಲಿಯೂ ಸುಖವಾಗಿ ಪ್ರಸನ್ನಮನಸ್ಸಿನಿಂದ ನಿದ್ರಿಸುವನು. ಮೃತ್ಯುವಿನ ಮುಖದಿಂದ ಎಂದರೆ ಮೃತ್ಯುವಿನ ದೃಷ್ಟಿಯಿಂದ ಮಗನಾದ ನೀನು ಬಿಡುಗಡೆಯಾದದ್ದನ್ನು ಕಂಡು, ಸಿಟ್ಟಿಲ್ಲದವನೂ‡ ಆಗುವನು.

## ಎರಡನೆಯ ವರ: ಅಗ್ನಿವಿದ್ಯೆ

**ಸ್ವರ್ಗಲೋಕದಲ್ಲಿ ಸ್ವಲ್ಪವೂ ಭಯವಿರುವದಿಲ್ಲ; ಅಲ್ಲಿ ನೀನೂ (ಕೈಮಾಡು)ವದಿಲ್ಲ, ಮುಪ್ಪಿಗೂ (ಜನರು) ಹೆದರುವದಿಲ್ಲ. (ಜೀವನು) ಹಸಿವು, ಬಾಯಾರಿಕೆ- ಈ ಎರಡನ್ನೂ ದಾಟಿ ಶೋಕವನ್ನು ಅತಿಕ್ರಮಿಸಿದವನಾಗಿ ಸ್ವರ್ಗಲೋಕದಲ್ಲಿ ಸಂತೋಷಪಡುತ್ತಾನೆ. ॥ ೧೨ ॥**

ನಚಿಕೇತನು ಹೇಳಿದನೇನೆಂದರೆ:— ಸ್ವರ್ಗಲೋಕದಲ್ಲಿ ರೋಗವೇ ಮುಂತಾದ ಕಾರಣದಿಂದಾದ ಭಯವು ಬಂದಿಷ್ಟೂ ಇರುವದಿಲ್ಲ. ಎಲೈ ಮೃತ್ಯುವೇ,

* ಉದ್ದಾಲಕ ಏವ ಔದ್ದಾಲಕಿಃ– ಎಂದು ಸ್ವಾರ್ಥದಲ್ಲಿ ತದ್ಧಿತಪ್ರತ್ಯಯವು ಬಂದಿದೆ ಎಂದು ಭಾವ

† ಒಬ್ಬನಿಗೆ ಹೊಟ್ಟೆಯಲ್ಲಿ ಹುಟ್ಟಿದ ಮಗನು, ಇನ್ನೊಬ್ಬನಿಗೆ ಶಾಸ್ತ್ರದ ಪ್ರಕಾರ ದತ್ತಪುತ್ರನಾದವನು. ಇಂಥವನಿಗೆ ದ್ವ್ಯಾಮುಷ್ಯಾಯಣನೆಂದು ಹೆಸರು ಇವನಿಗೆ ಎರಡು ಗೋತ್ರಗಳೂ ಸೇರಿರುತ್ತವೆ.

‡ 'ಹುಡುಗನು ಹಾಗೆ ಮಾಡಿದನಲ್ಲ !' ಎಂದು ಸಿಟ್ಟುಮಾಡಿಕೊಳ್ಳದೆಯೂ ಇರುವನು.

ನೀನೂ ಅಲ್ಲಿ ತಟ್ಟನೆ ಜನರ ಮೇಲೆ ಕೈಮಾಡುವದಿಲ್ಲ; ಆದ್ದರಿಂದ ಈ ಲೋಕದಲ್ಲಿನ ಹಾಗೆ ಜನರು ಮುಪ್ಪಿನಿಂದ ಕೂಡ ನಿನಗೆ ಅಲ್ಲಿ ಹೆದರುವದಿಲ್ಲ. ಮತ್ತು (ಜೀವನು) ಹಸಿವು, ಬಾಯಾರಿಕೆ- ಈ ಎರಡನ್ನೂ ದಾಟಿ, ಶೋಕವನ್ನು ಅತಿಕ್ರಮಿಸಿದವನಾಗಿ ಎಂದರೆ ಮನಸ್ಸಿನ ದುಃಖದಿಂದಲೂ ಬಿಡುಗಡೆಯಾಗಿ ಆ ದಿವ್ಯವಾದ ಸ್ವರ್ಗಲೋಕದಲ್ಲಿ ಹರ್ಷದಿಂದಿರುತ್ತಾನೆ.

**ಎಲೈ ಮೃತ್ಯುವೆ, ಆ ನೀನು ಸ್ವರ್ಗ್ಯವಾದ ಅಗ್ನಿಯನ್ನು ಓದಿ ತಿಳಿದಿದ್ದೀಯೆ. ಶ್ರದ್ಧೆಯುಳ್ಳ ನನಗೆ ಅದನ್ನು ಹೇಳಿಕೊಡು. ಸ್ವರ್ಗಲೋಕವನ್ನು ಹೊಂದಿದವರು ಅಮೃತತ್ವವನ್ನು ಹೊಂದುತ್ತಾರ(ಲ್ಲವೆ ?) ಇದನ್ನು ಎರಡನೆಯ ವರದಿಂದ ಕೇಳಿಕೊಳ್ಳುತ್ತೇನೆ. ‖ ೧೩ ‖**

ಇಂಥ ಗುಣಗಳಿಂದ ಕೂಡಿರುವ ಸ್ವರ್ಗಲೋಕವನ್ನು ಹೊಂದುವದಕ್ಕೆ ಸಾಧನವಾಗಿರುವ ಅಗ್ನಿಯನ್ನು, ಎಲೈ ಮೃತ್ಯುವೆ, ಆ ನೀನು ಓದಿ ತಿಳಿದಿರುವೆ, ಬಲ್ಲೆ ಎಂದರ್ಥ. ಹೀಗಿರುವದರಿಂದ ಶ್ರದ್ಧೆಯಿಂದ ಸ್ವರ್ಗವನ್ನು ಬಯಸಿರುವ ನನಗೆ ಅದನ್ನು ಹೇಳಿಕೊಡು. ಯಾವ ಅಗ್ನಿಯನ್ನು ಉಪಾಸನೆಮಾಡುವದರಿಂದ ಸ್ವರ್ಗಲೋಕವನ್ನು ಹೊಂದಿದ ಯಾಜಕರು ಅಮೃತತ್ವವನ್ನು ಎಂದರೆ ಸಾವಿಲ್ಲದ ದೇವತ್ವವನ್ನು * ಹೊಂದುವರೋ ಅಂಥ ಅಗ್ನಿಯ ವಿದ್ಯೆಯನ್ನು ಎರಡನೆಯ ವರದಿಂದ ಕೇಳಿಕೊಳ್ಳುತ್ತೇನೆ.

**ಎಲೈ ನಚಿಕೇತನೆ, ಸ್ವರ್ಗ್ಯವಾದ ಅಗ್ನಿಯನ್ನು ತಿಳಿದವನಾಗಿ ನಿನಗೆ ಹೇಳಿಕೊಡುತ್ತೇನೆ, ಅದನ್ನು ನನ್ನಿಂದ ತಿಳಿದುಕೊ. ಈ (ಅಗ್ನಿಯು) ಅನಂತವಾದ ಲೋಕವನ್ನು ಪಡೆಯಿಸುವದಾಗಿಯೂ ಮತ್ತು ಪ್ರತಿಷ್ಠಾರೂಪವಾಗಿಯೂ ಗುಹೆಯಲ್ಲಿ ಇರುವದೆಂದು ನೀನು ತಿಳಿ. ‖ ೧೪ ‖**

ಇದು ಮೃತ್ಯು ಹೇಳಿದ ಮಾತು. ಯಾವದನ್ನು ನೀನು ಕೇಳಿದೆಯೋ (ಆ ಅಗ್ನಿಯನ್ನು) ನಿನಗೋಸ್ಕರ ಹೇಳಿಕೊಡುತಲಿದ್ದೇನೆ. ಅದನ್ನು ನನ್ನ ಮಾತಿನಿಂದ ಏಕಾಗ್ರವಾದ ಮನಸ್ಸಿನಿಂದ ತಿಳಿದುಕೊ. ಸ್ವರ್ಗ್ಯವಾದ- ಸ್ವರ್ಗಕ್ಕೆ ಹಿತವಾದದ್ದು ಸ್ವರ್ಗ್ಯವೆನಿಸುವದು. (ಹೇಗೆ)– ಸ್ವರ್ಗಕ್ಕೆ ಸಾಧನವಾದ (ಈ) ಅಗ್ನಿ

---

* ಅಗ್ನಿವಿದ್ಯೆಯಿಂದಲೆ 'ಅಮೃತತ್ವವನ್ನು' ಎಂದರೆ ಮೋಕ್ಷವನ್ನು ಹೊಂದುತ್ತಾರೆ– ಎಂಬುದು ಮುಂದಿನ ಗ್ರಂಥಕ್ಕೂ ವಿರೋಧವಾಗುವದು, ಮುಕ್ತಿಯು ನಿತ್ಯಸಿದ್ಧವಾದದ್ದಾದ್ದರಿಂದ ಸಾಧನದಿಂದ ಪಡೆಯಲ್ಪಡತಕ್ಕದ್ದಲ್ಲವೆಂಬ ಯುಕ್ತಿಗೂ ವಿರೋಧವಾಗುವದು. ಆದ್ದರಿಂದ ಅಮೃತತ್ವ ಎಂದರೆ ದೇವತ್ವ ಎಂದು ಅರ್ಥಮಾಡಿರುತ್ತದೆ. ದೇವತೆಗಳಿಗೆ ಕಲ್ಪದ ಅಂತದವರೆಗೂ ಮರಣವಿಲ್ಲದ್ದರಿಂದ ಅವರಿಗೂ ಅಮರರು ಎಂಬ ಹೆಸರು ಉಂಟು. ಹಿಂದಿನ ಮಂತ್ರದ 'ಹಸಿವುಬಾಯಾರಿಕೆಗಳನ್ನು ದಾಟಿ' ಎಂಬ ಮಾತನ್ನೂ ಹೀಗೆಯೇ ಗೌಣಾರ್ಥದಲ್ಲಿ ಉಪಯೋಗಿಸಿರುತ್ತದೆ ಎಂದು ತಿಳಿಯಬೇಕು.

ಯನ್ನು ನಾನು ತಿಳಿದವನಾಗಿ (ಹೇಳಿಕೊಡುತ್ತೇನೆ) ಎಂದರ್ಥ. 'ಹೇಳಿಕೊಡುತ್ತೇನೆ' ಎಂದೂ 'ಅದನ್ನು ತಿಳಿದುಕೊ' ಎಂದೂ ಹೇಳಿದ್ದು ಶಿಷ್ಯನಾದ (ನಚಿಕೇತಸ್ಸಿನ) ಬುದ್ಧಿಯು ಸಮಾಧಾನವಾಗಿರಲೆಂಬುದಕ್ಕಾಗಿ.

ಈಗ ಅಗ್ನಿಯನ್ನು ಹೊಗಳುತ್ತಾನೆ. ಅನಂತವಾದ ಲೋಕವನ್ನು ಪಡೆಯಿಸುವದಾಗಿಯೂ ಎಂದರೆ ಸ್ವರ್ಗಲೋಕವೆಂಬ* ಫಲವನ್ನು ಪಡೆಯುವಕ್ಕೆ ಸಾಧನವಾಗಿಯೂ ಎಂದರ್ಥ. ಪ್ರತಿಷ್ಠಾರೂಪವಾಗಿಯೂ ಎಂದರೆ ವಿರಾಡ್ರೂಪದಿಂದ† ಜಗತ್ತಿಗೆ ಆಶ್ರಯವಾಗಿರುವದಾಗಿಯೂ ಗುಹೆಯಲ್ಲಿ ಎಂದರೆ ಜ್ಞಾನಿಗಳ ಬುದ್ಧಿಯಲ್ಲಿ ಪ್ರವೇಶಿಸಿರುವದು. ಹೀಗೆಂದು ನಾನು ಹೇಳುತ್ತಿರುವ ಈ ಅಗ್ನಿಯನ್ನು ನೀನು ತಿಳಿದುಕೊ.

**ಲೋಕಾದಿಯಾದ ಆ ಅಗ್ನಿಯನ್ನೂ ಎಂಥ ಇಟ್ಟಿಗೆಗಳು, ಎಷ್ಟು (ಇಟ್ಟಿಗೆಗಳು), ಹೇಗೆ (ಉಪಾಸನೆಮಾಡಬೇಕು)- ಎಂಬುದನ್ನೂ ಅವನಿಗೆ ಹೇಳಿಕೊಟ್ಟನು. ಅವನು ಹೇಳಿದಂತೆಯೇ ಮತ್ತೆ ಅದನ್ನು ಆತನು ಹೇಳಿದನು. ಆಮೇಲೆ ಅವನ ಮೇಲೆ ಸಂತೋಷದಿಂದ ಮೃತ್ಯುವು ಮತ್ತೂ (ಹೀಗೆಂದು) ನುಡಿದನು. ॥ ೧೫ ॥**

ಇದು ಶ್ರುತಿಯ ಮಾತು. ಲೋಕಾದಿ ಎಂದರೆ ಲೋಕಗಳಿಗೆಲ್ಲ ಆದಿ. ಏಕೆಂದರೆ (ವಿರಾಜನು) ಪ್ರಥಮಶರೀರಿಯಾಗಿರುತ್ತಾನೆ‡ ಆ ಅಗ್ನಿಯನ್ನು ಎಂದರೆ ಪ್ರಕೃತದಲ್ಲಿ ನಚಿಕೇತಸ್ಸು ಕೇಳಿದಂಥ (ಅಗ್ನಿಯನ್ನು) ಮೃತ್ಯುವು ಆ ನಚಿಕೇತಸ್ಸಿಗೆ ಹೇಳಿದನು. ಎಂಥ ಸ್ವರೂಪದ ಇಟ್ಟಿಗೆಗಳನ್ನು ಚಯನ ಮಾಡಬೇಕು, § ಎಷ್ಟು ಸಂಖ್ಯೆಯ ಇಟ್ಟಿಗೆಗಳನ್ನು ಚಯನಮಾಡಬೇಕು, ಅಗ್ನಿಯನ್ನು ಹೇಗೆ ಉಪಾಸನೆಮಾಡಬೇಕು – ಇವೆಲ್ಲವನ್ನೂ ಹೇಳಿದನು

* 'ಅನಂತಲೋಕ' ಎಂದರೆ ಕೊನೆಯು ಇಲ್ಲವೇ ಇಲ್ಲದಲೋಕವೆಂದು ಅರ್ಥಮಾಡಿದರೆ ಮುಕ್ತಿಯೆಂದು ಅರ್ಥವಾಗುವದು; ಆದರೆ ಇದು ಪ್ರಕರಣಕ್ಕೆ ಒಪ್ಪುವದಿಲ್ಲವಾದ್ದರಿಂದ ಸ್ವರ್ಗಲೋಕವೆಂದು ಅರ್ಥಮಾಡಿರುತ್ತದೆ

† ವಿರಾಟ್ಪುರುಷನು ಅಗ್ನಿ, ವಾಯು, ಆದಿತ್ಯ- ಎಂಬ ರೂಪಗಳಿಂದ ಇರುತ್ತಾನೆ ಎಂದು ಶ್ರುತಿ ಇದೆ, ಆದ್ದರಿಂದ ವಿರಾಡ್ರೂಪದಿಂದ ಅಗ್ನಿಯು ಜಗತ್ತಿಗೆ ಆಧಾರವಾಗಿದ್ದಂತಾಯಿತು. (ಆ॥)

‡ ಸ ವೈ ಶರೀರೀ ಪ್ರಥಮಃ ಸ ವೈ ಪುರುಷ ಉಚ್ಯತೇ । ಆದಿಕರ್ತಾ ಸ ಭೂತಾನಾಂ ಬ್ರಹ್ಮಾಗ್ರೇ ಸಮವರ್ತತ ॥ ಎಂಬ ಮನುಸ್ಮೃತಿಯಂತೆ ಅಗ್ನಿಯು ಸೃಷ್ಟಿಯಲ್ಲಿ ವಿರಾಡ್ರೂಪದಿಂದ ಹುಟ್ಟಿದ ಪ್ರಥಮಶರೀರಿಯು, ಮಿಕ್ಕ ಶರೀರಿಗಳೆಲ್ಲ ವಿರಾಜನಿಂದ ಜನಿಸಿದವರು.

§ ಚಯನಪ್ರಕರಣದಲ್ಲಿ ಅಗ್ನಿಯನ್ನು ಹೊತ್ತಿಸುವ ಕ್ರಮ, ಇಟ್ಟಿಗೆಗಳನ್ನು ಹಾಕಿ ಯಾಗಕ್ಕೆ ಜಗಲಿಕಟ್ಟುವ ಕ್ರಮ- ಇದನ್ನೆಲ್ಲ ಹೇಳಿದೆ. ಇಲ್ಲಿ ಕರ್ಮೋಪಾಸನೆಗಳೆರಡನ್ನೂ ತಿಳಿಸುವದಕ್ಕಾಗಿ ಸಂಕ್ಷೇಪವಾಗಿ ಇದನ್ನು ಸೂಚಿಸಿರುತ್ತದೆ.

ಎಂದರ್ಥ. ಆ ನಚಿಕೇತಸು ಆ ಮೃತ್ಯುವು ಹೇಳಿದ್ದನ್ನು ಹಾಗೆಯೇ ತಿಳಿದು ಕೊಂಡು ಹೇಳಿದನು, ಮತ್ತೆ ಉಚ್ಚರಿಸಿದನು. ಹಾಗೆ ತಿರುಗಿ ಹೇಳಿದ್ದನ್ನು ಕಂಡು ತುಷ್ಟನಾಗಿ ಮೃತ್ಯುವು ಈ ಮೂರು ವರಗಳಲ್ಲದೆ ಮತ್ತೊಂದು ವರವನ್ನು ಕೊಡಬೇಕೆಂದು ಮತ್ತೂ ಹೀಗೆ ಹೇಳುತ್ತಾನೆ.

**ಸಂತೋಷಪಟ್ಟ (ಆ)ಮಹಾತ್ಮನು ಅವನನ್ನು ಕುರಿತು (ಹೀಗೆಂದು) ನುಡಿದನು: "ನಿನಗೆ ಈಗ ಮತ್ತೂ (ಒಂದು) ವರವನ್ನು ಕೊಡುವೆನು. ಈ ಅಗ್ನಿಯು ನಿನ್ನ ಹೆಸರಿನಿಂದಲೇ (ಪ್ರಸಿದ್ಧ)ವಾಗಿರುವದು. ಈ ಅನೇಕರೂಪವಾದ ಧ್ವನಿಯುಳ್ಳ ಮಾಲಿಕೆಯನ್ನೂ ತೆಗೆದುಕೊ." ||೧೬||**

ಹೇಗೆಂದರೆ– ಶಿಷ್ಯನ ಯೋಗ್ಯತೆಯನ್ನು ಕಂಡು, ಪ್ರೀತಿಯನ್ನು ಅನುಭವಿಸಿ ಆ ಉದಾರಬುದ್ಧಿಯಾದ ಮಹಾತ್ಮನು ಆ ನಚಿಕೇತಸ್ಸನ್ನು ಕುರಿತು ಹೀಗೆಂದು ನುಡಿದನು: "ನಿನಗೆ ನನ್ನ ಸಂತೋಷನಿಮಿತ್ತದಿಂದ ಮತ್ತೊಂದು ನಾಲ್ಕನೆಯ ವರವನ್ನು ಈಗ ಇಲ್ಲಿ ಕೊಡುತ್ತೇನೆ. ನಾನು ಹೇಳಿದ ಈ ಅಗ್ನಿಯು ನಚಿಕೇತ ನೆಂಬ ನಿನ್ನ ಹೆಸರಿನಿಂದಲೇ ಮುಂದೆ ಪ್ರಸಿದ್ಧವಾಗುವದು. ಮತ್ತು ಝಣಝಣ ವೆಂದು ಶಬ್ದಮಾಡುತ್ತಿರುವ ಈ ರತ್ನಮಯವಾದ ಅನೇಕರೂಪವಾದ ಎಂದರೆ (ಬೇರೆ ಬೇರೆ ರತ್ನಗಳಿಂದ) ವಿಚಿತ್ರವಾಗಿರುವ ಈ ಮಾಲೆಯನ್ನು ತೆಗೆದುಕೊ" ಅಥವಾ ("ಸೃಙ್ಕಾಂ"* ಎಂದರೆ) ಉತ್ತಮವಾದ ಕರ್ಮಮಯವಾದ ಗತಿ ಯನ್ನು ತೆಗೆದುಕೊ, ಎಂದರೆ ಅನೇಕಫಲಕ್ಕೆ ಕಾರಣವಾಗಿರುವ ಬೇರೆ ಕರ್ಮ ವಿಜ್ಞಾನವನ್ನೂ (ನನ್ನಿಂದ) ಪಡೆಯುವವನಾಗು ಎಂದರ್ಥ.

**ತ್ರಿಣಾಚಿಕೇತನಾಗಿ, ಮೂರರಿಂದ ಸಂಧಿಯನ್ನು ಪಡೆದು ಮೂರು ಕರ್ಮಗಳನ್ನು ಮಾಡಿದಾತನು ಜನ್ಮಮೃತ್ಯುಗಳೆರಡನ್ನೂ ದಾಟುತ್ತಾನೆ. ಬ್ರಹ್ಮನಿಂದ ಹುಟ್ಟಿದ ಜ್ಞಾತೃವೂ ಸ್ತೋತ್ರಕ್ಕೆ ತಕ್ಕವನೂ ಆಗಿ ರುವ ದೇವನನ್ನು ತಿಳಿದು ಉಪಾಸನೆ ಮಾಡಿದವನು ಈ ಶಾಂತಿಯನ್ನು ಅತ್ಯಂತವಾಗಿ ಹೊಂದುತ್ತಾನೆ. ||೧೭||**

ಮತ್ತೂ ಕರ್ಮದ † ಸ್ತುತಿಯನ್ನೇ ಹೇಳುತ್ತಾನೆ. ತ್ರಿಣಾಚಿಕೇತಸು

* 'ಸೃಙ್ಕಾಂ'– ಎಂಬುದಕ್ಕೆ ಶಬ್ದವುಳ್ಳ (ಮಾಲೆ) ಎಂದು ಮೊದಲು ಅರ್ಥಮಾಡಿತ್ತು, ಈಗ ಗತಿಯನ್ನು ಎಂದು ಅರ್ಥಮಾಡಿರುತ್ತದೆ. ಮೃತ್ಯುವು ಒಂದು ರತ್ನಮಾಲೆಯನ್ನು ಕೊಟ್ಟನು ಎಂದು ಮೊದಲನೆಯ ವ್ಯಾಖ್ಯಾನಕ್ಕೆ ಅರ್ಥ. ಕೇವಲ ಅಗ್ನಿವಿದ್ಯವನ್ನೇ ಅಲ್ಲದೆ ನಾನಾಪ್ರಕಾರವಾದ ಕರ್ಮದ ವಿಚಾರವನ್ನೂ ತಿಳಿಯುವ ಹಾಗೆ ಅನುಗ್ರಹಿಸಿದನು– ಎಂದು ಎರಡನೆಯ ವ್ಯಾಖ್ಯಾನದ ಅರ್ಥ. (೨-೩ ನೆಯ ಮಂತ್ರವನ್ನು ನೋಡಿ.)

† ಈ ಮಂತ್ರವು ಜ್ಞಾನವಿಚಾರದ ಹಾಗೆ ತೋರುತ್ತದೆಯಾದರೂ ನಿಜವಾಗಿ ಹಾಗಿಲ್ಲ; ಏಕೆಂದರೆ ಅಗ್ನಿವಿದ್ಯೆಯು ಇಲ್ಲಿ ಪ್ರಕೃತವಾಗಿದೆ. ಇದನ್ನು ಮುಂದಿನ ಮಂತ್ರದಲ್ಲಿ ಉಪಸಂಹಾರ

ಎಂದರೆ ಮೂರು ಸಲ ನಾಚಿಕೇತವೆಂಬ ಅಗ್ನಿಯನ್ನು ಚಯನಮಾಡಿದವನು, ಎಂದರೆ ಅದರ ಉಪಾಸನೆಯನ್ನು ಮಾಡಿದವನು. ಅಥವಾ ಅದರ ವಿಷಯವಾಗಿ ಅಧ್ಯಯನಮಾಡಿದವನು, ಅಥವಾ ಅದರ ಕರ್ಮವನ್ನು* ಮಾಡಿದವನು 'ಮೂರರಿಂದ ಸಂಧಿಯನ್ನು ಪಡೆದು' ಎಂದರೆ ತಾಯಿ, ತಂದೆ, ಆಚಾರ್ಯ– ಇವರಿಂದ ಸಂಧಿಯನ್ನು ಎಂದರೆ ಸಂಬಂಧವನ್ನು ಪಡೆದು; ತಾಯಿ ಮುಂತಾದವರ ಅಪ್ಪಣೆಯನ್ನು ಸರಿಯಾಗಿ ಪಡೆದು ಎಂದರ್ಥ. ಆ (ತಾಯಿ ಮುಂತಾದವರ ಉಪದೇಶವೇ) ಪ್ರಾಮಾಣ್ಯಕ್ಕೆ† ಕಾರಣವೆಂದು "ಹೇಗೆ ತಾಯಿಯ ಉಪದೇಶವುಳ್ಳವನೂ ತಂದೆಯ ಉಪದೇಶವುಳ್ಳವನೂ (ಆಚಾರ್ಯರ ಉಪದೇಶವುಳ್ಳವನೂ ಹೇಳಿಯಾನೋ ಹಾಗೆಯೇ ಹೇಳಿದ್ದಾನೆ)" (ಬೃ) ಎಂಬ ಬೇರೆ ಶ್ರುತಿಯಿಂದ ಗೊತ್ತಾಗುತ್ತದೆ. ಅಥವಾ‡ ('ಮೂರರಿಂದ' ಎಂದರೆ) ವೇದ, ಸ್ಮೃತಿ, ಶಿಷ್ಟರು- ಇವರಿಂದ, ಅಥವಾ ಪ್ರತ್ಯಕ್ಷ, ಅನುಮಾನ, ಆಗಮ- ಇವುಗಳಿಂದ (ಎಂದೂ ವ್ಯಾಖ್ಯಾನಮಾಡಬಹುದು.) ಏಕೆಂದರೆ ಇವುಗಳಿಂದ (ತತ್ತ್ವವು) ಶುದ್ಧಿಯಾಗುವದೆಂಬುದು ಪ್ರತ್ಯಕ್ಷವಾಗಿದೆ§. ಮೂರು ಕರ್ಮಗಳನ್ನು ಮಾಡಿದವನು ಎಂದರೆ ಯಜ್ಞ, ಅಧ್ಯಯನ, ದಾನ- ಇವುಗಳನ್ನು ಮಾಡಿದವನು. ಇಂಥವನು ಹುಟ್ಟುಸಾವುಗಳೆರಡನ್ನೂ ಮೀರುತ್ತಾನೆ. ಮತ್ತು ಬ್ರಹ್ಮನಿಂದ ಎಂದರೆ ಹಿರಣ್ಯಗರ್ಭನಿಂದ ಹುಟ್ಟಿದವನು, ಬ್ರಹ್ಮಜನು; ಬ್ರಹ್ಮಜನಾಗಿ ಜ್ಞಾತೃವಾಗಿರುವವನು ಬ್ರಹ್ಮಜಜ್ಞನು. ಏಕೆಂದರೆ ಆತನು|| ಸರ್ವಜ್ಞ

ಮಾಡಿ ೧೯ನೆಯ ಮಂತ್ರದಿಂದ ಮುಂದಕ್ಕೆ ಜ್ಞಾನವನ್ನು ಪ್ರಾರಂಭಿಸಿರುತ್ತದೆ ಆದ್ದರಿಂದ ಇಲ್ಲಿ ಜ್ಞಾನವೆಂದರೆ ಉಪಾಸನೆ ಉಪಾಸನೆ ಮತ್ತು ಕರ್ಮ ಇವೆರಡನ್ನೂ ಸೇರಿಸಿಕೊಂಡು ಅನುಷ್ಠಾನ ಮಾಡುವದರ ಫಲವನ್ನು ಹೇಳಿ ಕರ್ಮದ ಪ್ರಕರಣವನ್ನು ಉಪಸಂಹಾರಮಾಡುವದು ಯುಕ್ತವೇ ಆಗಿರುತ್ತದೆ, ಏಕೆಂದರೆ ಉಪಾಸನೆಯೂ ಮಾನಸಿಕವಾದ ಕರ್ಮವೇ– ಎಂದು ಭಾವ

* 'ತ್ರಿಣಾಚಿಕೇತ'– ಎಂದರೆ ಮೂರು ಸಲ ನಾಚಿಕೇತವುಳ್ಳ ಎಂದಿಷ್ಟೇ ಅರ್ಥವಾಗುವದರಿಂದ ಅಧ್ಯಯನ, ಕರ್ಮ, ಉಪಾಸನೆ- ಇವುಗಳಲ್ಲಿ ಯಾವದನ್ನಾದರೂ ತೆಗೆದುಕೊಳ್ಳಬಹುದು ಪ್ರಕರಣವನ್ನು ನೋಡಿದರೆ ಮೂರನ್ನೂ ತೆಗೆದುಕೊಳ್ಳುವದು ಯುಕ್ತವೆಂದು ತೋರುವದು

† ತಾಯಿಯಿಂದ ತಿಳಿದದ್ದು ತಂದೆಯುಪದೇಶದಿಂದ ಗಟ್ಟಿಯಾಗುವದು, ಗುರುವಿನ ಉಪದೇಶದಿಂದ ನಿಶ್ಚಿತವಾಗುವದು

‡ "ಶ್ರುತಿಃ ಸ್ಮೃತಿಃ ಸದಾಚಾರಃ" ಎಂಬ ಮನುಸ್ಮೃತಿಯನ್ನೂ "ಪ್ರತ್ಯಕ್ಷಮನುಮಾನಂ ಚ ಶಾಸ್ತ್ರಂ ಚ ವಿವಿಧಾಗಮಮ್ । ತ್ರಯಂ ಸುವಿದಿತಂ ಕಾರ್ಯಂ ಧರ್ಮಶುದ್ಧಿಮಭೀಪ್ಸತಾ॥" ಎಂಬ ಮನುಸ್ಮೃತಿಯನ್ನೂ ಅನುಸರಿಸಿ ವ್ಯಾಖ್ಯಾನಮಾಡಿದೆ § ಅನುಭವಸಿದ್ಧವಾಗಿದೆ.

|| ಹಿರಣ್ಯಗರ್ಭನಿಗೆ ಜ್ಞಾನವು ಸಹಜವಾಗಿಯೇ ಇರುವದೆಂದು ಸ್ಮೃತಿಪ್ರಸಿದ್ಧಿ. ಅವನಿಂದ ಹುಟ್ಟಿರುವ ವಿರಾಟ್ಪುರುಷನೂ ಹಾಗೆಯೇ.

ನೆಂದು ಪ್ರಸಿದ್ಧವಾಗಿದೆ. ಪ್ರಕಾಶವಂತನಾಗಿರುವದರಿಂದ ಈತನು ದೇವನೆನಿಸುವನು; ಜ್ಞಾನಾದಿಗುಣಗಳಿರುವದರಿಂದ* ಸ್ತುತ್ಯನಾಗಿರುವನು. (ಇಂಥ ವಿರಾಟ್ಪುರುಷನನ್ನು) ಶಾಸ್ತ್ರರೀತಿಯಿಂದ ತಿಳಿದು ತಾನೇ ಆತನೆಂದು ಉಪಾಸನೆ ಮಾಡಿ ಎಂದರೆ (ಭಾವನೆಯಿಂದ) ತಿಳಿದುಕೊಂಡು (ಅದರ ಫಲವಾಗಿ) ಈ ತನ್ನ ಮನಸ್ಸಿಗೇ ಗೊತ್ತಾಗುವ ಶಾಂತಿಯನ್ನು ಎಂದರೆ ಉಪರತಿಯನ್ನು ಅತಿಶಯವಾಗಿ ಹೊಂದುತ್ತಾನೆ †ಜ್ಞಾನಕರ್ಮಗಳೆರಡನ್ನೂ ಕೂಡಿಸಿ ಅನುಷ್ಠಾನ ಮಾಡುವದರಿಂದ ವೈರಾಜನ ಪದವಿಯನ್ನು ಪಡೆಯುತ್ತಾನೆ ಎಂದರ್ಥ.

ಈಗ ಅಗ್ನಿಯ ವಿಷಯವಾದ ತಿಳಿವಳಿಕೆ ಮತ್ತು ಉಪಾಸನೆ‡- ಇವುಗಳ ಫಲವನ್ನೂ (ಈ) ಪ್ರಕರಣವನ್ನೂ ಉಪಸಂಹಾರಮಾಡುತ್ತಾನೆ:—

**ಈ ಮೂರನ್ನೂ ತಿಳಿದುಕೊಂಡು ತ್ರಿಣಾಚಿಕೇತನಾಗಿ ಯಾವ ಜ್ಞಾನಿಯು ನಾಚಿಕೇತನನ್ನು ಹೀಗೆ ಚಯನಮಾಡುವನೋ ಅವನು ಮೃತ್ಯುವಿನ ಪಾಶವನ್ನು ಮೊದಲೇ ಬಿಡಿಸಿಕೊಂಡು ಸ್ವರ್ಗಲೋಕದಲ್ಲಿ ಶೋಕವನ್ನು ದಾಟಿ ಸುಖಪಡುವನು.** || ೧೮ ||

ಹಿಂದೆ (೧೫ರಲ್ಲಿ) ಹೇಳಿದಂತೆ ಇಟ್ಟಿಗೆಗಳು ಎಂಥವು, ಎಷ್ಟು, ಮತ್ತು ಹೇಗೆ- ಎಂಬ ಈ ಮೂರನ್ನು ತಿಳಿದುಕೊಂಡು ಯಾವ ಜಾಣನು ತಾನೇ ಈ ಅಗ್ನಿಯೆಂದು ನಾಚಿಕೇತಾಗ್ನಿಯನ್ನು ಹೀಗೆ ಧ್ಯಾನಮಾಡುತ್ತಿರುವನೋ ಆತನು ಅಧರ್ಮ,ಅಜ್ಞಾನ, ರಾಗ, ದ್ವೇಷ- ಮುಂತಾದ ಸ್ವರೂಪವಾಗಿರುವ ಮೃತ್ಯುವಿನ ಪಾಶಗಳನ್ನು ಮೊದಲೇ ಬಿಡಿಸಿಕೊಂಡು—ಎಂದರೆ ಶರೀರವು ಬಿದ್ದುಹೋಗುವದಕ್ಕೆ (ಮೊದಲೇ ಬಿಡಿಸಿಕೊಂಡು) ಎಂದರ್ಥ. ಶೋಕಗಳನ್ನು ದಾಟಿ ಎಂದರೆ ಮನಸ್ಸಿನ ದುಃಖಗಳು ಯಾವವೂ ಇಲ್ಲದೆ ಎಂದು ತಾತ್ಪರ್ಯ. ಸ್ವರ್ಗಲೋಕದಲ್ಲಿ ಎಂದರೆ ವಿರಾಡಾತ್ಮನ ಲೋಕದಲ್ಲಿ ವಿರಾಡಾತ್ಮಸ್ವರೂಪವನ್ನೇ ಹೊಂದಿ † (ಯಾವ ಮನಸ್ಸಿನ ದುಃಖವೂ ಇಲ್ಲದೆ) ಆನಂದಪಡುತ್ತಿರುವನು.

---

* ಜ್ಞಾನಮಪ್ರತಿಘಂ ಯಸ್ಯ ವೈರಾಗ್ಯಂ ಚ ಜಗತ್ಪತೇಃ| ಐಶ್ವರ್ಯಂ ಚೈವ ಧರ್ಮಶ್ಚ ಸಹ ಸಿದ್ಧಂ ಚತುಷ್ಟಯಮ್ || ಎಂಬ ಸ್ಮೃತಿಯಂತೆ ಜ್ಞಾನ, ವೈರಾಗ್ಯ, ಐಶ್ವರ್ಯ, ಧರ್ಮ- ಎಂಬ ನಾಲ್ಕು ಗುಣಗಳುಳ್ಳವನು.

† ತಿಳಿದು ಅನುಷ್ಠಾನ ಮಾಡುವದೆಂಬುದು ಕರ್ಮರೂಪವಾದ ಚಯನಕ್ಕೂ ಉಪಾಸನಾರೂಪವಾದ ಚಯನಕ್ಕೂ ಸಮವಾಗಿದೆ, ಇದು ವಿದ್ಯಾಪ್ರಕರಣವಾದ್ದರಿಂದ 'ಉಪಾಸನೆ' ಎಂದು ಅರ್ಥಮಾಡುವದೇ ಯುಕ್ತ.

‡ ವಿರಾಡುಪಾಸನೆಯಿಂದ ಬದುಕಿರುವಾಗಲೇ ಅಧರ್ಮಾದಿಗಳು ತೊಲಗಿ ಶಾಂತಿಯುಂಟಾಗುವುದು, ಸತ್ತ ಮೇಲೆ ವಿರಾಟ್ಪುರುಷನೊಡನೆ ಸಾಯುಜ್ಯವು ದೊರಕುವದು— ಎಂದು ಭಾವ.

**ಎಲೈ ನಚಿಕೇತನೆ, ಸ್ವರ್ಗಕ್ಕೆ ಬೇಕಾದ ಈ ಅಗ್ನಿಯೇ ನೀನು ಎರಡನೆಯ ವರವಾಗಿ ಕೇಳಿದ್ದು. ಜನಗಳು ಈ ಅಗ್ನಿಯನ್ನು ನಿನ್ನ (ಹೆಸರಿನಿಂದಲೇ) ಮುಂದೆ ಕರೆಯುವರು. ಎಲೈ ನಚಿಕೇತನೆ, ಮೂರನೆಯ ವರವನ್ನು ಕೇಳಿಕೊ. || ೧೯ ||**

ಎಲೈ ನಚಿಕೇತನೆ, ಇದೇ ಸ್ವರ್ಗವನ್ನು ಸಾಧಿಸುವದಕ್ಕೆ ಬೇಕಾಗಿರುವ ಅಗ್ನಿಯು, (ಇದೇ ನಾನು) ನಿನಗೆ ಕೊಟ್ಟಿರುವ ವರವು. ಅಗ್ನಿವಿದ್ಯೆಯೆಂಬ ವರವನ್ನು ನೀನು ಎರಡನೆಯ ವರವಾಗಿ ಕೇಳಿದ್ದೆಯಷ್ಟೆ; ಇಗೋ ಆ ಅಗ್ನಿವಿದ್ಯೆಯೆಂಬ ವರವನ್ನು ಕೊಟ್ಟಿದ್ದೇನೆ– ಎಂದು ಹಿಂದೆ ಹೇಳಿದ್ದನ್ನೇ ಉಪಸಂಹಾರ ಮಾಡಿರುತ್ತದೆ. ಮತ್ತು ಈ ಅಗ್ನಿಯನ್ನು ಜನಗಳು ನಿನ್ನ ಹೆಸರಿನಿಂದಲೇ ಮುಂದೆ ಕರೆಯುವರು ; ಇದು, ನಿನ್ನನ್ನು ಕಂಡು ಸಂತೋಷವಾದ್ದರಿಂದ ನಾನು ಕೊಟ್ಟ ನಾಲ್ಕನೆಯ* ವರವು. ಎಲೈ ನಚಿಕೇತನೆ, ಮೂರನೆಯ ವರವನ್ನು ಕೇಳಿಕೊ, ಏಕೆಂದರೆ ಅದನ್ನು ಕೊಡದಿದ್ದರೆ ನಾನು ನಿನಗೆ (ಇನ್ನೂ) ಋಣಿಯಾಗಿಯೇ ಇರುವೆನು– ಎಂದು ಅಭಿಪ್ರಾಯ.

## ಮೂರನೆಯ ವರ: ಆತ್ಮವಿದ್ಯೆ

ಈ ಎರಡು ವರಗಳಿಂದ ಸೂಚಿತವಾಗಿರುವ ವಸ್ತುವನ್ನೇ ವಿಧಿಯನ್ನೂ ಪ್ರತಿಷೇಧವನ್ನೂ ತಿಳಿಸುವದಕ್ಕಾಗಿ ಬಂದಿರುವ ಹಿಂದಿನ ಮಂತ್ರಬ್ರಾಹ್ಮಣರೂಪವಾದ† ಗ್ರಂಥದಿಂದ ತಿಳಿದುಕೊಳ್ಳಬೇಕಾದದ್ದು ; ಇಷ್ಟೇ ಹೊರತು, ಆತ್ಮತತ್ತ್ವದ ವಿಷಯವಾದ ವಿಜ್ಞಾನವು ಇದ್ದುದ್ದು ಇದ್ದಂತೆ (ಅದರಿಂದ ಗೊತ್ತಾಗುವದಿಲ್ಲ.) ಆದ್ದರಿಂದ ವಿಧಿ, ಪ್ರತಿಷೇಧ- ಎಂಬಿವುಗಳ ಫಲದ ವಿಷಯವಾಗಿಯೂ ಸಂಸಾರಕ್ಕೆ ಕಾರಣವಾಗಿಯೂ ಜೀವರಿಗೆ ಸ್ವಾಭಾವಿಕವಾಗಿಯೂ ಇರುವ– ಆತ್ಮನಲ್ಲಿ ಕ್ರಿಯಾಕಾರಕಫಲಗಳನ್ನು ಹುಟ್ಟುಗಟ್ಟುವದೆಂಬ– ಅಜ್ಞಾನವನ್ನು‡ ಹೋಗಲಾಡಿಸುವದಕ್ಕಾಗಿ ಇದಕ್ಕೆ ವಿರುದ್ಧವಾಗಿ ಕ್ರಿಯಾಕಾರಕಫಲಗಳನ್ನು ಆರೋಪಣೆಮಾಡುವದಲ್ಲವಾಗಿಯೂ ಅತ್ಯಂತಿಕವಾಗಿಯೂ ಹಿತವಾಗಿರುವ (ಮುಕ್ತಿಯೆಂಬ) ಪ್ರಯೋ

* ಇದು ನಚಿಕೇತನು ಕೇಳಿಕೊಂಡ ಮೂರು ವರಗಳಲ್ಲಿ ಸೇರಿದ್ದಲ್ಲವೆಂದು ಭಾವ ತಂದೆಯು ಪ್ರಸನ್ನನಾಗಿರುವದು, ಅಗ್ನಿವಿದ್ಯೆ, ಆತ್ಮವಿದ್ಯೆ- ಈ ಮೂರನ್ನೇ ನಚಿಕೇತನು ಕೇಳಿದ್ದನು. ವರಗಳ ಸಂಖ್ಯೆಯ ವಿಷಯವಾಗಿ ಬ್ರ|| ಸೂ|| ೧-೪-೬ ರಲ್ಲಿ ಚರ್ಚಿಸಿರುತ್ತವೆ

† ಕರ್ಮಕಾಂಡದಿಂದ  ‡ ಅಜ್ಞಾನವೆಂದರೆ ಆತ್ಮನಲ್ಲಿ ಕ್ರಿಯಾಕಾರಕಫಲಗಳನ್ನು ಕಲ್ಪಿಸುವದು, ಈಚಿನ ಕೆಲವರು ವೇದಾಂತಿಗಳು ಹೇಳುವಂತೆ ಮೂಲಾಜ್ಞಾನವೆಂಬ ಒಂದಾನೊಂದು ಶಕ್ತಿಯಲ್ಲ

ಜನವನ್ನು ಕೊಡುವದಾಗಿಯೂ [ಅತ್ಯಂತಿಕನಿಃಶ್ರೇಯಸಪ್ರಯೋಜನಂ] ಇರುವ ಬ್ರಹ್ಮಾತ್ಮೈಕತ್ವದ* ತಿಳಿವಳಿಕೆಯನ್ನು ಹೇಳಬೇಕೆಂದು ಮುಂದಿನ ಗ್ರಂಥವನ್ನು ಆರಂಭಿಸಿರುತ್ತದೆ. ಮೂರನೆಯ ವರಕ್ಕೆ ವಿಷಯವಾಗಿರುವ ಆತ್ಮಜ್ಞಾನವಿಲ್ಲದ್ದರಿಂದ (ನಚಿಕೇತನು) ಎರಡನೆಯ ವರವನ್ನು ಪಡದರೂ ಕೃತಕೃತ್ಯನಾಗಲಿಲ್ಲ- ಎಂಬ ಕಥೆಯಿಂದ ಈ ವಿಷಯವನ್ನು ವಿವರಿಸಿರುತ್ತದೆ. ಅದು ಹೇಗೆ ಗೊತ್ತೆಂದರೆ, ಹಿಂದೆ ಹೇಳಿದಂತೆ ಕರ್ಮಗೋಚರವಾಗಿಯೂ ಸಾಧ್ಯಸಾಧನರೂಪವಾಗಿಯೂ ಅನಿತ್ಯವಾಗಿಯೂ ಇರುವ (ಫಲಕ್ಕೆ) ಬೇಸತ್ತಿರುವವನಿಗೇ ಆತ್ಮಜ್ಞಾನದಲ್ಲಿ ಅಧಿಕಾರವು- ಎಂದು ಆ (ಫಲವನ್ನು) ನಿಂದಿಸುವದಕ್ಕಾಗಿ ಪುತ್ರಾದಿಗಳನ್ನು ಹೇಳಿ (ನಚಿಕೇತನಿಗೆ ಇಲ್ಲಿ) ಆಶೆಯನ್ನು ತೋರಿಸಿರುತ್ತದೆ.† (ಆದ್ದರಿಂದ ನಚಿಕೇತನು ಕೃತಕೃತ್ಯನಾಗಲಿಲ್ಲವೆಂದಂತಾಯಿತು )

'ಎಲೈ ನಚಿಕೇತನೆ, ಮೂರನೆಯ ವರವನ್ನು ಕೇಳಿಕೊ' ಎಂದು (ಯಮನು) ಹೇಳಲಾಗಿ ನಚಿಕೇತನು ನುಡಿದದ್ದೇನೆಂದರೆ: —

**ಮನುಷ್ಯನು ಸತ್ತ ಮೇಲೆ- ಇರುತ್ತಾನೆಂದು ಕೆಲವರು, ಇವನು ಇರುವದಿಲ್ಲ ಎಂದು ಕೆಲವರು- ಹೀಗೆ ಸಂಶಯವುಂಟಷ್ಟೆ, ನಿನ್ನಿಂದ ಅನುಶಾಸನವನ್ನು ಪಡೆದು ನಾನು ಈ (ವಿಷಯದ ನಿಶ್ಚಯವನ್ನು) ತಿಳಿಯಲಿಚ್ಛಿಸುವೆನು. (ನಾನು ಕೇಳಿದ) ವರಗಳಲ್ಲಿ ಈ ವರವೇ ಮೂರನೆಯದು ||೨೦||**

ಮನುಷ್ಯನು ಸತ್ತುಹೋದ ಮೇಲೆ, 'ಇರುತ್ತಾನೆಂದು ಕೆಲವರು'; ಎಂದರೆ ಶರೀರ, ಇಂದ್ರಿಯ, ಮನಸ್ಸು, ಬುದ್ಧಿ ಇವುಗಳಿಗಿಂತ ಬೇರೆಯಾಗಿ ಬೇರೊಂದು ದೇಹವನ್ನು ಪಡೆಯುವಂಥ ಆತ್ಮನೊಬ್ಬನು ಇದ್ದಾನೆ-ಎಂದು ಕೆಲವರು‡(ಹೇಳುತ್ತಾರೆ). 'ಇವನು ಇರುವದಿಲ್ಲ ಎಂದು ಕೆಲವರು' ‡; ಇಂಥ (ಆತ್ಮನು) ಇರುವದೇ ಇಲ್ಲ ಎಂದು ಕೆಲವರು ಹೇಳುತ್ತಾರೆ ಹೀಗೆ ಸಂಶಯವುಂಟಷ್ಟೆ ಹೀಗಿರುವದರಿಂದ (ಈ ವಿಷಯದಲ್ಲಿ ಹೀಗೆಯೇ ಸರಿ ಎಂದು) ಪ್ರತ್ಯಕ್ಷದಿಂದಲಾಗಲಿ § ಅನುಮಾನ

* ನಮ್ಮೆಲ್ಲರ ಆತ್ಮವು ಅಸಂಸಾರಿಯಾದ ಬ್ರಹ್ಮವು, ಅದು ಒಂದೇ- ಎಂಬ ತಿಳಿವಳಿಕೆ

† ಪುತ್ರಾದಿಫಲಗಳು ಹಿಂದೆ ಹೇಳಿದ ಕರ್ಮಕಾಂಡದ ಫಲಗಳು. ಇವುಗಳನ್ನು ಕೊಡುತ್ತೇನೆಂದರೂ ನಚಿಕೇತನು ಬೇಡವೆಂದು ಆತ್ಮಜ್ಞಾನವನ್ನೇ ಕೇಳಿರುತ್ತಾನೆ ಆದ್ದರಿಂದ ಮೂರನೆಯ ವರವಾದ ಆತ್ಮಜ್ಞಾನವಿಲ್ಲದೆ ಕೃತಕೃತ್ಯನಾಗಲಿಲ್ಲ - ಎಂದು ತೋರಿಸಿದಂತಾಯಿತೆಂದು ಭಾವ

‡ ದೇಹಾದಿಗಳಿಗಿಂತ ಬೇರೆಯಾಗಿರುವ ಆತ್ಮನೊಬ್ಬನು ಉಂಟೆಂದು ಮೀಮಾಂಸಕರು ಮುಂತಾದವರು ಹೇಳುವರು ಇಲ್ಲವೆಂಬುದು ಚಾರ್ವಾಕರ ಮತ- ಈ ಎರಡು ಪಕ್ಷಗಳಲ್ಲಿ ಒಂದನೆಯ ಪಕ್ಷವೇ ಸರಿಯಾದದ್ದೆಂದು ನಮ್ಮ ಜನರು ಇಟ್ಟುಕೊಂಡು ನಡೆಯುವರು.

§ ಪ್ರತ್ಯಕ್ಷವಾಗಿ ನಿರ್ಣಯವಾಗಿರುವ ವಸ್ತುವಿನಲ್ಲಿ ಸಂದೇಹವಿರುವದಿಲ್ಲ, ನಿರ್ಣಯವಿಲ್ಲದ

ದಿಂದಲಾಗಲಿ ನಿರ್ಣಯಿಸಿ ನಾವು ತಿಳಿಯಲಾರೆವು. ಆದರೆ ಪರಮಪುರುಷಾರ್ಥವು * ಇದನ್ನು ತಿಳಿದುಕೊಳ್ಳುವದನ್ನವಲಂಬಿಸಿರುವದು; ಆದ್ದರಿಂದ ನಿನ್ನಿಂದ ಬೋಧಿತನಾಗಿ ನಾನು ಇದನ್ನು ಅರಿಯಲಿಚ್ಛಿಸುವೆನು. ನಾನು ಕೇಳಿದ ವರಗಳಲ್ಲಿ ಇದೇ ಉಳಿದಿರುವ ಮೂರನೆಯ ವರವು.

## ನಚಿಕೇತನ ಯೋಗ್ಯತಾಪರೀಕ್ಷೆ

**ಪೂರ್ವದಲ್ಲಿ ದೇವತೆಗಳೂ ಈ ವಿಷಯದಲ್ಲಿ ಸಂಶಯಪಟ್ಟಿದ್ದರು. ಇದು ಸುಜ್ಞೇಯವಾದದ್ದಲ್ಲ. ಈ ಧರ್ಮವು ಅಣುವಾದದ್ದು. ನಚಿಕೇತನೆ, ಬೇರೊಂದು ವರವನ್ನು ಕೇಳಿಕೊ; ನನ್ನನ್ನು ನಿರ್ಬಂಧಪಡಿಸಬೇಡ, ನನಗೆ ಇದನ್ನು ಬಿಟ್ಟುಕೊಡು. ॥ ೨೧ ॥**

ಇವನು ಮುಕ್ತಿಯನ್ನೇ ಗೊತ್ತಾಗಿ ಕೊಡುವ ಆತ್ಮಜ್ಞಾನಕ್ಕೆ ಅರ್ಹನೊ ಅಲ್ಲವೊ– ಎಂದು ಪರೀಕ್ಷಿಸಿ ತಿಳಿಯುವದಕ್ಕಾಗಿ (ಯಮನು) ಹೇಳುತ್ತಾನೆ. ಈ (ಆತ್ಮ)ವಸ್ತುವಿನ ವಿಷಯದಲ್ಲಿ ದೇವತೆಗಳು ಕೂಡ ಪೂರ್ವದಲ್ಲಿ ಸಂದೇಹವುಳ್ಳವರಾಗಿದ್ದರು. ಸಾಮಾನ್ಯಜನರು† ಶ್ರವಣಮಾಡಿದರೂ (ಇದನ್ನು) ಚೆನ್ನಾಗಿ ಅರಿತುಕೊಳ್ಳಲಾರರು, ಏಕೆಂದರೆ ಈ ಆತ್ಮನೆಂಬ ವಸ್ತುವು ಅಣುವಾಗಿರುವದು.‡

ವಸ್ತುವಿನಲ್ಲಿ ಇದು ಹಗ್ಗವೋ ಹಾವೋ ಎಂದು ಸಂದೇಹನಾಗುವದು. 'ನಾನು' ಎಂಬ ಜ್ಞಾನವು, ಪ್ರತ್ಯಕ್ಷವಾಗಿದ್ದರೂ ಆತ್ಮನು ಯಾರೆಂಬ ವಿಷಯದಲ್ಲಿ ನಿರ್ಣಯವಿಲ್ಲದೆ ವಾದಿಗಳು ಜಗಳವಾಡುತ್ತಿರುವರು. ಆದ್ದರಿಂದ ಆತ್ಮನು ಪ್ರತ್ಯಕ್ಷವಿಷಯನಲ್ಲ ಆತ್ಮನು ದೇಹಾಂತರಸಂಬಂಧಿಯಾಗಿರುವನೆಂದು ಅನುಮಾನದಿಂದ ತಿಳಿಯುವದಕ್ಕೆ ಆಗುವದಿಲ್ಲ, ಏಕೆಂದರೆ ಅಗ್ನಿಗೆ ಹೊಗೆ ಇರುವ ಹಾಗೆ ಆತ್ಮನಿಗೆ ಗುರುತಾಗಿ ಯಾವದೂ ಊಹಿಸುವ ಸಾಧನವಿಲ್ಲ. ಬೃಹದಾರಣ್ಯಕಭಾಷ್ಯದ ಅವತರಣಿಕೆಯನ್ನು ನೋಡಿ

* ಆತ್ಮನು ಇಂಥವನು ಎಂದು ತಿಳಿದರೆ ಹಾಗೆ ತಿಳಿಯದೆ ಇರುವದರಿಂದಾಗಿರುವ ಅನರ್ಥರೂಪವಾಗಿರುವ ಸಂಸಾರವು ತೊಲಗುವದು. ಯಾವ ವಿಷಯದಲ್ಲಿ ಸಂದೇಹವಿರುವದೋ ಯಾವದನ್ನು ತಿಳಿದರೆ ಪ್ರಯೋಜನವಿರುವದೋ ಅದನ್ನು ಕುರಿತು ವಿಚಾರಮಾಡಬೇಕು ಆತ್ಮನು ಸಂದಿಗ್ಧನಾಗಿದ್ದಾನೆ, ಆತ್ಮವಿಜ್ಞಾನವು ಪ್ರಯೋಜನವುಳ್ಳದ್ದಾಗಿಯೂ ಇದೆ, ಆದ್ದರಿಂದ ಆತ್ಮನ ಯಾಥಾತ್ಮ್ಯವನ್ನು ಹೇಳು ಎಂದು ಭಾವ

† ಸಾಮಾನ್ಯರಿಗೆ ಹೇಳಿದರೂ ತಿಳಿಯುವದಿಲ್ಲವೆಂಬುದೇ ಅವರಿಗೆ ಆತ್ಮಜ್ಞಾನವನ್ನು ಹೇಳಬಾರದೆಂಬುದಕ್ಕೆ ಕಾರಣ.

‡ ಅಣು ಎಂದರೆ ತಾರ್ಕಿಕರು ಹೇಳುವ ಪರಮಾಣುವಿನ ಪರಿಮಾಣವೆಂದು ಅರ್ಥವಲ್ಲ, ಅತೀಂದ್ರಿಯವಾಗಿರುವದೆಂದರ್ಥ. ಬ್ರ॥ ಸೂ॥ ೨-೩-೨೯.

ಆದ್ದರಿಂದ ನಚಿಕೇತನೆ, ಪ್ರಯೋಜನವಿಷಯದಲ್ಲಿ ಸಂದೇಹವಿಲ್ಲದ* ಮತ್ತೊಂದು ವರವನ್ನು ಕೇಳಿಕೊ; ನನ್ನನ್ನು ಸಾಹುಕಾರನು ಸಾಲಗಾರನನ್ನು (ನಿರ್ಬಂಧಿಸುವಂತೆ) ಒತ್ತಾಯಮಾಡಬೇಡ, ನನಗೆ ಈ ವರವನ್ನು ಬಿಟ್ಟುಕೊಡು.

**ಈ ವಿಷಯದಲ್ಲಿ ದೇವತೆಗಳಿಗೂ ಸಂದೇಹವಾಗಿತ್ತಲ್ಲವೆ? ಎಲೈ ಮೃತ್ಯುವೆ, (ಇದು) ಸುಜ್ಞೇಯವಲ್ಲವೆಂದು ನೀನೂ ಹೇಳುತ್ತಿರುವೆ· ಇದನ್ನು ಹೇಳುವವನು ನಿನ್ನಂಥವನು ಮತ್ತೊಬ್ಬನು ಸಿಕ್ಕಲಾರನು. (ಆದ್ದರಿಂದ) ಇದಕ್ಕೆ ಸಮಾನವಾದದ್ದು ಇನ್ನು ಯಾವ ವರವೂ ಇಲ್ಲ. ॥ ೨೨ ॥**

ಹೀಗೆನ್ನಲು ನಚಿಕೇತನು ಹೇಳುತ್ತಾನೆ: ದೇವತೆಗಳಿಗೂ ಈ ವಸ್ತುವಿನ ವಿಷಯದಲ್ಲಿ ಸಂದೇಹವಾಗಿತ್ತಲ್ಲವೆ? ಹೀಗೆಂದು ನಿನ್ನಿಂದಲೇ ನಮಗೆ ತಿಳಿಯಿತು. ಎಲೈ ಮೃತ್ಯುವೆ. (ಈ) ಆತ್ಮತತ್ತ್ವವು ಸುಲಭವಾಗಿ ತಿಳಿಯತಕ್ಕದ್ದಲ್ಲವೆಂದು ನೀನೂ ಹೇಳುತ್ತಿರುವೆ. ಆದ್ದರಿಂದ, ಎಂದರೆ ಪಂಡಿತರಿಗೂ ತಿಳಿಯತಕ್ಕದ್ದಲ್ಲವಾದ್ದರಿಂದ, ಈ ಆತ್ಮವಸ್ತುವನ್ನು ಹೇಳುವಾತನು— ಹುಡುಕಿದರೂ ನಿನ್ನಂಥ ಮತ್ತೊಬ್ಬ ಜ್ಞಾನಿಯು— ಸಿಕ್ಕಲಾರನು. ಈ ವರವೋ ಎಂದರೆ ಮುಕ್ತಿಪ್ರಾಪ್ತಿಗೆ ಕಾರಣವಾಗಿದೆ. ಆದ್ದರಿಂದ ಇದಕ್ಕೆ ಸಮವಾದ ಬೇರೆ ಯಾವ ವರವೂ ಇಲ್ಲ. ಏಕೆಂದರೆ ಮಿಕ್ಕದ್ದೆಲ್ಲವೂ ಅನಿತ್ಯಫಲವುಳ್ಳದ್ದು— ಎಂದು ಅಭಿಪ್ರಾಯ.

**ನೂರು ಆಯುಸ್ಸುಳ್ಳ ಮಕ್ಕಳನ್ನೂ ಮುಮ್ಮಕ್ಕಳನ್ನೂ ಬೇಡಿಕೊ; ಬಹು ಪಶುಗಳನ್ನೂ ಆನೆಗಳನ್ನೂ ಹಿರಣ್ಯವನ್ನೂ ಕುದುರೆಗಳನ್ನೂ (ಬೇಡಿಕೊ); ಭೂಮಿಯ ದೊಡ್ಡ ಆಯತನವನ್ನು ಬೇಡಿಕೊ; ನೀನು ಎಷ್ಟು ಶರತ್ಕಾಲ ಬದುಕಿರಲಿಚ್ಛಿಸುವೆಯೋ ಅಷ್ಟುಕಾಲ ಬದುಕಿರು. ॥ ೨೩ ॥**

(ನಚಿಕೇತನು) ಹೀಗೆಂದರೂ ಮೃತ್ಯುವು ಪುನಃ (ಅವನನ್ನು) ಆಶೆಗೊಳಿಸಿ ಹೇಳಿದನೇನೆಂದರೆ: ನೂರು ವರ್ಷ ಆಯುಸ್ಸುಳ್ಳಂಥ ಮಕ್ಕಳನ್ನೂ ಮುಮ್ಮಕ್ಕಳನ್ನೂ ಬೇಡಿಕೊ. ಹಸು ಮುಂತಾದ ಅನೇಕ ಪಶುಗಳನ್ನೂ ಆನೆ, ಬೆಳ್ಳಿ, ಬಂಗಾರ, ಕುದುರೆಗಳು- ಇವುಗಳನ್ನೂ (ಬೇಡಿಕೊ). ಮತ್ತು ಭೂಮಿಯ ದೊಡ್ಡ ಆಯತನವನ್ನು ಎಂದರೆ ಆಶ್ರಯವನ್ನು, ಮಂಡಲವನ್ನು— (ಇಂಥ) ರಾಜ್ಯವನ್ನು ಬೇಡಿಕೊ. ತಾನೊಬ್ಬ ಅಲ್ಪಾಯುವಾದರೆ ಇದೆಲ್ಲ ನಿಷ್ಪ್ರಯೋಜನವಾಗುವದಲ್ಲ! ಎಂದರೆ ಹೇಳುತ್ತಾನೆ: ಮತ್ತು ನೀನು ಎಷ್ಟು ಶರತ್ಕಾಲವಿರಬೇಕೊ, ಎಂದರೆ (ಎಷ್ಟು ವರ್ಷ) ಬದುಕಿರಲಿಚ್ಛಿಸುತ್ತೀಯೋ ಅಷ್ಟು ವರ್ಷವೂ ಬದುಕಿರು, ಎಂದರೆ ಇಂದ್ರಿಯಸಮೂಹವನ್ನೆಲ್ಲ ಉತ್ತಮಸ್ಥಿತಿಯಲ್ಲಿಟ್ಟುಕೊಂಡು ಶರೀರವನ್ನು ಧರಿಸಿರು.

---

* ನಿನ್ನ ಯೋಗ್ಯತೆಗೆ ತಕ್ಕಂತೆ ಸುಲಭವಾಗಿರುವ ವಿಷಯವನ್ನು ಕುರಿತು ಕೇಳಿಕೊ, ಅದರಿಂದ ಪ್ರಯೋಜನವಾಗುವದು— ಎಂಬು ಭಾವ.

**ಇದಕ್ಕೆ ಸಮವಾದ ವರವೆಂದು ನಿನಗೆ ತೋರಿದರೆ (ಬೇರೆ) ವರವನ್ನು ಬೇಡಿಕೊ– ಹಣವನ್ನೂ ಚಿರಾಯುಸ್ಸನ್ನೂ (ಬೇಡಿಕೊ); ಮಹಾಭೂಮಿಯಲ್ಲಿ ನೀನು (ರಾಜ)ನಾಗಿರು; ಕಾಮಗಳಲ್ಲಿ (ಎಲ್ಲಾ) ಕಾಮಗಳಿಗೂ ನಿನ್ನನ್ನು ತಕ್ಕವನನ್ನಾಗಿ ಮಾಡುವೆನು. || ೨೪ ||**

ಮೇಲೆ ಹೇಳಿದ್ದಕ್ಕೆ ಬೇರೆ ಯಾವ ವರವಾದರೂ ಸಮವೆಂದು ನಿನಗೆ ತೋರಿದರೆ ಅದನ್ನೂ ಕೇಳಿಕೊ. ಬೇಕಾದಷ್ಟು ಹಿರಣ್ಯ, ರತ್ನ– ಮುಂತಾದ ಹಣವನ್ನೂ ದೀರ್ಘಾಯುಸ್ಸನ್ನೂ ಹಣದ ಜೊತೆಗೂ * ಕೇಳಿಕೊ ಎಂದರ್ಥ. ಹೆಚ್ಚು ಹೇಳಿದ್ದರಿಂದೇನು ? ನಚಿಕೇತನೆ, ಈ ಮಹಾಭೂಮಿಯಲ್ಲಿ ನೀನೇ ರಾಜನಾಗಿರು. ದಿವ್ಯವಾದ ಮತ್ತು ಮಾನುಷವಾದ † ಕಾಮಗಳಿಗೆಲ್ಲ ನೀನು ತಕ್ಕವನಾಗುವಂತೆ ಮಾಡುವೆನು. ನಾನು ಸತ್ಯಸಂಕಲ್ಪವುಳ್ಳ ದೇವತೆಯಾಗಿರುವೆನು.

**ಮರ್ತ್ಯಲೋಕದಲ್ಲಿ ಯಾವ ಯಾವ ಕಾಮಗಳು ದುರ್ಲಭವಾಗಿರುವವೊ, ಆ ಎಲ್ಲಾ ಕಾಮಗಳನ್ನೂ ಬೇಕಾದಂತೆ ಕೇಳಿಕೊ. ಈ ಸ್ತ್ರೀಯರು, ರಥಗಳೊಡನೆಯೂ ತೂರ್ಯದೊಡನೆಯೂ ಕೂಡಿರುವರು ; ಇಂಥವರು ಮನುಷ್ಯರಿಗೆ ದೊರಕುವದೇ ಇಲ್ಲ. ನಾನು ಕೊಡುವ ಇವರಿಂದ ಪರಿಚರ್ಯೆಯನ್ನು ಹೊಂದು. ಎಲೈ ನಚಿಕೇತನೆ, ಮರಣವನ್ನು ಕುರಿತು ಕೇಳಬೇಡ. || ೨೫ ||**

ಮನುಷ್ಯಲೋಕದಲ್ಲಿ ಯಾವ ಯಾವ ಕಾಮಗಳನ್ನು ಬಯಸಬಹುದೋ ಮತ್ತು ಪಡೆಯುವದಕ್ಕೆ ಕಷ್ಟವಾಗಿರುವದೋ ಆ ಎಲ್ಲಾ ಕಾಮಗಳನ್ನೂ ನಿನ್ನ ಇಚ್ಛೆಯಿದ್ದಂತೆ ಕೇಳಿಕೊ. ಮತ್ತು ಈ ದಿವ್ಯಅಪ್ಸರಸ್ತ್ರೀಯರು ಪುರುಷರಿಗೆ ರತಿಯನ್ನುಂಟುಮಾಡುವವರು; (ಆದ್ದರಿಂದ ಇವರನ್ನು ರಾಮೆಯರೆಂದು ಕರೆಯುತ್ತಾರೆ.) ಇವರು ರಥಗಳಿಂದ ಕೂಡಿರುವರು. ಮತ್ತು ವಾದ್ಯಗಳಿಂದ ಕೂಡಿರುವರು. ಇಂಥವರು ನಾನೇ ಮುಂತಾದ (ದೇವತೆ)ಗಳ ಪ್ರಸಾದದಿಂದಲೇ ಹೊರತು (ಸುಮ್ಮನೆ) ಮನುಷ್ಯರಿಗೆ ದೊರಕತಕ್ಕವರಲ್ಲ. ನಾನು ಕೊಟ್ಟಿರುವ ಈ ಪರಿಚಾರಿಣಿಯರಿಂದ ಪರಿಚರ್ಯೆಯನ್ನು ಹೊಂದು, ಕಾಲು

---

* ಆತ್ಮಜ್ಞಾನದ ಬದಲು ಪುತ್ರ, ಪಶು, ಧನ- ಮುಂತಾದವುಗಳನ್ನು ಒಂದೊಂದನ್ನು ಯಾವದನ್ನಾದರೂ ಬೇಡಿಕೊ– ಎಂದು ಹಿಂದಿನ ಮಂತ್ರದಲ್ಲಿ ಹೇಳಿತ್ತು ; ಈಗ ಎಲ್ಲವನ್ನೂ ಕೊಡುತ್ತೇನೆ ಎಂದು ಹೇಳಿರುತ್ತದೆ ಎಂದು ಭಾವ.

† ಇಲ್ಲಿ ಭೋಗಪಡುವವರಲ್ಲೆಲ್ಲ ನಿನ್ನನ್ನು ಶ್ರೇಷ್ಠನಾದ ಭೋಗಿಯನ್ನಾಗಿ ಮಾಡುವೆನು– ಎಂದೂ ಅರ್ಥಮಾಡಬಹುದಾಗಿದೆಯೆಂದು ತೋರುವದು

ತೊಳೆಯುವದೇ ಮುಂತಾದ ಶುಶ್ರೂಷೆಯನ್ನು ಮಾಡಿಸಿಕೊ ಎಂದರ್ಥ. ಎಲೈ ನಚಿಕೇತನೆ, ಮರಣವನ್ನು ಕುರಿತು ಎಂದರೆ ಮರಣಸಂಬಂಧವಾಗಿ– ಸತ್ತ ಮೇಲೆ (ಮನುಷ್ಯನು) ಇರುತ್ತಾನೋ ಇಲ್ಲವೋ ಎಂದು– ಕಾಗೆಯ ಹಲ್ಲುಗಳನ್ನು* ಪರೀಕ್ಷೆಮಾಡಿದಂತೆ ಇರುವ– ಪ್ರಶ್ನೆಯನ್ನು ಹೀಗೆ ಕೇಳದೆ ಇರು.

**ಎಲೈ ಅಂತಕನೆ, ನಾಳೆಯವರೆಗೆ (ಮಾತ್ರ) ಇರಬಹುದಾದಂಥ (ಈ ಭೋಗಗಳು) ಮರ್ತ್ಯನ ಎಲ್ಲಾ ಇಂದ್ರಿಯಗಳಲ್ಲಿಯೂ ಇರುವ ತೇಜಸ್ಸನ್ನು ಸವೆಯಿಸುವವು. ಎಲ್ಲಾ ಆಯುಸ್ಸೂ ಅಲ್ಪವೇ. (ಈ) ವಾಹನಗಳು ನಿನ್ನಲ್ಲಿಯೇ ಇರಲಿ; (ಈ) ನೃತ್ಯಗೀತಗಳೂ ನಿನ್ನಲ್ಲಿಯೇ ಇರಲಿ. || ೨೬ ||**

ಹೀಗೆ (ಯಮನು) ಆಸೆಯನ್ನು ತೋರಿಸಿದರೂ ದೊಡ್ಡ ಮಡುವಿನಂತೆ† ಅಲ್ಲಾಡದೆ ನಚಿಕೇತನು ಹೇಳುತ್ತಾನೆ– ನಾಳೆ ಇರುವವೋ ಇಲ್ಲವೋ ಎಂದು ಸಂದೇಹಮಾಡಬಹುದಾದ ಇರುವಿಕೆಯುಳ್ಳವುಗಳು ನೀನು ಹೇಳಿದ ಭೋಗಗಳು. ಮತ್ತು ಎಲೈ ಅಂತಕನೆ, ಮೃತ್ಯುವೆ, ಮರ್ತ್ಯನ ಎಂದರೆ ಮನುಷ್ಯನ ಇಂದ್ರಿಯಗಳಲ್ಲೆಲ್ಲ, ಇರುವ ಈ ತೇಜಸ್ಸೆಂಬುದನ್ನು ಈ ಅಪ್ಸರಸ್ತ್ರೀಯರೇ ಮುಂತಾದ ಭೋಗಗಳು ಸವೆಯಿಸುವವು. ಇವುಗಳಿಂದ ಅನರ್ಥವೇ ಆಗುವದು; ಏಕೆಂದರೆ ಇವುಗಳು ಧರ್ಮ,‡ ವೀರ್ಯ, ಪ್ರಜ್ಞಾ, ತೇಜಸ್ಸು, ಯಶಸ್ಸು– ಮುಂತಾದವುಗಳನ್ನು ನಾಶಗೊಳಿಸುವವು. ಇನ್ನು ದೀರ್ಘಜೀವಿತವನ್ನು ಕೊಡುವೆನೆನ್ನುವೆಯಲ್ಲ, ಅದರ ವಿಷಯವನ್ನು ಕೇಳು. ಎಲ್ಲಾ ಆಯುಸ್ಸೂ ಎಂದರೆ ಬ್ರಹ್ಮನ ಆಯುಸ್ಸು ಕೂಡ ಸ್ವಲ್ಪವೇ ಆಗಿರುವದು. ಇನ್ನು ನಮ್ಮಗಳ ದೀರ್ಘಜೀವಿತದ ವಿಷಯದಲ್ಲಿ ಹೇಳತಕ್ಕದ್ದೇನಿದೆ? ಆದ್ದರಿಂದ ರಥವೇ

---

* ಕಾಗೆಯ ಹಲ್ಲುಗಳು ಎಷ್ಟು? ಎಂಥವು? ಎಂದು ಮುಂತಾಗಿ ವಿಚಾರಿಸುವದರಿಂದ ಏನೂ ಪ್ರಯೋಜನವಿಲ್ಲ; ಸತ್ತ ಮೇಲೆ ಇರುವ ಅಥವಾ ಇಲ್ಲದಿರುವ ವಿಚಾರವು ಅದಕ್ಕಿಂತ ಕಡೆ, ಏಕೆಂದರೆ ಅದರಿಂದ ನಿನಗೆ ಏನೂ ಪ್ರಯೋಜನವಿಲ್ಲ. ಎದುರಿಗಿರುವ ಪ್ರಯೋಜನಕರವಾದ ಭೋಗ್ಯವಸ್ತುಗಳನ್ನು ಬಿಟ್ಟು ಮರಣವಿಚಾರದಿಂದೇನು ಪ್ರಯೋಜನ? ಎಂದು ಭಾವ.

† ಸ್ವಲ್ಪ ನೀರು ಇರುವ ಗುಂಡಿಗಳ ನೀರಾದರೆ ಸ್ವಲ್ಪಮಟ್ಟಿಗೆ ಕದಡಿದ ಮಾತ್ರಕ್ಕೆ ನೀರು ಬೇಗ ಅಲುಗಾಡಿ ಕಲಕಿಹೋಗುವದು. ಆದರೆ ಆಳವಾಗಿಯೂ ವಿಶಾಲವಾಗಿಯೂ ಇರುವ ಮಡುವಾದರೆ ಹಾಗೆ ನೀರು ಚಾಂಚಲ್ಯವನ್ನು ಹೊಂದುವದಿಲ್ಲ, ಕಲಕುವದೂ ಇಲ್ಲ. ಇದರಂತೆ ಜ್ಞಾನಕ್ಕೆ ಅಧಿಕಾರಿಯಾದ ನಚಿಕೇತನು ಬೇರೆ ಬೇರೆ ಆಸೆಗಳೆಂಬ ಬಿರುಗಾಳಿಗೂ ಅಲುಗಾಡದೆ ತನ್ನ ಚಿತ್ತವನ್ನು ಸಮಾಧಾನದಲ್ಲೇ ಇಟ್ಟುಕೊಂಡಿದ್ದನು.

‡ ಧರ್ಮ =ಇಷ್ಟಾಪೂರ್ತಗಳು, ವೀರ್ಯ =ಸಾಮರ್ಥ್ಯ, ಪ್ರಜ್ಞಾ =ಶಾಸ್ತ್ರದರ್ಥವನ್ನು ತಿಳಿಯುವ ಸಾಮರ್ಥ್ಯ, ತೇಜಸ್ಸು =ಮೈಯಲ್ಲಿರುವ ಕಾಂತಿ, ಯಶಸ್ಸು =ಕೀರ್ತಿ. (ಗೋ||)

ಮುಂತಾದ ಯಾನಗಳೂ ನಿನ್ನಲ್ಲಿಯೇ ಇರಲಿ, ಮತ್ತು ನೃತ್ಯಗೀತಗಳೂ ನಿನ್ನಲ್ಲಿಯೇ ಇರಲಿ.

**ಮನುಷ್ಯನು ವಿತ್ತದಿಂದ ತೃಪ್ತಿಹೊಂದುವ ಹಾಗಿಲ್ಲ. ನಿನ್ನನ್ನು ಕಂಡೆವೆಂದರೆ ವಿತ್ತವನ್ನು ಪಡೆದೇ ಪಡೆಯುವೆವು. ನೀನು ಆಳುವವರೆಗೂ ಬದುಕಿರುವೆವು. ನಾನು ಬೇಡತಕ್ಕ ವರವಾದರೋ ಅದೇ ಸರಿ. || ೨೭ ||**

ಮತ್ತು ಹೆಚ್ಚಾದ ಧನದಿಂದಲೇ ಮನುಷ್ಯನು ತೃಪ್ತನಾಗುವದಿಲ್ಲ; ಲೋಕದಲ್ಲಿ ಯಾರಿಗೂ ಹಣದಿಂದ ತೃಪ್ತಿಯಾದದ್ದು ಕಂಡಿಲ್ಲವಷ್ಟೆ. ಒಂದು ವೇಳೆ ನಮಗೆ ಹಣದಾಸೆ ಬಂದರೂ ನಿನ್ನನ್ನು ನಾವು ಕಂಡೆವೆಂದರೆ ಹಣವನ್ನೂ ಪಡೆದೇ ಪಡೆಯುವೆವು. ಜೀವಿತದ ವಿಷಯವೂ ಹಾಗೆಯೇ; ಏಕೆಂದರೆ ನೀನು ಯಾಮ್ಯಪದವಿಯಲ್ಲಿ ಪ್ರಭುವಾಗಿದ್ದುಕೊಂಡು ಎಲ್ಲಿಯವರೆಗೆ ಆಳುತ್ತಿರುವೆಯೋ ಅಲ್ಲಿಯವರೆಗೂ ಬದುಕಿಯೇ ಇರುವೆವು. ಏಕೆಂದರೆ ಮರ್ತ್ಯನಾದವನು ನಿನ್ನನ್ನು ಸಂಧಿಸಿದ ಮೇಲೆ ಹೇಗೆ ತಾನೇ ಅಲ್ಪಧನವುಳ್ಳವನೂ ಅಲ್ಪಾಯುಸ್ಸುಳ್ಳವನೂ ಆದಾನು ? ಆದರೆ ನಾನು ಬೇಡತಕ್ಕ ವರವು ಮಾತ್ರ, ಅದೇ ಎಂದರೆ ಆತ್ಮಜ್ಞಾನವೇ ಸರಿ.

**ಕೆಳಗಿನ ಭೂಲೋಕದಲ್ಲಿರುವವನಾಗಿಯೂ ಮುಪ್ಪನ್ನು ಪಡೆಯತಕ್ಕವನಾಗಿಯೂ ಮರ್ತ್ಯನಾದವನು ಮುಪ್ಪಿಲ್ಲದಂಥ ಅಮರರ ಸಮೀಪಕ್ಕೆ ಬಂದು ತಿಳಿದುತಿಳಿದೂ ವರ್ಣರತಿಪ್ರಮೋದಗಳನ್ನು ಯೋಚಿಸುತ್ತಿರುವ ಯಾವನು ತಾನೇ ಅತಿದೀರ್ಘವಾದ ಜೀವಿತದಲ್ಲಿ ಮನಸ್ಸುಮಾಡಿಯಾನು ? || ೨೮ ||**

ಮತ್ತೂ ಏನೆಂದರೆ ಮುಪ್ಪಿಲ್ಲದವರೂ ಎಂದರೆ ವಯಸ್ಸನ್ನು ಕಳೆದುಕೊಳ್ಳದವರೂ ಅಮರರೂ (ಎಂದರೆ ಸಾವಿಲ್ಲದವರೂ ಆದ ದೇವತೆಗಳ) ಬಳಿಗೆ ಬಂದಿರುವಾಗ, ಅವರಿಂದ ತನಗೆ ಇನ್ನೂ ಉತ್ಕೃಷ್ಟವಾದ ಪ್ರಯೋಜನವು ಆಗತಕ್ಕದ್ದಿದೆ ಎಂದು ತಿಳಿದುತಿಳಿದೂ ತಾನು ಮುಪ್ಪುಮರಣಗಳುಳ್ಳವನಾಗಿರುವ ಅಂತರಿಕ್ಷಾದಿಲೋಕಗಳ ಕೆಳಗಿರುವ ಭೂಮಿಯಲ್ಲಿ ವಾಸವಾಗಿರುವ (ಮರ್ತ್ಯನು) ಅವಿವೇಕಿಗಳು ಪ್ರಾರ್ಥಿಸುವ ಪುತ್ರ, ವಿತ್ತ, ಹಿರಣ್ಯ– ಮುಂತಾದಂಥ ಅಸ್ಥಿರವಾದ ವಸ್ತುವನ್ನು ಹೇಗೆ ಪ್ರಾರ್ಥಿಸಿಯಾನು ?

ಅಥವಾ (ಮೂಲದಲ್ಲಿ) ' ಕ್ವ ತದಾಸ್ಥಃ ' ಎಂದು ಪಾಠಾಂತರವು. ಆ ಪಕ್ಷದಲ್ಲಿ ಅಕ್ಷರಯೋಜನೆ ಹೇಗೆಂದರೆ– ' ತದಾಸ್ಥ ' ಎಂದರೆ ಆ ಪುತ್ರಾದಿಗಳಲ್ಲಿ ಅವರೇ ಹೆಚ್ಚೆಂದು ಇರುವ ಆಸ್ಥೆಯನ್ನುಳ್ಳಾತನು. ಅವುಗಳಿಗಿಂತಲೂ ಹೆಚ್ಚಾಗಿರುವದಾಗಿಯೂ ಪಡೆಯುವದಕ್ಕೆ ಕಷ್ಟವಾಗಿರುವದಾಗಿಯೂ ಇರುವ ಪುರುಷಾರ್ಥವನ್ನು ಪಡೆಯಬೇಕೆಂದು ಬಯಕೆಯುಳ್ಳಾತನು ಎಲ್ಲಿ ತದಾಸ್ಥೆಯುಳ್ಳವ

ನಾಡಾನು ? ಎಂದರೆ ಅವುಗಳು ಅಸಾರವೆಂದು ಬಲ್ಲವನು ಯಾರೂ ಅವುಗಳನ್ನು ಪ್ರಾರ್ಥಿಸಲಾರನು ಎಂದರ್ಥ. ಎಲ್ಲರೂ ಮೇಲೆಮೇಲಕ್ಕೆ ಹೋಗಬೇಕೆಂದು ಬಯಸುವರು. ಆದ್ದರಿಂದ (ನೀನು) ಪುತ್ರವಿತ್ತಾದಿಗಳ ಆಸೆಯಿಂದ ನನ್ನನ್ನು ಸೆಳೆಯುವದಕ್ಕೆ ಆಗಲಾರದು.

ಮತ್ತು ಅಪ್ಸರಸ್ತ್ರೀಯರೇ ಮುಂತಾದ ವರ್ಣರತಿಪ್ರಮೋದಗಳನ್ನು*- ಒಂದು ವ್ಯವಸ್ಥಿತವಾದ ರೂಪದಲ್ಲಿರುವದಿಲ್ಲವೆಂದು ಸರಿಯಾಗಿ ಯೋಚಿಸುವಾತನು ಅತಿದೀರ್ಘವಾದ ಜೀವಿತದಲ್ಲಿ ಯಾವ ವಿವೇಕಿಯು ತಾನೆ ಮನಸ್ಸುಹಾಕಿಯಾನು?

**ಎಲೈ ಮೃತ್ಯುವೆ, ಯಾವದರಲ್ಲಿ ಈ ಸಂಶಯವನ್ನು ಪಡುತ್ತಿರುವರೋ, ಯಾವದು ಪರಲೋಕದಲ್ಲಿ ಹೆಚ್ಚಿನ ಪ್ರಯೋಜನಕ್ಕೆ ಸಾಧನವಾಗುವದೋ, ಅದನ್ನೂ ನಮಗೆ ಹೇಳು. ಯಾವ ಈ ವರವು ಗೂಢವಾಗಿ ಒಳಹೊಕ್ಕಿರುವದೋ ಅದನ್ನೂ ಬಿಟ್ಟು ಬೇರೊಂದನ್ನು ನಚಿಕೇತನು ಕೇಳುವದಿಲ್ಲ. ॥ ೨೯ ॥**

ಆದ್ದರಿಂದ ಎಲೈ ಮೃತ್ಯುವೆ, ಅನಿತ್ಯವಾದ ಕಾಮಗಳನ್ನು ತೋರಿಸಿ ಮನಸ್ಸನ್ನು ಜಗ್ಗುವದನ್ನು ಬಿಟ್ಟು, ಯಾವ ಸತ್ತವನ ವಿಷಯದಲ್ಲಿ ಇವನು ಇದ್ದಾನೋ ಇಲ್ಲವೊ ಎಂದು ಹೀಗೆ ಸಂದೇಹಪಡುವರೋ, ಮಹಾಪ್ರಯೋಜನಕ್ಕೆ ಕಾರಣವಾದ ಪರಲೋಕವಿಷಯದಲ್ಲಿ ಯಾವ ಆತ್ಮನ ನಿಶ್ಚಿತವಾದ ಜ್ಞಾನವೇ (ಉಪಯೋಗವಾಗುವದೋ) ಅಂಥ ನಾನು ಕೇಳಿದ (ವಿಷಯ)ವನ್ನೇ ನಮಗೆ ಹೇಳು. ಹೆಚ್ಚು ಹೇಳಿದ್ದರಿಂದೇನು? ಯಾವ ಆತ್ಮವಿಷಯವಾದ ಈ ಪ್ರಕೃತವಾದ ವರವು ಗೂಢವಾಗಿ ಒಳಹೊಕ್ಕಿರುವದೋ, ವಿಂಗಡಿಸಿ ತಿಳಿಯುವದಕ್ಕೆ ಆಗದೆ ಇರುವ ಸ್ಥಿತಿಯನ್ನು ಪಡೆದಿರುವದೋ ಆದಕ್ಕಿಂತ ಬೇರೆಯಾಗಿರುವಂಥ ಅವಿವೇಕಿಗಳು ಕೇಳಿಕೊಳ್ಳಬಹುದಾದ ಅನಿತ್ಯವಸ್ತುವಿನ ವಿಷಯವಾದ ವರವನ್ನು ಮನಸ್ಸಿನಿಂದಲೂ ನಚಿಕೇತನು ಕೇಳಲಾರನು. ಇದು ಶ್ರುತಿಯು† ವಚನವು.

---

* ವರ್ಣ- ಗೀತೆ, ರತಿ- ಕ್ರೀಡೆ, ಪ್ರಮೋದ- ಇವುಗಳಿಂದಾದ ಸುಖ ಎಂದು (ಗೋ॥) ವ್ಯಾಖ್ಯಾನಕಾರರು ಹೇಳುತ್ತಾರೆ. ತೋರುವ ವಸ್ತುಗಳಲ್ಲಿರುವ ಆಸಕ್ತಿಯಿಂದಾಗುವ ಸುಖಗಳು ಎಂದೂ ವ್ಯಾಖ್ಯಾನಮಾಡಬಹುದಾಗಿದೆ.

† ನಾನು ಕೇಳಲಾರೆನು ಎಂಬರ್ಥದಲ್ಲಿ 'ನಚಿಕೇತನು ಕೇಳುವನಲ್ಲ' ಎಂದು ನಚಿಕೇತನೇ ಹೇಳಿದ್ದರೂ ಹೇಳಿರಬಹುದು. 'ಹೀಗೆ ಪರಮ ಪುರುಷಾರ್ಥವನ್ನು ಬಯಸಿದ್ದ ನಚಿಕೇತನು ಇನ್ನು ಯಾವ ವರವನ್ನೂ ಕೇಳದೆ ಹೋದನು' ಎಂಬ ತಾತ್ಪರ್ಯದಿಂದ ಶ್ರುತಿಯು ಹೇಳಿದೆ ಎಂದು ಭಾಷ್ಯಕಾರರು ಹೇಳಿರುತ್ತಾರೆ.

# ಒಂದನೆಯ ಅಧ್ಯಾಯ—ಎರಡನೆಯ ವಲ್ಲಿ

## ಪರಸ್ಪರವಿರುದ್ಧವಾಗಿರುವ ವಿದ್ಯಾವಿದ್ಯೆಗಳಲ್ಲಿ ವಿದ್ಯೆಯ ಶ್ರೇಷ್ಠತ್ವ

**ಶ್ರೇಯಸ್ಸೇ ಬೇರೆ, ಪ್ರೇಯಸ್ಸೇ ಬೇರೆ. ಅವೆರಡೂ ಬೇರೆ ಬೇರೆ ಪ್ರಯೋಜನವುಳ್ಳವಾಗಿ ಪುರುಷನನ್ನು ಕಟ್ಟುವವು. ಅವೆರಡರಲ್ಲಿ ಶ್ರೇಯಸ್ಸನ್ನು ತೆಗೆದುಕೊಳ್ಳುವಾತನಿಗೆ ಒಳ್ಳೆಯದಾಗುವದು, ಯಾವನು ಪ್ರೇಯಸ್ಸನ್ನೇ ಆರಿಸಿಕೊಳ್ಳುವನೋ ಅವನು ಪುರುಷಾರ್ಥದಿಂದ ತಪ್ಪಿಹೋಗುವನು. ॥ ೧ ॥**

ಶಿಷ್ಯನನ್ನು ಪರೀಕ್ಷೆಮಾಡಿ (ಇವನಲ್ಲಿ) ವಿದ್ಯೆಗೆ ಬೇಕಾದ ಯೋಗ್ಯತೆ ಇದೆಯೆಂದು ನಿಶ್ಚಯಿಸಿ (ಯಮನು) ಹೇಳುತ್ತಾನೆ. ಶ್ರೇಯವು ಎಂದರೆ ಅತ್ಯಂತ ಹಚ್ಚಿನ ಹಿತವಾದ (ಮುಕ್ತಿಸಾಧನವು) ಬೇರೆ, ಎಂದರೆ (ಪ್ರೇಯಸ್ಸಿಗಿಂತ, ಬೇರೆಯೇ ಆಗಿರುವದು; ಇದರಂತೆ ಪ್ರೇಯಸ್ಸೇ, ಬಹಳ ಪ್ರಿಯವಾಗಿ ಕಾಣುವ) (ಅಭ್ಯುದಯಸಾಧನವೇ) ಬೇರೆ. ಈ ಪ್ರೇಯಸ್ಸು ಶ್ರೇಯಸ್ಸು ಎಂಬೆರಡೂ ನಾನಾರ್ಥಗಳಾಗಿ ಎಂದರೆ ಬೇರೆ ಬೇರೆ ಪ್ರಯೋಜನವುಳ್ಳವುಗಳಾಗಿ ವರ್ಣ, ಆಶ್ರಮ-ಮುಂತಾದವುಗಳಿಂದ ಕೂಡಿದ ಅಧಿಕಾರಿಯಾದ * ಪುರುಷನನ್ನು ಕಟ್ಟುವವು. ಇವುಗಳನ್ನು ತಾನು ಮಾಡತಕ್ಕದ್ದೆಂದು ಪ್ರತಿಯೊಬ್ಬ ಪುರುಷನೂ ಪ್ರೇರಿತನಾಗುತ್ತಾನೆ. ಶ್ರೇಯಸ್ಸು, ಪ್ರೇಯಸ್ಸು- ಇವುಗಳಲ್ಲಿಯೇ ಅಭ್ಯುದಯ†, ಅಮೃತತ್ವ— ಇವುಗಳನ್ನು ಬಯಸುವ ಪುರುಷನು ಪ್ರವರ್ತಿಸುತ್ತಾನೆ; ಆದ್ದರಿಂದ ಶ್ರೇಯಸ್ಸು ಮತ್ತು ಪ್ರೇಯಸ್ಸು— ಇವುಗಳ ಪ್ರಯೋಜನವೇ ತಾನು (ಸಾಧನವನ್ನು) ಮಾಡಿ ಪಡೆಯತಕ್ಕದ್ದೆಂದು (ಪುರುಷನು ಪ್ರವರ್ತಿಸುವದರಿಂದ) ಇವೆರಡರಿಂದ ಪ್ರತಿಯೊಬ್ಬ ಪುರುಷನೂ ಕಟ್ಟುಬಿದ್ದಿರುವನೆಂದು‡ (ಈ ಶ್ರುತಿಯಲ್ಲಿ)

* ವರ್ಣ, ಆಶ್ರಮ- ಮುಂತಾದ ವೇದೋಕ್ತವಾದ ಅಧಿಕಾರವುಳ್ಳ ಪುರುಷನಿಗೆ ಅಭ್ಯುದಯ ನಿಃಶ್ರೇಯಸ- ಎಂಬ ಎರಡು ಶಾಸ್ತ್ರೋಕ್ತವಾದ ಪುರುಷಾರ್ಥಗಳು ಕಾಣುವವು ಅಭ್ಯುದಯ ಎಂಬ ಮಾತಿನಲ್ಲಿ ಧರ್ಮ, ಅರ್ಥ, ಕಾಮ- ಎಂಬ ತ್ರಿವರ್ಗವನ್ನೂ ಸೇರಿಸಿದೆ, ನಿಃಶ್ರೇಯಸವೆಂದರೆ ಅತ್ಯಂತಹಿತವಾದದ್ದು, ಮುಕ್ತಿ.

† ತನಗೆ ಅಭ್ಯುದಯವೇ ಬೇಕೆಂಬವನು ಪ್ರಿಯವಾದ ಸಾಧನವನ್ನು ಆರಿಸಿಕೊಳ್ಳುತ್ತಾನೆ. ನಿಃಶ್ರೇಯಸವೇ ಬೇಕೆಂಬವನು ಹಿತವಾದ ಫಲವನ್ನು ಕೊಡುವ ಜ್ಞಾನವೆಂಬ ಸಾಧನವನ್ನು ಆರಿಸಿಕೊಳ್ಳುತ್ತಾನೆ.

‡ ಪ್ರಯೋಜನವಿಲ್ಲದೆ ಪ್ರವೃತ್ತಿಯಿಲ್ಲ, ಆದ್ದರಿಂದ ಪ್ರಯೋಜನಕ್ಕಾಗಿ ಮನುಷ್ಯನು ಪ್ರವೃತ್ತಿಗೆ ಕಟ್ಟುಬಿದ್ದಿರುವನು.

ಹೇಳಿರುತ್ತದೆ. ಅವುಗಳೆರಡೂ ಒಂದೊಂದು ಪುರುಷಾರ್ಥವನ್ನೇ ಸೇರತಕ್ಕವುಗಳಾಗಿದ್ದರೂ ವಿದ್ಯಾವಿದ್ಯಾಸ್ವರೂಪದಲ್ಲಿರುವದರಿಂದ * (ಒಂದಕ್ಕೊಂದು) ವಿರುದ್ಧವಾಗಿರುವವು. ಆದ್ದರಿಂದ ಇವುಗಳಲ್ಲಿ ಒಂದನ್ನೂ ಬಿಡದೆ ಒಬ್ಬನೇ ಪುರುಷನು ಏಕಕಾಲದಲ್ಲಿ ಎರಡನ್ನೂ ನಡೆಯಿಸಲಾರನಾದ್ದರಿಂದ ಇವೆರಡರಲ್ಲಿ ಅವಿದ್ಯೆಯ ಸ್ವರೂಪದಲ್ಲಿರುವ ಪ್ರೇಯಸ್ಸನ್ನು ಕೈಬಿಟ್ಟು ಬರಿಯ ಶ್ರೇಯಸ್ಸನ್ನೇ ತೆಗೆದುಕೊಳ್ಳುವಾತನಿಗೆ ಒಳ್ಳೆಯದಾಗುವದು, ಉತ್ತಮವಾದ ಮಂಗಳವಾಗುವದು. ಆದರೆ ದೂರದರ್ಶಿಯಲ್ಲದೆ ಯಾವನು ಮೂಢನಾಗಿರುವನೋ (ಅವನು) ಈ ಪುರುಷಾರ್ಥದಿಂದ, ಈ ಪರಮಾರ್ಥವಾದ ಶಾಶ್ವತವಾದ ಪ್ರಯೋಜನದಿಂದ, ತಪ್ಪಿಹೋಗುವನು; ಅದನ್ನು ಕಳೆದುಕೊಳ್ಳುವನು, ಅದನ್ನು ಬಿಟ್ಟು ಕೆಳಗೆ ಜಾರುವನು ಎಂಗರ್ಥ. ಇವನು ಯಾರು? ಎಂದರೆ ಯಾವನು ಪ್ರೇಯಸ್ಸನ್ನೇ ಆರಿಸಿಕೊಳ್ಳುವನೊ, (ಸಾಧನವಾಗಿ) ತೆಗೆದುಕೊಳ್ಳುವನೋ (ಅವನು) ಎಂದಭಿಪ್ರಾಯ.

**ಶ್ರೇಯಸ್ಸೂ ಪ್ರೇಯಸ್ಸೂ ಮನುಷ್ಯನ ಬಳಿಗೆ ಬರುವವು. ಅವುಗಳೆರಡನ್ನೂ ಚೆನ್ನಾಗಿ ವಿಚಾರಮಾಡಿ ಪಂಡಿತನಾದವನು ವಿಂಗಡಿಸಿಕೊಳ್ಳುತ್ತಾನೆ. ತಿಳಿದವನು ಪ್ರೇಯಸ್ಸನ್ನು ಬಿಟ್ಟು ಶ್ರೇಯಸ್ಸನ್ನೇ ಆರಿಸಿಕೊಳ್ಳುತ್ತಾನೆ; ಮೂಢನು ಯೋಗಕ್ಷೇಮಕ್ಕೆಂದು ಪ್ರೇಯಸ್ಸನ್ನೇ ಆರಿಸಿಕೊಳ್ಳುತ್ತಾನೆ.** || ೨ ||

ಇವೆರಡನ್ನು ಅನುಸರಿಸುವದೂ ಪುರುಷನಾದವನಿಗೆ ತನ್ನ ಅಧೀನದಲ್ಲಿಯೇ ಇದ್ದರೆ ಜನರು ಬಹಳವಾಗಿ ಪ್ರೇಯಸ್ಸನ್ನೇ ಏಕೆ ತೆಗೆದುಕೊಳ್ಳುತ್ತಾರೆ? ಎಂದರೆ ಹೇಳುತ್ತಾನೆ. ನಿಜ, ಇವೆರಡೂ ತನ್ನಧೀನವೆ; ಆದರೂ ಮೂಢಬುದ್ಧಿಯುಳ್ಳವರಿಗೆ ಸಾಧನದೃಷ್ಟಿಯಿಂದಲೂ ಫಲದೃಷ್ಟಿಯಿಂದಲೂ ವಿಂಗಡಿಸಿಕೊಳ್ಳುವದಕ್ಕಾಗದೆ ಬೆರೆತುಕೊಂಡಿರುವವೋ ಎನ್ನುವ ಹಾಗೆ (ಕಾಣುತ್ತಾ) ಈ ಮನುಷ್ಯನನ್ನು ಶ್ರೇಯಸ್ಸೂ ಪ್ರೇಯಸ್ಸೂ (ಎರಡೂ) ಬಂದು ಸೇರುತ್ತವೆ. ಆದಕಾರಣ— ಹಂಸವು ನೀರಿನಿಂದ ಹಾಲನ್ನು (ವಿಂಗಡಿಸಿಕೊಳ್ಳುವಂತೆ)— ಪಂಡಿತನಾದವನು ಆ ಶ್ರೇಯಸ್ಸು, ಪ್ರೇಯಸ್ಸು— ಎಂಬ ಪದಾರ್ಥಗಳೆರಡನ್ನೂ ಸಮೀಪಿಸಿ ಮನಸ್ಸಿನಿಂದ ಚೆನ್ನಾಗಿ ಆಲೋಚಿಸಿ, ಹೆಚ್ಚಿನದು ಯಾವದು, ಕಡಿಮೆಯದು ಯಾವದು— ಎಂದು ವಿಚಾರಿಸಿ ವಿಂಗಡಿಸಿಕೊಳ್ಳುತ್ತಾನೆ; (ಹೀಗೆ) ವಿಂಗಡಿಸಿಕೊಂಡು ಪ್ರೇಯಸ್ಸನ್ನು ಕೈಬಿಟ್ಟು, (ಅದಕ್ಕಿಂತಲೂ ಶ್ರೇಯಸ್ಸು) ಹೆಚ್ಚಿನದಾದ್ದರಿಂದ ಶ್ರೇಯಸ್ಸನ್ನೇ ಆರಿಸಿಕೊಳ್ಳುತ್ತಾನೆ. ಅವನು ಯಾರು? ಎಂದರೆ ತಿಳಿದಾತನು. ಆದರೆ ಯಾರು ಮೂಢನೋ, ಅಲ್ಪಬುದ್ಧಿಯುಳ್ಳವನೋ ಅವನಿಗೆ (ಹೀಗೆ) ವಿಂಗಡಿಸುವ

* ಪ್ರೇಯಸ್ಸಿನ ಸಾಧನವು ಅವಿದ್ಯೆ, ಶ್ರೇಯಸ್ಸಿನ ಸಾಧನವು ವಿದ್ಯೆ.

ಸಾಮರ್ಥ್ಯವಿಲ್ಲವಾದ್ದರಿಂದ 'ಯೋಗಕ್ಷೇಮಕ್ಕಾಗಿ'- ಎಂದರೆ ಶರೀರವೇ ಮುಂತಾದವುಗಳನ್ನು ಬೆಳಸಿಕೊಳ್ಳುವದು, ಕಾಪಾಡಿಕೊಳ್ಳುವದು – ಇವುಗಳಿಗಾಗಿ ಎಂದರ್ಥ. (ಇಂಥ ಯೋಗಕ್ಷೇಮಕ್ಕಾಗಿ)– ಪಶು, ಪುತ್ರ- ಮುಂತಾದ ರೂಪದಲ್ಲಿರುವ ಪ್ರೇಯಸ್ಸನ್ನೇ* ಆರಿಸಿಕೊಳ್ಳುತ್ತಾನೆ.

**ನಚಿಕೇತನೆ, ಈ ನೀನಾದರೋ ಪ್ರಿಯವಾಗಿಯೂ ಪ್ರಿಯರೂಪವಾಗಿಯೂ ಇರುವ ಈ ಕಾಮಗಳನ್ನು ಆಲೋಚನೆಮಾಡಿ ಕೈಬಿಟ್ಟಿರುತ್ತೀಯೆ ; ಯಾವದರಲ್ಲಿ ಬಹುಜನಗಳು ಮುಳುಗಿರುವರೋ ಅಂಥ ವಿತ್ತಮಯವಾದ ಈ ದಾರಿಯನ್ನು ಪಡೆಯಲಿಲ್ಲ. || ೩ ||**

ಈ ನೀನಾದರೋ ಮತ್ತೆ ಮತ್ತೆ ನಾನು (ನಿನ್ನನ್ನು) ಆಸೆಗೊಳಿಸಿದರೂ ಪ್ರಿಯವಾಗಿರುವ ಪುತ್ರಾದಿಗಳು, ಪ್ರಿಯರೂಪವುಳ್ಳ† ಅಪ್ಸರಸ್ತ್ರೀಯರೇ ಮುಂತಾದವುಗಳು- ಎಂಬ ಕಾಮಗಳನ್ನು ಚೆನ್ನಾಗಿ ಆಲೋಚನೆಮಾಡಿ, ಅವು ಅನಿತ್ಯವಾದವುಗಳೆಂದೂ ಅಸಾರವಾದವುಗಳೆಂದೂ ದೋಷಗಳನ್ನು (ಕಂಡು), ಎಲೈ ನಚಿಕೇತನೆ, (ಅವುಗಳನ್ನು) ಕೈಬಿಟ್ಟಿರುತ್ತೀಯೆ, ಆಹ! ನೀನು ಎಂಥ ಬುದ್ಧಿವಂತನು! ಯಾವ ಮಾರ್ಗದಲ್ಲಿ ಅನೇಕ ಮೂಢಜನರು ಮುಳುಗಿರುವರೋ ಕುಸಿದುಕೊಳ್ಳುವರೋ, ಅಂಥ ಮೂಢಜನರು ಹೋಗುವ ಧನಬಾಹುಳ್ಯವುಳ್ಳ ಈ ಕುತ್ಸಿತವಾದ ಮಾರ್ಗವನ್ನು ನೀನು ಹೊಂದಲಿಲ್ಲ.

**ಅವಿದ್ಯೆಯೆಂದು (ಯಾವದು ಪ್ರಸಿದ್ಧವಾಗಿರುವದೋ) ವಿದ್ಯೆಯೆಂದು ಯಾವದು ಪ್ರಸಿದ್ಧವಾಗಿರುವದೋ- ಈ ಎರಡೂ (ಒಂದಕ್ಕೊಂದು) ದೂರವಾಗಿ ವಿರುದ್ಧವಾಗಿರುವವು, ಬೇರೆ ಬೇರೆ ಹೋಗಿರುತ್ತವೆ. ನಚಿಕೇತನು ವಿದ್ಯೆಯನ್ನು ಬಯಸುವವನೆಂದೇ ತಿಳಿಯುತ್ತೇನೆ; (ಏಕೆಂದರೆ) ನಿನ್ನನ್ನು ಬಹಳ ಕಾಮಗಳೂ ಬಿಡಿಸಲಿಲ್ಲ. || ೪ ||**

'ಇವೆರಡರಲ್ಲಿ ಶ್ರೇಯಸ್ಸನ್ನು ತೆಗೆದುಕೊಳ್ಳುವನಿಗೆ ಒಳ್ಳೆಯದಾಗುತ್ತದೆ; ಯಾವನಾದರೆ ಪ್ರೇಯಸ್ಸನ್ನೇ ಆರಿಸಿಕೊಳ್ಳುವನೋ ಅವನು ಪುರುಷಾರ್ಥದಿಂದ ತಪ್ಪಿಹೋಗುವನು' ಎಂದು (ಒಂದನೆಯ ಮಂತ್ರದಲ್ಲಿ) ಹೇಳಿತ್ತಲ್ಲ, ಅದು ಏಕೆ? ಏಕೆಂದರೆ ಇವೆರಡೂ 'ದೂರವಾಗಿ' ಎಂದರೆ ಬಹಳ ಭೇದವುಳ್ಳವಾಗಿ, 'ವಿರುದ್ಧವಾಗಿ' ಎಂದರೆ ವಿವೇಕರೂಪವಾಗಿಯೂ ಅವಿವೇಕರೂಪವಾಗಿಯೂ ಇರುವದರಿಂದ ಕತ್ತಲುಬೆಳಕುಗಳ ಹಾಗೆ‡ ಪರಸ್ಪರವಾಗಿ ಹೊಂದದ ರೂಪವುಳ್ಳವಾಗಿರು

* ಪಶುಪುತ್ರಾದಿಗಳನ್ನು ಕೊಡುವ ಸಾಧನವನ್ನೇ ಮಾಡುತ್ತಾನೆ ಎಂದು ತಾತ್ಪರ್ಯ.

† ಮಕ್ಕಳು ತನಗೆ ಹತ್ತಿರಸಂಬಂಧವುಳ್ಳವರಾದ್ದರಿಂದ ಪ್ರಿಯರು, ಅವರಿಗಿಂತಲೂ ದೂರವಾಗಿರುವ ಅಪ್ಸರಸ್ತ್ರೀಯರೇ ಮುಂತಾದವರು ಪ್ರಿಯರೂಪರು. (ಗೋ||)

‡ ಸ್ವಲ್ಪ ಬೆಳಕು ಇರುವೆಡೆಯಲ್ಲಿ ಕತ್ತಲೆಯೂ ಇರಬಹುದಾಗಿರುವಂತೆ ಜ್ಞಾನಿಯಲ್ಲಿ ಅಜ್ಞಾ

ವವು. 'ಬೇರೆ ಬೇರೆ ಹೋಗಿರುತ್ತವೆ' ಎಂದರೆ (ಒಂದು) ಸಂಸಾರಕ್ಕೂ ಇನ್ನೊಂದು ಮೋಕ್ಷಕ್ಕೂ ಹೇತುವಾಗಿರುವದರಿಂದ ಬೇರೆ ಬೇರೆ ಫಲಗಳನ್ನು ಕೊಡುತ್ತವೆ ಎಂದು ಅಭಿಪ್ರಾಯ. ಇವೆರಡೂ ಯಾವವು ? ಎಂದರೆ ಹೇಳುತ್ತಾನೆ: ಯಾವದು ಪ್ರೇಯಸ್ಸಿನ ವಿಷಯವಾದ ಅವಿದ್ಯೆಯೆಂದೂ (ಯಾವದು) ಶ್ರೇಯಸ್ಸಿನ ವಿಷಯವಾದ ವಿದ್ಯೆಯೆಂದೂ ಪಂಡಿತರಿಗೆ ಗೊತ್ತಾಗಿರುವವೋ (ಅವೆರಡು.) ಇವೆರಡರಲ್ಲಿ ನಚಿಕೇತನು ಎಂದರೆ ನೀನು ವಿದ್ಯೆಯನ್ನು ಬಯಸುವವನು ಎಂದೇ ನಾನು ತಿಳಿಯುತ್ತೇನೆ. ಏಕೆ? ಏಕೆಂದರೆ ತಿಳಿಯದವರ ಬುದ್ಧಿಯನ್ನು ಸೆಳೆಯುವಂಥ ಅಪ್ಸರಃಸ್ತ್ರೀಯರೇ ಮುಂತಾದ 'ಬಹಳ ಕಾಮುಗಳೂ ನಿನ್ನನ್ನು ಬಿಡಿಸಲಿಲ್ಲ', ತಮ್ಮನ್ನು ಉಪಭೋಗಿಸು ಎಂದು ಇಚ್ಛೆಯನ್ನುಂಟುಮಾಡಿ ಶ್ರೇಯಸ್ಸಿನ ಮಾರ್ಗದಿಂದ ತಪ್ಪಿಸಲಿಲ್ಲ. ಆದ್ದರಿಂದ ವಿದ್ಯೆಯನ್ನು ಬಯಸಿ ಶ್ರೇಯಸ್ಸನ್ನು ಪಡೆಯುವವನೆಂದು (ನಿನ್ನನ್ನು) ತಿಳಿಯುತ್ತೇನೆ ಎಂದಭಿಪ್ರಾಯ.

**ಅವಿದ್ಯೆಯ ನಡುವೆ ಇರುವವರಾಗಿ ತಾವೇ ಬುದ್ಧಿವಂತರು, ಪಂಡಿತರು– ಎಂದು ತಿಳಿದುಕೊಳ್ಳುತ್ತಾ ಬಹುವಾಗಿ ತೊಳಲುತ್ತಾ ಕುರುಡನು ಕರೆದುಕೊಂಡುಹೋಗುತ್ತಿರುವ ಕುರುಡರ ಹಾಗೆ, ಈ ಮೂಢರು ಸುತ್ತುತ್ತಿರುವರು.** || ೫ ||

ಆದರೆ ಯಾರು ಸಂಸಾರಕ್ಕೆ ತಕ್ಕವರಾಗಿ ದಟ್ಟವಾಗಿರುವ ಕತ್ತಲೆಯಂತಿರುವ ಅವಿದ್ಯೆಯ ನಡುವೆ ಇದ್ದು, ಮಕ್ಕಳು ಮರಿಗಳು ದನಕರುಗಳು ಮುಂತಾದವುಗಳ ಬಯಕೆಗಳೆಂಬ ನೂರಾರು ಹಗ್ಗಗಳಿಗೆ ಕಟ್ಟುಬಿದ್ದು ತಾವೇ ಬುದ್ಧಿವಂತರು, ಪಂಡಿತರು, ಎಂದರೆ ನಾವೇ ಪ್ರಜ್ಞಾವಂತರು ಶಾಸ್ತ್ರದಲ್ಲಿ ಜಾಣರು– ಎಂದು ತಿಳಿದುಕೊಂಡವರಾಗಿರುವರೋ, ಅಂಥವರು ಅತ್ಯಂತವಾಗಿ ಡೊಂಕುಡೊಂಕಾಗಿಯೂ ಬಲುಬಗೆಯಾಗಿಯೂ ಇರುವ (ಕರ್ಮದ) ಗತಿಯನ್ನು ಪಡೆದು ಬಹುವಾಗಿ ತೊಳಲುತ್ತಾ ಮುಪ್ಪು, ಮರಣ, ರೋಗ– ಮುಂತಾದ ದುಃಖಗಳಿಂದ ಈ ಅವಿವೇಕಿಗಳು ಸಂಸಾರದಲ್ಲಿ ಸುತ್ತುತ್ತಿರುವರು. ಕಣ್ಣಿಲ್ಲದ ಕುರುಡನು ತಗ್ಗುತಿಟ್ಟಿನ ದಾರಿಯಲ್ಲಿ (ಮಾರ್ಗದರ್ಶಿಯಾಗಿ) ಕರೆದುಕೊಂಡು ಹೋಗುವ ಬಲುಮಂದಿ ಕುರುಡರು ದೊಡ್ಡ ಅನರ್ಥವನ್ನು ಹೇಗೆ ಪಡೆಯುವರೋ, ಹಾಗೆ ಇವರೂ (ಅನರ್ಥಗಳಿಗೊಳಗಾಗಿ) ಸುತ್ತುತ್ತಿರುವರು.

**ಪ್ರಮಾದದಿಂದ ಕೂಡಿ ವಿತ್ತದ ಭ್ರಾಂತಿಯಿಂದ ಮೂಢನಾಗಿರುವ ಬಾಲಕನಿಗೆ ಪರಲೋಕದ ಸಾಧನವೆಂಬುದೇ ಕಾಣುವದಿಲ್ಲ. (ಇವನು)**

---

ನವೂ ಇರಬಹುದು ; ಜೀವನ್ಮುಕ್ತನಿಗೆ ಶರೀರವಿರುವ ಪರಿಯಂತವೂ ಜಗತ್ತು ಕಾಣುವಷ್ಟರ ಮಟ್ಟಿನ ಅಜ್ಞಾನದ ಅಂಶವು ಉಳಿದಿರುವದು– ಎಂದು ಈಗಿನ ವೇದಾಂತಿಗಳಲ್ಲಿ ಕೆಲವರು ಹೇಳುತ್ತಾರೆ. ಇದು ಭಾಷ್ಯವಿರುದ್ಧವಾದದ್ದೆಂಬುದಕ್ಕೆ ಇಲ್ಲಿರುವ ಭಾಷ್ಯವಚನವೊಂದು ಪ್ರಮಾಣವಾಗಿರುತ್ತದೆ.

**'ಇದೇ ಲೋಕವು, ಮತ್ತೊಂದು ಲೋಕವೆಂಬುದಿಲ್ಲ'– ಎಂದು ಯೋಚಿಸಿ ಕೊಂಡು ಮತ್ತೆ ಮತ್ತೆ ನನ್ನ ವಶವನ್ನೈದುವನು. ‖ ೬ ‖**

ಹೀಗೆ ಮೂಢನಾಗಿರುವದರಿಂದಲೇ ಪರಲೋಕಸಾಧನವು ತೋರುವದಿಲ್ಲ. (ಮೂಲದಲ್ಲಿ 'ಸಾಂಪರಾಯಃ' ಎಂದಿದೆಯಷ್ಟೆ;) ಸತ್ತ ಮೇಲೆ ಹೋಗಿ ಸೇರ ತಕ್ಕ ಲೋಕಕ್ಕೆ ಸಂಪರಾಯವೆಂದು ಹೆಸರು ; ಅದನ್ನು ಪಡೆಯುವದಕ್ಕೆ ಅನು ಕೂಲವಾದ ಶಾಸ್ತ್ರದಲ್ಲಿ ಹೇಳಿರುವ ಗೊತ್ತಾದ ಸಾಧನವೇ ಸಾಂಪರಾಯವೆನಿ ಸುವದು. ಅಂಥ (ಸಾಂಪರಾಯವು) ಬಾಲಕನಿಗೆ ಎಂದರೆ ಅವಿವೇಕಿಯಾದ ವನಿಗೆ ತೋರುವದಿಲ್ಲ ; ಅದು ಅವನಿಗೆ ಬೆಳಗುವದಿಲ್ಲ, ಅವನು ಆ (ಸಾಧನ ವನ್ನು) ಮಾಡುವದಿಲ್ಲ– ಎಂದು ತಾತ್ಪರ್ಯ. ಪ್ರಮಾದದಿಂದ ಕೂಡಿ ಎಂದರೆ ಮಕ್ಕಳು, ಮರಿಗಳು, ದನಕರುಗಳು- ಮುಂತಾದ ಪ್ರಯೋಜನಗಳಲ್ಲಿ ಆಸಕ್ತ ನಾಗಿ, ವಿತ್ತದ ಭ್ರಾಂತಿಯಿಂದ ಮೂಢನಾಗಿರುವ ಎಂದರೆ ಹಣದ ನಿಮಿತ್ತ ದಿಂದ ಅವಿವೇಕವನ್ನು ಹೊಂದಿ ಅಜ್ಞಾನದಿಂದ ಮುಚ್ಚಿ ಹೋಗಿರುವಾತನಿಗೆ (ಪರಲೋಕಸಾಧನವು ತೋರುವದಿಲ್ಲ.) 'ಹೆಂಗಸರು ಅನ್ನಪಾನಗಳು ಮುಂತಾ ದವುಗಳಿಂದ ಕೂಡಿ ಈಗ ಕಾಣುತ್ತಿದೆಯಲ್ಲ, ಇದೇ ಲೋಕವು ಮತ್ತೊಂದು ನಾವು ಕಾಣದ ಪರಲೋಕವೆಂಬುದಿಲ್ಲ'– ಹೀಗೆಂದು ಸ್ವಭಾವದಿಂದ* ಯೋಚಿಸಿ ಕೊಳ್ಳುತ್ತಾ ಅವನು ಮತ್ತೆ ಮತ್ತೆ ಹುಟ್ಟಿ ನನ್ನ ವಶವನ್ನೈದುವನು; ಮೃತ್ಯು ವಾದ ನನಗೆ ಅಧೀನವಾಗುತ್ತಿರುವನು, ಎಂದರೆ ಹುಟ್ಟುಹೊಂದು ಮುಂತಾದ ದುಃಖದ ಸಾಲನ್ನೇ ಹತ್ತಿಕೊಂಡಿರುವನು– ಎಂದರ್ಥ. ಬಹು ಮಟ್ಟಿಗೆ† ಜನರು ಈ ವಿಧವಾಗಿಯೇ ಇರುವರು.

**ಬಹು ಜನರಿಗೆ ಶ್ರವಣಕ್ಕೂ ಯಾವಾತನು ಸಿಗುವಂತಿಲ್ಲವೋ ಕೇಳಿದ ಮೇಲೂ ಯಾವಾತನನ್ನು ಬಹು ಜನರು ತಿಳಿಯರೋ, ಅಂಥ ಈ (ಆತ್ಮ ನನ್ನು) ಹೇಳುವವನು ಆಶ್ಚರ್ಯರೂಪನು, ಇವನನ್ನು ಪಡೆಯುವವನು ಜಾಣನು, ಜಾಣನಿಂದ ಹೇಳಿಸಿಕೊಂಡು ತಿಳಿಯುವಾತನು ಆಶ್ಚರ್ಯ ರೂಪನು. ‖ ೭ ‖**

ಆದರೆ ಯಾವಾತನು ಶ್ರೇಯಸ್ಸೇ ತನಗೆ ಬೇಕೆನ್ನುವನೋ ಅಂಥವನು ಎಲ್ಲಿಯೋ ಸಾವಿರಕ್ಕೆ ‡ ಒಬ್ಬನೇ. ಅಂಥ ನಿನ್ನಂಥವನೇ ಆತ್ಮಜ್ಞಾನಿಯಾಗು ವನು. ಏಕೆಂದರೆ ಶ್ರವಣಕ್ಕೂ ಎಂದರೆ ಕೇಳುವದಕ್ಕೆ ಕೂಡ ಈ ಆತ್ಮನು ಬಹು ಜನರಿಗೆ ಸಿಗುವಂತಿಲ್ಲ. ಇನ್ನೂ ಅನೇಕರು ಈ ಆತ್ಮನನ್ನು (ಕುರಿತು) ಶ್ರವಣ

* ವಿಚಾರಹೀನನಾಗಿ.    † ಇಲ್ಲಿ ಸರಿಯಾದ ಮುಮುಕ್ಷುತ್ವವು ಬರುವದು ಬಲು ಕಷ್ಟವೆಂದು ಹೇಳುವ ಮುಂದಿನ ಮಂತ್ರಕ್ಕೆ ಸಂಬಂಧವನ್ನು ತೋರಿಸಿದೆ.

‡ ಭಗವದ್ಗೀತೆ– (೭- ೩).

ಮಾಡಿದ ಮೇಲೂ ತಿಳಿಯರು; ಮಂದಭಾಗ್ಯರಾದ ಇವರು ಮನಸ್ಸಿನಲ್ಲಿ ಸಂಸ್ಕಾರವಿಲ್ಲದ್ದರಿಂದ (ಆತ್ಮನನ್ನು) ಅರಿಯ(ಲಾರ)ರು. ಮತ್ತು ಈ (ಆತ್ಮನನ್ನು ವಿವರಿಸಿ) ಹೇಳುವಾತನೂ ಆಶ್ಚರ್ಯವೆ, * ಅದ್ಭುತಸ್ವರೂಪನೆ, ಬಹು ಮಂದಿಯಲ್ಲಿ ಯಾರೋ ಒಬ್ಬನು ಇರುತ್ತಾನೆ; ಮತ್ತು ಶ್ರವಣಮಾಡಿದ ಮೇಲೂ ಈ ಆತ್ಮನನ್ನು ಪಡೆಯುವನು ಕುಶಲನೆ, ಜಾಣನೆ; (ಅಂಥವನೂ) ಅನೇಕರಲ್ಲಿ ಎಲ್ಲಿಯೋ ಒಬ್ಬನಿರುತ್ತಾನೆ. ಏಕೆಂದರೆ ಗಟ್ಟಿಗನಾದ ಜಾಣನಾದ ಗುರುವಿನಿಂದ ಹೇಳಿಸಿಕೊಂಡು ತಿಳಿದುಕೊಳ್ಳುವಾತನು ಆಶ್ಚರ್ಯವೆ, ಯಾರೋ ಒಬ್ಬನಿರುತ್ತಾನೆ. ಏಕೆಂದರೆ:—

**ಕಡಿಮೆಯ ತರದ ಮನುಷ್ಯನಿಂದ ಹೇಳಲ್ಪಟ್ಟರೆ ಬಹುವಾಗಿ ಚಿಂತಿಸಲ್ಪಡುತ್ತಿರುವ ಈತನು ಸುಲಭವಾಗಿ ತಿಳಿಯಬರುವವನಲ್ಲ. ಅನನ್ಯಪ್ರೋಕ್ತನಾದರೆ ಈತನಲ್ಲಿ ಗತಿ ಎಂಬುದು ಇರುವದಿಲ್ಲ. (ಹಾಗಿಲ್ಲದಿದ್ದರೆ) ಅಣುಪ್ರಮಾಣವಾದದ್ದಕ್ಕಿಂತಲೂ ಅಣುವಾಗಿರುವ ಈತನು ತರ್ಕಕ್ಕೆ ತಕ್ಕವನಾಗಿರುವದಿಲ್ಲವೇ ಇಲ್ಲ. ॥ ೮ ॥**

ಕಡಿಮೆಯ ತರದ ಮನುಷ್ಯನಿಂದ– ಎಂದರೆ ಸಾಮಾನ್ಯಬುದ್ಧಿಯುಳ್ಳಾತನಿಂದ ಎಂದರ್ಥ. ಅಂಥ ಮನುಷ್ಯನಿಂದ– ಹೇಳಲ್ಪಟ್ಟರೆ ನೀನು ನನ್ನನ್ನು ಕೇಳುತ್ತಿರುವ ಈ ಆತ್ಮನು ಸುಲಭವಾಗಿ ತಿಳಿಯಬರುವವನಲ್ಲ, (ಹಾಗೆ ಈತನನ್ನು) ತಿಳಿಯುವದಕ್ಕೆ ಆಗುವದಿಲ್ಲ. ಏಕೆಂದರೆ 'ಇದಾನೆ', 'ಇಲ್ಲ', 'ಕರ್ತೃ' 'ಕರ್ತೃವಲ್ಲ', 'ಶುದ್ಧನು' 'ಅಶುದ್ಧನು'– ಎಂದು ಮುಂತಾಗಿ ವಾದಿಗಳು ಈತನನ್ನು ಬಲುಬಗೆಯಿಂದ ತಿಳಿಯುತ್ತಿರುವರು.

ಹಾಗಾದರೆ ಈತನನ್ನು ಸುಲಭವಾಗಿ ಹೇಗೆ ತಿಳಿಯಬಹುದು? ಎಂದರೆ ಹೇಳುತ್ತೇವೆ. 'ಅನನ್ಯಪ್ರೋಕ್ತನಾದರೆ' ಎಂದರೆ ಅನನ್ಯನಾಗಿ ನಾನು (ಅದಕ್ಕಿಂತ) ಬೇರೆಯಲ್ಲವೆಂದು ತಿಳಿದು, ಪ್ರತಿಪಾದ್ಯವಾದ ಬ್ರಹ್ಮದ ಸ್ವರೂಪವೇ ಆಗಿರುವ ಆಚಾರ್ಯನಿಂದ ಹೇಳಲ್ಪಟ್ಟರೆ, ಈ ಆತ್ಮನಲ್ಲಿ 'ಇದಾನೆ', 'ಇಲ್ಲ'- ಮುಂತಾದ ಗತಿ ಎಂದರೆ ವಿಕಲ್ಪಿಸುವ ಯೋಚನೆಯು ಇರುವದಿಲ್ಲ; ಏಕೆಂದರೆ ಎಲ್ಲಾ ಬಗೆಯ ವಿಕಲ್ಪಗಳೆಂಬ † ಗತಿಗಳೂ ಆತ್ಮನಲ್ಲಿ ಅಡಗಿಹೋಗಿರುತ್ತವೆ.

ಅಥವಾ ಅನನ್ಯನಾದ ಎಂದರೆ ತನ್ನ ಆತ್ಮನೇ ಆಗಿರುವ ಈ ಆತ್ಮನು ಪ್ರೋಕ್ತನಾದರೆ ಎಂದರೆ ಹೇಳಲ್ಪಟ್ಟರೆ (ಎಂದು ಅನನ್ಯಪ್ರೋಕ್ತೇ– ಎಂಬ ಮೂಲಕ್ಕೆ ವ್ಯಾಖ್ಯಾನವು. ಇವನು ಹೇಳಲ್ಪಟ್ಟರೆ) ಇಲ್ಲಿ ಗತಿ (ಇರುವದಿಲ್ಲ), ಎಂದರೆ ಬೇರೊಂದನ್ನು ತಿಳಿಯುವ (ಅವಗತಿಯು) ಇರುವದಿಲ್ಲ; ಏಕೆಂದರೆ (ಆಗ)

* ಭಗವದ್ಗೀತೆ (೨-೨೯).

† ಸಂಶಯಗಳೆಲ್ಲ ಹೋಗಿಬಿಡುವವು– ಎಂಬ (ಮುಂಡಕ)ಶ್ರುತಿಯ ಭಾವವಿದು.

ತಿಳಿಯಬೇಕಾದ ಬೇರೊಂದು ವಸ್ತುವೇ ಇರುವದಿಲ್ಲ. ಆತ್ಮನು ಒಬ್ಬನೇ ಎಂದರಿಯುವದೇ ಜ್ಞಾನದ ಕೊನೆಯ ನಿಲುಗಡೆ; ಆದ್ದರಿಂದ ತಿಳಿಯಬೇಕಾದದ್ದು ಇಲ್ಲದ್ದರಿಂದ ಇಲ್ಲಿ ಗತಿ (ಎಂದರೆ ತಿಳಿಯುವದು) ಏನೂ ಉಳಿದುಕೊಳ್ಳುವದಿಲ್ಲ. *

ಅಥವಾ ಇಲ್ಲಿ ಸಂಸಾರಗತಿಯೆಂಬುದಿರುವದಿಲ್ಲ, ಏಕೆಂದರೆ ಅನನ್ಯನಾದ (ಎಂದರೆ ತನ್ನಿಂದ ಬೇರೆಯಲ್ಲದ) ಆತ್ಮನು ಹೇಳಲ್ಪಟ್ಟರೆ ಅದನ್ನು ತಿಳಿದದ್ದರ ಫಲವಾದ ಮೋಕ್ಷವು ಕೂಡಲೆ ಆಗಿಯೇ ಬಿಡುತ್ತದೆ. †

ಅಥವಾ (ತಾನು) ಹೇಳುವ ಬ್ರಹ್ಮಾತ್ಮವೇ ತಾನಾಗಿ ಆಚಾರ್ಯನಿಂದ ಆತ್ಮನು ಹೇಳಲ್ಪಟ್ಟರೆ ಅಗತಿ ಎಂದರೆ ತಿಳಿಯದೆ ಇರುವದು, ಗೊತ್ತಾಗದೆ ಇರುವದೆಂಬುದು ಅವನಲ್ಲಿರುವದಿಲ್ಲ. ಆಚಾರ್ಯನಿಗೆ ಹೇಗೋ ಹಾಗೆ ಶ್ರವಣಮಾಡಿದಾತನಿಗೂ 'ಅದೇ ನಾನು ಆಗಿರುವೆನು' ಎಂದು ಆ (ಆತ್ಮ)ವಿಷಯವಾಗಿ ತಿಳಿವಳಿಕೆಯು ಆಗಿಯೇ ತೀರುವದು ಎಂದು ಅರ್ಥ.

ಆಗಮವುಳ್ಳ ‡ ಆಚಾರ್ಯನು ಅನನ್ಯನಾಗಿ ಹೇಳಿದರೆ ಈ ಕ್ರಮದಲ್ಲಿ ಆತ್ಮವು ಸುಲಭವಾಗಿಯೇ ತಿಳಿಯಬರುವದು. ಹಾಗಿಲ್ಲದಿದ್ದರೆ ಆತ್ಮನು ಅಣುಪ್ರಮಾಣವಾಗಿರುವದಕ್ಕಿಂತಲೂ ಅಣುವಾಗಿ ಬಿಡುವನು. (ಹೇಗೆಂದರೆ) ತನ್ನ ಬುದ್ಧಿಯಿಂದಲೇ ಅಭಿಮಾನದಿಂದ ಊಹಿಸುವದೆಂಬ § ಬರಿಯ ತರ್ಕಕ್ಕೆ ತಕ್ಕವನಲ್ಲವೇ ಅಲ್ಲ. ತರ್ಕದಿಂದ ಈ ಆತ್ಮನು ಅಣುಪ್ರಮಾಣವೆಂದು ಯಾರಾದರೂ ಕಲ್ಪಿಸಿದರೆ ಅದಕ್ಕಿಂತಲೂ ಅಣುವಾಗಿರುವನೆಂದು ಮತ್ತೊಬ್ಬನು ಊಹಿಸುವನು, ಮತ್ತೊಬ್ಬನು ಎಲ್ಲಕ್ಕಿಂತಲೂ ಅಣುವಾಗಿರುವನೆಂದು ಊಹಿಸುವನು ; ಏಕೆಂದರೆ ತರ್ಕಕ್ಕೆ ನಿಲುಗಡೆಯೆಂಬುದೇ || ಎಲ್ಲಿಯೂ ಇರುವದಿಲ್ಲ.

**ಈ ಬುದ್ಧಿಯು ತರ್ಕದಿಂದ ಹೊಂದತಕ್ಕದ್ದಲ್ಲ; ಬೇರೊಬ್ಬನಿಂದಲೇ ಹೇಳಲ್ಪಟ್ಟರೇ ಸುಜ್ಞಾನವನ್ನುಂಟುಮಾಡುವದು. ಇದನ್ನು ನೀನು ಪಡೆದುಕೊಂಡಿರುತ್ತೀಯೆ. ಆಹ! ಸತ್ಯಧೃತಿಯಾಗಿರುವೆ; ಎಲೈ ನಚಿಕೇತನೆ, ನಿನ್ನಂಥ ಕೇಳತಕ್ಕವನು ನಮಗೆ ಉಂಟಾಗಲಿ ॥ ೯ ॥**

---

* ಒಂದನ್ನು ತಿಳಿದರೆ ಎಲ್ಲವನ್ನೂ ತಿಳಿದಂತಾಗುವದು– ಎಂಬ ಛಾಂದೋಗ್ಯ ಮುಂತಾದ ಶ್ರುತಿಗಳ ಅಭಿಪ್ರಾಯವಿದು.

† ಮುಕ್ತಿಯು ತಿಳಿಯಬೇಕಾದದ್ದಾಗಿರುವದರಿಂದ ಸದ್ಯೋಮುಕ್ತಿ, ಏನಾದರೂ ಮಾಡಿ ಪಡೆಯಬೇಕಾದ ಪ್ರಾಪ್ಯವಲ್ಲ ಎಂದು ಭಾವ. ಈ ವಿಷಯದಲ್ಲಿ ಪೀಠಿಕೆಯನ್ನು ನೋಡಿ.

‡ ಅನುಭವಿಯಾದ ಗುರುವಿನ ಉಪದೇಶವುಳ್ಳ. § ಆತ್ಮಜ್ಞಾನಕ್ಕೆ ಅನುಭವವೇ ಮುಖ್ಯವೇ ಹೊರತು ಹಾಗೆ, ಹೀಗೆ- ಎಂದು ಊಹಿಸುವ ಮಾತಲ್ಲ. || ಅನುಭವಕ್ಕೆ ಹೊಂದದ ಬರಿಯ ತರ್ಕಕ್ಕೆ ನಿಲುಗಡೆಯಿಲ್ಲವೆಂಬುದನ್ನು ಬ್ರಹ್ಮಸೂತ್ರ(೨-೧-೧೧)ದಲ್ಲಿ ನಿರ್ಣಯಮಾಡಿರುತ್ತದೆ.

ಆದ್ದರಿಂದ ಆತ್ಮನು ಅನನ್ಯಪ್ರೋಕ್ತನಾದರೆ ಹುಟ್ಟುವದಾದ ಆಗಮದಲ್ಲಿ ಹೇಳಿರುವ ಈ ಆತ್ಮಜ್ಞಾನವೆಂಬುದು ತರ್ಕದಿಂದ ಎಂದರೆ ತನ್ನ ಬುದ್ಧಿಯ ಅಭಿಮಾನದ ಒರಿಸು ಊಹೆಯಿಂದ ಹೊಂದತಕ್ಕದ್ದಲ್ಲ, ಪಡೆಯುವದಕ್ಕಾಗಲಾರದು ಎಂದರ್ಥ– ಅಥವಾ ಮೂಲದಲ್ಲಿ 'ನಾಪನೇಯಾ' ಎಂಬುದಕ್ಕೆ ಹೋಗಲಾಡಿಸಲಾಗದ್ದು, ಬಿಡುವದಕ್ಕಾಗದ್ದು. ಎಂದಾದರೂ ಅರ್ಥವನ್ನು ಮಾಡಬಹುದು– ಏಕೆಂದರೆ ತಾರ್ಕಿಕನು ಆಗಮವನ್ನು ಅರಿಯದೆ ತನ್ನ ಬುದ್ಧಿಯಿಂದ ಕಲ್ಪಿಸಿಕೊಂಡ ಯಾವದೋ ಒಂದು ವಸ್ತುವನ್ನು ಹೇಳುತ್ತಾನೆ. ಆದ್ದರಿಂದಲೇ ಎಲೈ ಪ್ರಿಯತಮನಾದ ನಚಿಕೇತನೆ, ಈ ಆಗಮದಿಂದುಂಟಾಗುವ ಬುದ್ಧಿಯು ತಾರ್ಕಿಕನಿಗಿಂತ ಬೇರೆಯಾದವನೂ ಆಗಮವನ್ನು ಅರಿತವನೂ ಆದ ಆಚಾರ್ಯನಿಂದಲೇ ಹೇಳಲ್ಪಟ್ಟರೇ ಸರಿಯಾದ ಜ್ಞಾನವನ್ನು ಕೊಡುವದಾಗುವದು.

ತರ್ಕಕ್ಕೆ ಸಿಲುಕದ ಆ ಬುದ್ಧಿಯು ಯಾವದು? ಎಂದರೆ ಹೇಳುತ್ತಾರೆ: ಅಂಥ ಈ ಬುದ್ಧಿಯನ್ನು ನೀನು ನನ್ನ ವರಪ್ರದಾನದಿಂದ ಪಡೆದಿರುತ್ತೀಯೆ. ಸತ್ಯವಾದ, ಸುಸ್ಥಾದದ್ದರ ವಿಷಯದಲ್ಲಿನ ಧೃತಿಯುಳ್ಳವನು; ಆಹಾ (ನೀನು ಸಿಕ್ಕಿದ್ದೆಲ್ಲವನ್ನೂ ಬಿಟ್ಟು ನಾನು ಹೇಳುವ ಸತ್ಯವಿಚಾರವನ್ನೇ ಬಯಸಿದೆಯಲ್ಲ! ಆದ್ದರಿಂದ ನೀನೇ ಮೆಚ್ಚಿನವನು) ಎಂದು ಮೃತ್ಯುವು ತಾನು ಮುಂದೆ ಹೇಳುವ ವಿದ್ಯೆಯನ್ನು ಹೊಗಳುವದಕ್ಕಾಗಿ ನಚಿಕೇತನನ್ನು ದಯೆಯಿಂದ (ಮೆಚ್ಚಿ) ಮಾತನಾಡಿಸುತ್ತಿದ್ದಾನೆ ನಚಿಕೇತನೆ, ನಿನ್ನಂಥವನು ನಿನಗೆ ಸಮನಾದವನು, ಮತ್ತೊಬ್ಬ– ಪುತ್ರನೋ ಶಿಷ್ಯನೋ– (ತತ್ತ್ವವನ್ನು) ಕೇಳುವಂಥವನು ನಮಗೆ ಉಂಟಾಗಲಿ. ಎಂಥವನು ಎಂದರೆ ನೀನು ಹೇಗಿರುವೆಯೋ ಹಾಗೆಯೇ ಇರುವವನು (ನಮಗೆ ಬೇಕು).

**ಶೇವಧಿಯು ಅನಿತ್ಯವೆಂದು ನಾನು ಬಲ್ಲೆನು, ಏಕೆಂದರೆ ಅಧ್ರುವವಾದವುಗಳಿಂದ ಧ್ರುವವಾದ ಅದು ಪಡೆಯತಕ್ಕದ್ದಲ್ಲ ಆದ್ದರಿಂದ ನನ್ನಿಂದ ನಾಚಿಕೇತವೆಂಬ ಅಗ್ನಿಯು ಉಪಾಸನೆಮಾಡಲ್ಪಟ್ಟಿತು, ಅನಿತ್ಯವಾದ ದ್ರವ್ಯಗಳಿಂದ ನಿತ್ಯವಾದದ್ದನ್ನು ಪಡೆದಿರುತ್ತೇನೆ. ॥ ೧೦ ॥**

ಸಂತೋಷದಿಂದ ಮತ್ತೂ ಹೇಳುತ್ತಾನೆ. ಶೇವಧಿ ಎಂದರೆ ಕರ್ಮಫಲವೆಂಬ ನಿಧಿಯು; ಏಕೆಂದರೆ ನಿಧಿಯನ್ನು (ಬಯಸುವಂತೆ ಜನರು ಇದನ್ನು) ಬಯಸುತ್ತಾರೆ. ಈ (ನಿಧಿಯು) ಅನಿತ್ಯವೆಂದು ನಾನು ಬಲ್ಲೆನು. ಏಕೆಂದರೆ ಅಧ್ರುವ

* ತರ್ಕವು ಅನುಭವಕ್ಕಿಂತ ಕಡಿಮೆಯೆನ್ನುವದು ಇದರಿಂದಲೂ ಗೊತ್ತಾಗುತ್ತದೆ. ಆತ್ಮಜ್ಞಾನವು ನಮಗೆ ಆಗಿಬಿಟ್ಟರೆ ತರ್ಕದಿಂದ ಅದನ್ನು ಇಲ್ಲವೆಂದು ಮಾಡುವದಕ್ಕೆ ಆಗುವದಿಲ್ಲ. ಈ ವಿಷಯಕ್ಕೆ ಪೀಠಿಕೆಯನ್ನು ನೋಡಿ

ವಾದ ಎಂದರೆ ಅನಿತ್ಯವಾದ ವಸ್ತುಗಳಿಗೆ ಆ ಪರಮಾತ್ಮನೆಂಬ ನಿಧಿಯನ್ನು ಪಡೆಯಲಾಗುವದೇ ಇಲ್ಲ; ಅನಿತ್ಯಸುಖರೂಪವಾದ ನಿಧಿಯುಂಟಷ್ಟೆ, ಅದು ಮಾತ್ರ ಅನಿತ್ಯವಾದ ದ್ರವ್ಯಗಳಿಂದ ಪಡೆಯಲಾಗುವದು. ಹೀಗಿರುವದರಿಂದ, ಈ ಕಾರಣದಿಂದ, ಅನಿತ್ಯವಾದ ಸಾಧನಗಳಿಂದ ನಿತ್ಯವಾದದ್ದು ಪಡೆಯುವದ ಕ್ಕಾಗಲಾರದೆಂದು ತಿಳಿದುಕೊಂಡೂ ನನ್ನಿಂದ ನಚಿಕೇತಾಗ್ನಿಯು ಸೇವಿಸಲ್ಪಟ್ಟಿತು; ಅನಿತ್ಯವಾದ ಪಶುವೇ ಮುಂತಾದ ವಸ್ತುಗಳಿಂದ ಸ್ವರ್ಗಕ್ಕೆ ಸಾಧನವಾದ ಅಗ್ನಿಯನ್ನು ಸೇವೆಮಾಡಿದೆನೆಂದು ಅರ್ಥ. ಆದ್ದರಿಂದ ನಾನು ಈ ಅಧಿಕಾರವನ್ನು† ಪಡೆದು ನಿತ್ಯವನ್ನು – ಎಂದರೆ ಆಪೇಕ್ಷಿಕನಿತ್ಯವಾದ ‡ ಸ್ವರ್ಗವೆಂಬ– ಯಮನ ಸ್ಥಾನವನ್ನು ಪಡೆದಿರುತ್ತೇನೆ.

**ಕಾಮದ ಆಪ್ತಿ, ಜಗತ್ತಿನ ಪ್ರತಿಷ್ಠೆ, ಯಜ್ಞದ ಕೊನೆಗಾಣದ (ಫಲ,) ಅಭಯದ ದಡ, ಸ್ತುತ್ಯವಾಗಿ ದೊಡ್ಡದಾಗಿರುವ ದೊಡ್ಡ ಗತಿ, ಪ್ರತಿಷ್ಠೆ– (ಇದೆಲ್ಲವನ್ನೂ) ಕಂಡು, ಎಲೈ ಧೀರನಾದ ನಚಿಕೇತನೆ, ಧೈರ್ಯದಿಂದ ಕೈಬಿಟ್ಟಿದ್ದೀಯೆ.** || ೧೧ ||

ಆದರೆ ನೀನು ಕಾಮದ ಆಪ್ತಿ ಎಂದರೆ ಸಮಾಪ್ತಿ; ಏಕೆಂದರೆ ಈ (ಹಿರಣ್ಯಗರ್ಭಪದವಿಯಲ್ಲಿಯೇ) ಎಲ್ಲಾ ಕಾಮಗಳೂ ಪರಿಪೂರ್ತಿಯಾಗುವವು. ಅಧ್ಯಾತ್ಮ, ಅಧಿಭೂತ, ಅಧಿದೈವ- ಮುಂತಾದ ಜಗತ್ತಿನ ಪ್ರತಿಷ್ಠೆ ಎಂದರೆ ಆಶ್ರಯ; ಏಕೆಂದರೆ ಹಿರಣ್ಯಗರ್ಭನು ಇದೆಲ್ಲದರ ರೂಪವಾಗಿಯೂ ಇರುತ್ತಾನೆ. ಯಜ್ಞದ ಕೊನೆಗಾಣದ ಫಲವು, ಎಂದರೆ ಹಿರಣ್ಯಗರ್ಭನ ಸ್ಥಾನವೆ. ಅಭಯದ ದಡ, ಎಂದರೆ ಹೆಚ್ಚಿನ ನಿಲುಗಡೆ. (ಮೂಲದಲ್ಲಿ) ಸ್ತೋಮ ಎಂದರೆ ಹೊಗಳತಕ್ಕದ್ದು, ಮಹತ್ ಎಂದರೆ ಅಣಿಮಾದ್ಯೈಶ್ವರ್ಯವೇ ಮುಂತಾದ ಅನೇಕ ಗುಣಗಳಿಂದ ಕೂಡಿರುವದು. (ಹೀಗೆ) ಸ್ತೋಮವಾಗಿಯೂ ಎಲ್ಲಕ್ಕಿಂತಲೂ ಮಹತ್ತಾಗಿಯೂ ಇರುವದರಿಂದ (ಇದು) ಸ್ತೋಮಮಹತ್ತೆನಿಸುವದು. ಉರುಗಾಯ ಎಂದರೆ ವಿಸ್ತೀರ್ಣವಾದ ಗತಿ. ಪ್ರತಿಷ್ಠೆ ಎಂದರೆ ನಿನಗುಂಟಾಗಬಹುದಾದ ಅತ್ಯುತ್ತಮವಾದ

* "ಅನಿತ್ಯಸಾಧನದಿಂದ ನಿತ್ಯವು ಸಿಗಲಾರದೆಂಬುದನ್ನು ನಾನು ತಿಳಿದುತಿಳಿದೂ ಕರ್ಮವಶದಿಂದ ಈ ಯಮನ ಅಧಿಕಾರವನ್ನು ಹೊಂದಿರುತ್ತೇನೆನ್ನಬೇಕಾಯಿತು, ನೀನು ಮಾತ್ರ ಹಾಗಲ್ಲ, ನನಗಿಂತಲೂ ಹೆಚ್ಚು. ನಾನು ಕೊಟ್ಟರೂ ಇಂಥ ಪದವಿಯನ್ನು ಬೇಡವೆಂದೆಯಲ್ಲವೆ?'' ಎಂದು ಯಮನು ಮೆಚ್ಚಿ ಹೇಳಿರುತ್ತಾನೆ

† ಜ್ಞಾನಿಗಳಲ್ಲಿ ಕೆಲವರು ತಮ್ಮ ತಮ್ಮ ಅಧಿಕಾರದ ಅವಧಿಯು ಮುಗಿಯುವವರೆಗೆ ಆಯಾ ಕಾರ್ಯವನ್ನು ನಡೆಸುತ್ತಿರುವರೆಂದೂ ಆಮೇಲೆ ದೇಹವನ್ನು ಬಿಡುವರೆಂದೂ ಬ್ರಹ್ಮಸೂತ್ರ (೩-೩-೩೨)ದಲ್ಲಿ ಹೇಳಿರುತ್ತದೆ ಇದನ್ನು ಇಲ್ಲಿ ಸೂಚಿಸಿದೆ

‡ ಸ್ವರ್ಗಸುಖವು ಬಹುಕಾಲವಿರುವದರಿಂದ ಇಲ್ಲಿಯ ಸುಖಕ್ಕೆ ಹೋಲಿಸಿದರೆ ನಿತ್ಯವಾಗುವದು.

ಸ್ಥಿತಿ. (ಇದನ್ನೆಲ್ಲವನ್ನೂ) ನೋಡಿ ಧೈರ್ಯದಿಂದ ಬುದ್ಧಿವಂತನಾದ್ದರಿಂದ ಎಲೈ ನಚಿಕೇತನೆ, ಪರತತ್ತ್ವವನ್ನೇ ಬಯಸಿ ಈ ಸಂಸಾರಭೋಗಸಮೂಹವನ್ನೆಲ್ಲ ಬಿಟ್ಟಿರುತ್ತೀಯೆ. ಆಹಾ, ಬಹು ಉತ್ತಮವಾದ ಗುಣಗಳುಳ್ಳವನಾಗಿದ್ದೀಯೆ!

**ಗುಟ್ಟಾಗಿರುವ ಸ್ಥಾನವನ್ನು ಹೊಕ್ಕು ಗುಹೆಯಲ್ಲಿದ್ದು ಗಹ್ವರದಲ್ಲಿರುವ(ದರಿಂದ) ನೋಡುವಕ್ಕೆ ಕಷ್ಟವಾಗಿರುವ ಆ ಪುರಾಣನಾದ ದೇವನನ್ನು ಅಧ್ಯಾತ್ಮಯೋಗದ ಪ್ರಾಪ್ತಿಯಿಂದ ತಿಳಿದುಕೊಂಡ ಧೀರನು ಹರ್ಷಶೋಕಗಳೆರಡನ್ನೂ ಬಿಡುತ್ತಾನೆ. ॥ ೧೨ ॥**

ಯಾವ ಆತ್ಮನನ್ನು ನೀನು ಅರಿಯಬೇಕೆಂದಿರುವೆಯೋ ಅವನು ದುರ್ದರ್ಶನು, ಎಂದರೆ ಕಷ್ಟದಿಂದ ಅವನನ್ನು ನೋಡಲಾಗುವದು, ಏಕೆಂದರೆ ಅವನು ಅತಿಸೂಕ್ಷ್ಮನಾಗಿರುವನು, ಗುಟ್ಟಾಗಿರುವ ಸ್ಥಾನವನ್ನು ಎಂದರೆ ಗೂಢತ್ವ. ಹಿಡಿಯುವದಕ್ಕಾಗದ ಸ್ಥಳವನ್ನು ಹೊಕ್ಕಿರುವನು, ಪ್ರಾಕೃತವಿಷಯಗಳಿಂದ ಮೋಹಿತವಾಗುವ† ತಿಳಿವುಗಳಿರುವವರಿಗೆ ಕಾಣದಂತೆ ಇರುವನು ಎಂದು ತಾತ್ಪರ್ಯ; ಗುಹೆಯಲ್ಲಿ ಎಂದರೆ ಬುದ್ಧಿಯಲ್ಲಿ ಇರುವನು, ಏಕೆಂದರೆ ಅಲ್ಲಿಯೇ ಅವನು ಕಾಣಬರುವನು; ಗಹ್ವರದಲ್ಲಿ ಎಂದರೆ ಬಹು ಬಗೆಯ ಅನರ್ಥಗಳ ಗುಂಪಿನಲ್ಲಿ ಇದ್ದುಕೊಂಡಿರುವನು. ಹೀಗೆ ಇವನು ಗೂಢವಾಗಿರುವ (ಸ್ಥಾನ)ವನ್ನು ಹೊಕ್ಕು, ಗುಹಾಹಿತನಾಗಿ, ಗಹ್ವರೇಷ್ಠನಾಗಿರುವದರಿಂದ ದುರ್ದರ್ಶನಾಗಿರುತ್ತಾನೆ. ಈ ಪುರಾಣನಾದ ದೇವನನ್ನು ಎಂದರೆ ಹಳಬನಾದ ಆತ್ಮನನ್ನು ಅಧ್ಯಾತ್ಮಯೋಗದ ಪ್ರಾಪ್ತಿಯಿಂದ– ವಿಷಯಗಳಿಂದ ಈಚೆಗೆ ಮನಸ್ಸನ್ನು ಸೆಳೆದುಕೊಂಡು ಆತ್ಮನಲ್ಲಿಯೇ ನಿಲ್ಲಿಸುವದೇ **ಅಧ್ಯಾತ್ಮಯೋಗವು.** ಇದನ್ನು ಹೊಂದುವದರಿಂದ– ತಿಳಿದುಕೊಂಡು ಬುದ್ಧಿವಂತನಾದವನು ಆತ್ಮನಿಗೆ ಹೆಚ್ಚಿಗೆಯಾಗುವದಾಗಲಿ ಕಡಿಮೆಯಾಗುವದಾಗಲಿ ಇಲ್ಲದ್ದರಿಂದ (ಈ ತತ್ತ್ವವನ್ನರಿತು) ಹರ್ಷಶೋಕಗಳೆರಡನ್ನೂ ಬಿಡುವನು.

**ಇದನ್ನು ಕೇಳಿ ಚೆನ್ನಾಗಿ ಪರಿಗ್ರಹಿಸಿ ಮೇಲಕ್ಕೆ ಎತ್ತಿ ಈ ಧರ್ಮ್ಯನಾಗಿಯೂ ಅಣುವಾಗಿಯೂ ಇರುವ (ಆತ್ಮನನ್ನು) ಹೊಂದುವ**

---

* ಹಿರಣ್ಯಗರ್ಭಪ್ರಾಪ್ತಿಯಿಂದ ಅತ್ಯಂತ ಹೆಚ್ಚಿನ ಭೋಗವು ಸಿಕ್ಕುವದಾದರೂ ಅದರ ಭೋಗದಲ್ಲಿ ಕೂಡ ವಿರಕ್ತಿಯುಂಟಾಗುವವನಿಗೆ ಮಾತ್ರ ಜ್ಞಾನದಲ್ಲಿ ಅಧಿಕಾರವಿರುವದೆಂದು ಭಾವ. ಯಮನು ಬೇಕಾದ ಇಷ್ಟಾರ್ಥವನ್ನೆಲ್ಲ ಕೊಡುತ್ತೇನೆಂದರೂ ನಚಿಕೇತನು ಒಪ್ಪಲಿಲ್ಲ, ಪರಮಾರ್ಥವನ್ನೇ ಬಯಸಿದನು. ಆದ್ದರಿಂದ ಅವನಲ್ಲಿ ಇಹಾಮುತ್ರಫಲಭೋಗವಿರಾಗ, ಮುಮುಕ್ಷುತೆ– ಈ ಎರಡೂ ಇದ್ದವೆಂದು ಇಲ್ಲಿ ತೋರಿಸಿರುತ್ತದೆ

† ಪ್ರಾಕೃತವಿಕಾರವಿಷಯವಿಜ್ಞಾನೈಃ– ಎಂದಿದ್ದರೆ 'ಪ್ರಕೃತಿಯ ವಿಕಾರಗಳನ್ನು ಕುರಿತ ತಿಳಿವುಳ್ಳ' ಎಂದು ಸರಳವಾಗಿ ಅರ್ಥವಾಗುತ್ತಿತ್ತು

**ಮರ್ತ್ಯನು ಮೋದಕ್ಕೆ ಕಾರಣವಾಗಿರುವದನ್ನು ಪಡೆದಿರುವದರಿಂದ ಸಂತೋಷಪಡುತ್ತಿರುವನು. ನಚಿಕೇತಸಿಗೆ (ಈ) ಮನೆಯ ಬಾಗಿಲು ತೆರೆದಿರುವದೆಂದು ತಿಳಿಯುವೆನು. || ೧೩ ||**

ಮರ್ತ್ಯನು ಮುಂದೆ (೧೮ನೆಯ ಮಂತ್ರದಿಂದ) ನಾನು ಹೇಳುವ ಈ ಆತ್ಮತತ್ತ್ವವನ್ನು ಆಚಾರ್ಯರಿಂದ ಕೇಳಿ, ಚೆನ್ನಾಗಿ ಅದೇ ನಾನೆಂದು ಪರಿಗ್ರಹಿಸಿ ತೆಗೆದುಕೊಂಡು, ಧರ್ಮಕ್ಕೆ ಹೊಂದಿದ್ದಾಗಿಯೂ ಅಣು ಎಂದರೆ ಸೂಕ್ಷ್ಮವಾಗಿಯೂ * ಇರುವ ಈ ಆತ್ಮವನ್ನು ಮೇಲಕ್ಕೆ ಎತ್ತಿ ಎಂದರೆ ಶರೀರವೇ ಮುಂತಾದವುಗಳಿಂದ † ಬೇರ್ಪಡಿಸಿ ಪಡೆದರೆ ಅಂಥ ಮರ್ತ್ಯನು ‡—ಎಂದರೆ ಸಾಯುವ ಸ್ವಭಾವವುಳ್ಳ ಮನುಷ್ಯನಾದರೂ ಹೀಗೆ ತಿಳಿದವನು— ಹರ್ಷವನ್ನುಂಟುಮಾಡುವ ಆತ್ಮನನ್ನು ಹೊಂದಿರುವದರಿಂದ ಆನಂದಪಡುತ್ತಿರುವನು. ಇಂಥ ಈ ವಿಧವಾದ ಬ್ರಹ್ಮವೆಂಬ ಮನೆಯು § ನಚಿಕೇತಸಿಗಾಗಿ ಎಂದರೆ ನಿನಗಾಗಿ ಬಾಗಿಲು ತೆರೆದುಕೊಂಡು ಎದುರಿಗೆ ಇರುವದು— ಎಂದು ತಿಳಿಯುವೆನು; ನೀನು ಮೋಕ್ಷಕ್ಕೆ ತಕ್ಕವನೆಂದು ಎಣಿಸುತ್ತೇನೆ ಎಂದು ಅಭಿಪ್ರಾಯವು

## ಆತ್ಮಸ್ವರೂಪವಿಷಯವಾದ ಪ್ರಶ್ನೆ

**ಧರ್ಮಕ್ಕಿಂತಲೂ ಬೇರೆಯಾಗಿ ಅಧರ್ಮಕ್ಕಿಂತಲೂ ಬೇರೆಯಾಗಿ, ಈ ಕಾರ್ಯಕಾರಣಗಳಿಗಿಂತಲೂ ಬೇರೆಯಾಗಿ, ಭೂತಕ್ಕಿಂತಲೂ ಬೇರೆಯಾಗಿ, ಭವ್ಯಕ್ಕಿಂತಲೂ ಬೇರೆಯಾಗಿ ಇರುವ ಯಾವದನ್ನು ನೀನು ಕಂಡಿರುವೆಯೋ ಅದನ್ನು ಹೇಳು. || ೧೪ ||**

* ಆತ್ಮನು ನಿಜವಾಗಿಯೂ ಅಣುಪರಿಮಾಣನಾಗಿಯೇ ಇದ್ದಾನೆಂದು ಭಾವಿಸಬಾರದು, ಆತ್ಮನಿಗೆ ಪರಿಮಾಣವೇ ಇಲ್ಲ.

† ಪ್ರಾಣ, ಇಂದ್ರಿಯ, ಮನಸ್ಸು, ಅಹಂಕಾರ- ಇವುಗಳಿಂದ. ಇದರಿಂದ ಆತ್ಮಾನಾತ್ಮವಿವೇಕವನ್ನು ತಿಳಿಸಿದಂತಾಯಿತು. ಇಲ್ಲಿ ಶ್ರುತ್ವಾ, ಸಂಪರಿಗೃಹ್ಯ, ಪ್ರವೃಹ್ಯ- ಎಂಬ ಮಾತುಗಳು ಶ್ರವಣಮನನನಿದಿಧ್ಯಾಸನಗಳನ್ನು ಸೂಚಿಸುತ್ತವೆ

‡ ಮನುಷ್ಯರಿಗಾಗಿಯೇ ಶಾಸ್ತ್ರವು ಹುಟ್ಟಿರುವದರಿಂದ 'ಮರ್ತ್ಯ' ಎಂಬ ಮಾತು ಬಂದಿದೆ ಎಂದು (ಗೋ||) ವ್ಯಾಖ್ಯಾನಕಾರರು ಹೇಳುತ್ತಾರೆ, ಆದರೆ ಅಜ್ಞಾನದಿಂದ ಮರ್ತ್ಯನಾಗಿದ್ದರೂ ಮರಣರಹಿತವಾದ ಆನಂದವನ್ನು ಹೊಂದುತ್ತಾನೆ— ಎಂದು ತಿಳಿಸುವದಕ್ಕೆ ಈ ಮಾತು ಬಂದಿರುವದೆಂದು ಭಾಷ್ಯಸ್ವಾರಸ್ಯದಿಂದ ತೋರುತ್ತದೆ.

§ ಮನೆಯ ಬಾಗಿಲು ತೆರೆದುಕೊಂಡು ಒಳಹೊಗುವದಕ್ಕೆ ಅಡ್ಡಿಯಿಲ್ಲದಿರುವಂತೆ ಬ್ರಹ್ಮದ ಅರಿವು ನಿನಗೆ ಸಿಕ್ಕುವದಕ್ಕೆ ಸಿದ್ಧವಾಗಿರುತ್ತದೆ ಎಂದು ಭಾವ

ನಾನು ಯೋಗ್ಯನಾಗಿರುವದಾದರೆ, ನೀನು ನನ್ನಲ್ಲಿ ಪ್ರಸನ್ನನೂ ಆಗಿರುವವಾದರೆ ಧರ್ಮಕ್ಕಿಂತಲೂ ಬೇರೆಯಾಗಿ– ಎಂದರೆ ಶಾಸ್ತ್ರದಲ್ಲಿ ವಿಧಿಸಿರುವ ಧರ್ಮವನ್ನು ಮಾಡುವದು, ಅದರ ಫಲ, ಅದರ ಕಾರಕಗಳು- ಇವೆಲ್ಲಕ್ಕಿಂತಲೂ ಬೇರೆಯಾಗಿ ಎಂದರ್ಥ; ಮತ್ತು ಅಧರ್ಮಕ್ಕಿಂತಲೂ ಬೇರೆಯಾಗಿ; ಈ ಕಾರ್ಯಕಾರಣಗಳಿಗಿಂತಲೂ ಬೇರೆಯಾಗಿ– (ಮೂಲದಲ್ಲಿರುವ) ಕೃತ (ಎಂಬ ಮಾತಿಗೆ) ಕಾರ್ಯ (ಎಂದರ್ಥ), ಅಕೃತ ಎಂದರೆ ಕಾರಣವು,– ಇವೆರಡಕ್ಕಿಂತಲೂ ಬೇರೆಯಾಗಿ; ಮತ್ತು ಭೂತ ಎಂದರೆ ಆಗಿಹೋದದ್ದು, ಭವ್ಯ ಎಂದರೆ ಮುಂದೆ ಆಗುವದು, ಮತ್ತು ಈಗಿನದು * (ಈ ಮೂರಕ್ಕಿಂತ) ಬೇರೆಯಾಗಿ– ಎಂದರೆ ಮೂರು ಕಾಲದಿಂದಲೂ ಯಾವದು ಕಟ್ಟುಪಡೆಯದೆ ಇರುವದೋ ಎಂದರ್ಥ. ಹೀಗೆ ಯಾವ ವಸ್ತು ವ್ಯವಹಾರಗೋಚರವಾಗಿರುವದೆಲ್ಲಕ್ಕಿಂತಲೂ ಬೇರೆಯಾಗಿರುವದೆಂದು ನೀನು ಕಂಡಿರುವೆಯೋ ತಿಳಿದಿರುವೆಯೋ ಅದನ್ನು ನನಗೆ ಹೇಳು. †

## ಓಂಕಾರದ ಮೂಲಕ ಬ್ರಹ್ಮದ ಉಪದೇಶ

**ಎಲ್ಲಾ ವೇದಗಳೂ ಯಾವ ಸ್ಥಾನವನ್ನು ತಿಳಿಸುತ್ತವೆಯೋ ಎಲ್ಲಾ ತಪಸ್ಸುಗಳೂ ಯಾವದನ್ನು ಹೇಳುವವೋ, ಯಾವದನ್ನು ಬಯಸಿ ಬ್ರಹ್ಮಚರ್ಯವನ್ನು ಮಾಡುವರೋ, ಅಂಥ ಸ್ಥಾನವನ್ನು ನಿನಗೆ ಸಂಗ್ರಹವಾಗಿ ಹೇಳುತ್ತೇನೆ; ಇದೇ ಓಂ ಎಂಬುದು. || ೧೫ ||**

ಹೀಗೆಂದು ಕೇಳಿದ ನಚಿಕೇತಸಿಗೆ ಆವನು ಕೇಳಿದ ವಸ್ತುವನ್ನೂ ಅದರ ಬೇರೆ ವಿಶೇಷಣಗಳನ್ನೂ ಹೇಳಬೇಕೆಂದು ಯಮನು (ಹೀಗೆ) ಹೇಳುತ್ತಾನೆ. ಎಲ್ಲಾ ವೇದಗಳೂ ‡ ಯಾವ ಪದವನ್ನು ಎಂದರೆ ತನಗಿಂತ ಬೇರೆಯಲ್ಲವೆಂದು§

* ಭೂತಭವಿಷ್ಯತ್ತುಗಳಲ್ಲದೆ ವರ್ತಮಾನವೂ ಇರುವದಿಲ್ಲ.

† ಇದು ಹಿಂದೆ ಕೇಳಿರುವ ಆತ್ಮಪ್ರಶ್ನೆಯ ವಿಶೇಷವು. ಮೂರನೆಯ ವರದಲ್ಲಿಯೇ ಈ ಪ್ರಶ್ನೆಯ ಉತ್ತರವು ಸೇರಿದೆಎಂದು ಬ್ರ|| ಸೂ|| (೧೪–೭) ಭಾಷ್ಯದಲ್ಲಿ ನಿರ್ಣಯಿಸಿರುತ್ತದೆ. ದೇಶಕಾಲವಸ್ತುಪರಿಚ್ಛೇದವಿಲ್ಲದ ಆತ್ಮಸ್ವರೂಪವನ್ನು ಕುರಿತು ಇಲ್ಲಿ ಪ್ರಶ್ನೆಮಾಡಿರುತ್ತದೆ ಎಂದು ತಿಳಿಯಬೇಕು.

‡ ಭಾಷ್ಯದಲ್ಲಿರಬೇಕಾದ 'ವೇದಾಃ' ಎಂಬ ಮಾತು ಮುದ್ರಿತಪುಸ್ತಕದಲ್ಲಿ ಕೈಬಿಟ್ಟುಹೋಗಿದೆ. ಬರೆದ ಪ್ರತಿಯಲ್ಲಿಯೂ ಹಾಗೇ ಇದ್ದರೆ ಲೇಖಕರ ಪ್ರಮಾದವೆಂದು ತಿಳಿಯಬೇಕು.

§ 'ಅವಿಭಾಗೇನ' ಎಂಬ ಮಾತನ್ನು 'ಗಮನೀಯಂ' ಎಂಬುದಕ್ಕೆ ಅನ್ವಯಿಸಿಕೊಳ್ಳಬೇಕು. ಮುಂದೆ (೩-೧-೧೫ ರಲ್ಲಿ) ಹೇಳಿರುವ ಸಾಯುಜ್ಯದ ಸೂಚನೆ. ಮುಕ್ತನು ಪರಮಾತ್ಮನಿಗಿಂತ ಬೇರೆಯಲ್ಲವೆಂಬುದನ್ನು ಬ್ರ|| ಸೂ|| (೪-೪-೪)ದಲ್ಲಿ ತಿಳಿಸಿರುತ್ತದೆ.

(ಅರಿಯುವದರ ಮೂಲಕ) ಪಡೆಯಬೇಕಾದ ಸ್ಥಾನವನ್ನು ಹೆಚ್ಚುಕಡಿಮೆ ಯಿಲ್ಲದೆ ಕೇಳುತ್ತಲಿವೆಯೊ, ಎಲ್ಲಾ ತಪಸ್ಸುಗಳೂ ಯಾವದನ್ನು ಹೇಳು ವವೊ ಎಂದರೆ ಯಾವದನ್ನು ಪಡೆಯುವದಕ್ಕೋಸ್ಕರವಾಗಿ (ಮಾಡಲ್ಪಡುವವೊ) ಎಂದರ್ಥ; ಯಾವದನ್ನು ಬಯಸಿ ಗುರುಕುಲದಲ್ಲಿ ವಾಸಮಾಡುವದೆಂಬ ಅಥವಾ ಬೇರೆ ಬಗೆಯ* ಬ್ರಹ್ಮಚರ್ಯವನ್ನು ಬ್ರಾಹ್ಮರನ್ನು ಪಡೆಯುವದಕ್ಕಾಗಿ ಆಚರಿಸು ವರೊ; ಆ ಪದವನ್ನು— ನೀನು ತಿಳಿಯಬೇಕೆಂದು ಇಚ್ಛಿಸುತ್ತಿರುವೆಯಲ್ಲ, ಅದನ್ನು—ಸಂಕ್ಷೇಪವಾಗಿ ಹೇಳುತ್ತೇನೆ. ಇದೇ 'ಓಂ' ಎಂಬುದು. ನೀನು ತಿಳಿಯಬೇಕೆಂದು ಅಪೇಕ್ಷಿಸಿದ ಸ್ಥಾನವೇ ಈ ಓಂಕಾರಶಬ್ದವಾಚ್ಯವಾಗಿಯೂ† ಓಂ ಎಂಬ ಶಬ್ದವನ್ನು ಪ್ರತೀಕವಾಗಿ‡ ಉಳ್ಳದ್ದಾಗಿಯೂ ಇರುವ ವಸ್ತು.

**ಈ ಅಕ್ಷರವೇ (ಅಪರ)ಬ್ರಹ್ಮವು, ಈ ಅಕ್ಷರವೇ ಪರ(ಬ್ರಹ್ಮವು); ಈ ಅಕ್ಷರವನ್ನೇ ತಿಳಿದರೇ ಯಾವಾತನು ಏನನ್ನು ಬಯಸಿದರೆ ಆತನಿಗೆ ಅದು (ಆಗುವದು). || ೧೬ ||**

ಆದ್ದರಿಂದ ಈ ಅಕ್ಷರವೇ ಅಪರಬ್ರಹ್ಮವು, ಮತ್ತು ಈ ಅಕ್ಷರವೇ ಪರ ಬ್ರಹ್ಮವು, ಏಕೆಂದರೆ ಈ ಅಕ್ಷರವು ಇವೆರಡಕ್ಕೂ ಪ್ರತೀಕವಾಗಿರುವದು. ಈ ಅಕ್ಷರವನ್ನೇ ತಿಳಿದು ಎಂದರೆ ಬ್ರಹ್ಮವೆಂದು ಉಪಾಸನೆಮಾಡಿ ಯಾವಾತನು ಪರಬ್ರಹ್ಮವನ್ನಾಗಲಿ ಅಪರಬ್ರಹ್ಮವನ್ನಾಗಲಿ ಯಾವುದನ್ನು ಬಯಸುವನೋ ಅವನಿಗೆ ಅದು ಆಗುತ್ತದೆ. ಆತನು ಇಚ್ಛಿಸುವದು ಪರಬ್ರಹ್ಮವಾದರೆ ಅದು ತಿಳಿಯತಕ್ಕದ್ದಾಗಿರುವದು, ಅಪರವಾದರೆ ಪಡೆಯತಕ್ಕದ್ದಾಗಿರುವದು. §

**ಈ ಆಲಂಬನವು ಶ್ರೇಷ್ಠವಾದದ್ದು, ಈ ಆಲಂಬನವು ಹೆಚ್ಚಿನದು. ಈ ಆಲಂಬನವನ್ನು ತಿಳಿದರೆ ಬ್ರಹ್ಮಲೋಕದಲ್ಲಿ ಪೂಜ್ಯನಾಗುವನು. || ೧೭ ||**

---

* ಗೃಹಸ್ಥನಾದರೂ ಶಾಸ್ತ್ರೋಕ್ತನಿಯಮದಂತೆ ನಡೆಸುವ ಬ್ರಹ್ಮಚರ್ಯವನ್ನು

† ಯಾವದನ್ನು ಉಚ್ಚರಿಸಿದರೆ ಯಾವ ವಸ್ತು ಮನಸ್ಸಿಗೆ ತೋರುವದೋ ಆ ವಸ್ತುವೆ ಆ ಶಬ್ದಕ್ಕೆ ವಾಚ್ಯವು, ಸಮಾಹಿತಚಿತ್ತನಾಗಿ ಓಂಕಾರವನ್ನು ಉಚ್ಚರಿಸಿದರೆ ಸಾಕ್ಷಿಯ ಜ್ಞಾನವು ಸ್ಫುರಿಸುವದರಿಂದ ಅದೇ ಓಂಕಾರಕ್ಕೆ ವಾಚ್ಯವು, ಆದ್ದರಿಂದ ಓಂಕಾರವನ್ನು ಆಶ್ರಯಿಸಿ ನಾನು ಬ್ರಹ್ಮವೆಂದು ಧ್ಯಾನಮಾಡಬೇಕೆಂದು ಅರ್ಥ— ಎಂದು ಆನಂದಗಿರಿಗಳು ಬರೆದಿರುತ್ತಾರೆ.

‡ ಗುರುತಾಗಿ ಸಾಲಗ್ರಾಮವನ್ನು ವಿಷ್ಣುದೃಷ್ಟಿಯಿಂದ ನೋಡುವಂತೆ ಓಂಕಾರವನ್ನು ಬ್ರಹ್ಮ ದೃಷ್ಟಿಯಿಂದ ನೋಡಬೇಕು. ಇದು ಮೊದಲಿನ ಧ್ಯಾನದಲ್ಲಿ ಶಕ್ತಿಯಿಲ್ಲದವರಿಗೆ ಹೇಳಿದ್ದು.

§ ಅಪರಬ್ರಹ್ಮವು ಪಡೆಯತಕ್ಕದ್ದೆಂದೂ ಪರಬ್ರಹ್ಮವು ಎಲ್ಲೆಲ್ಲಿಯೂ ವ್ಯಾಪಿಸಿರುವದರಿಂದ ಪಡೆಯತಕ್ಕ ಅವಶ್ಯಕತೆಯಿಲ್ಲದೆ ಬರಿಯ ತಿಳಿವಳಿಕೆಯಿಂದಲೆ ಹೊಂದತಕ್ಕದ್ದೆಂದೂ ಬ್ರ॥ ಸೂ॥ (೪-೩-೭—೧೪) ದಲ್ಲಿ ವಿವರಿಸಿರುತ್ತದೆ. ಅದೇ ಬ್ರಹ್ಮವೆ ಉಪಾಧಿಗಳಿಂದ ಅಪರವೆನಿಸಿರುವದು.

ಹೀಗಿರುವದರಿಂದ ಈ ಆಲಂಬನವೇ ಬ್ರಹ್ಮವನ್ನು ಕುರಿತ ಆಲಂಬನಗಳಲ್ಲೆಲ್ಲ ಶ್ರೇಷ್ಠವಾದದ್ದು, ಅತ್ಯುತ್ತಮವಾದದ್ದು. ಈ ಆಲಂಬನವೇ ಪರವು ಮತ್ತು ಅಪರವು; ಏಕೆಂದರೆ ಇದೇ ಪರಬ್ರಹ್ಮವನ್ನೂ ಅಪರಬ್ರಹ್ಮವನ್ನೂ ಉದ್ದೇಶ ಮಾಡಿಕೊಂಡು (ಶಾಸ್ತ್ರದಲ್ಲಿ ವಿಹಿತವಾಗಿ)ರುತ್ತದೆ. ಈ ಆಲಂಬನವನ್ನು ತಿಳಿದುಕೊಂಡರೆ ಬ್ರಹ್ಮಲೋಕದಲ್ಲಿ, ಎಂದರೆ ಪರಬ್ರಹ್ಮದಲ್ಲಿಯೂ ಅಪರಬ್ರಹ್ಮದಲ್ಲಿಯೂ ಪೂಜ್ಯನಾಗುತ್ತಾನೆ, (ತಾನೂ) ಬ್ರಹ್ಮವಾಗಿ ಬ್ರಹ್ಮದಂತೆ ಉಪಾಸ್ಯನಾಗುತ್ತಾನೆ ಎಂದರ್ಥ.

## ಬ್ರಹ್ಮದ ಸಾಕ್ಷಾಜ್ಜ್ಞಾನ

**ತಿಳಿದಂಥವನು ಹುಟ್ಟುವದೂ ಇಲ್ಲ, ಸಾಯುವದೂ ಇಲ್ಲ. ಈತನೂ ಏತರಿಂದಲೂ ಹುಟ್ಟಲಿಲ್ಲ, (ಈತನಿಂದಲೂ) ಯಾರೂ ಹುಟ್ಟಲಿಲ್ಲ. ಈತನು ಅಜನು, ನಿತ್ಯನು, ಶಾಶ್ವತನು, ಪುರಾಣನು; ಶರೀರವು ಕೊಲ್ಲಲ್ಪಟ್ಟರೂ (ತಾನು) ಕೊಲ್ಲಲ್ಪಡುವದಿಲ್ಲ. ॥ ೧೮ ॥**

"ಧರ್ಮಕ್ಕಿಂತಲೂ ಬೇರೆಯಾಗಿ" (೧–೯) ಎಂದು ಮುಂತಾಗಿ (ನಚಿಕೇತನಿಂದ) ಕೇಳಲ್ಪಟ್ಟ ಬ್ರಹ್ಮವು ಯಾವ ವಿಶೇಷವೂ ಇಲ್ಲದ್ದಾದ್ದರಿಂದ ಓಂಕಾರವು ಅದಕ್ಕೆ ಆಲಂಬನವಾಗಿಯೂ ಪ್ರತೀಕವಾಗಿಯೂ ಹೇಳಲ್ಪಟ್ಟಿತು. ಅಪರ ಬ್ರಹ್ಮಕ್ಕೂ (ಆಲಂಬನಪ್ರತೀಕಗಳಾಗಿ) ಹೇಳಲ್ಪಟ್ಟಿತು. ಇದು ಕೀಳುತರದ ಮತ್ತು ನಡುತರದ ಜಿಜ್ಞಾಸುಗಳಿಗಾಗಿ† (ಹೇಳಿದ್ದು). ಇನ್ನು ಈಗ ಆ ಓಂಕಾರವೆಂಬ ಆಲಂಬನೆಯುಳ್ಳ ಆತ್ಮನನ್ನು ನೇರಾಗಿಯೇ ಗೊತ್ತುಮಾಡಿಕೊಳ್ಳಬೇಕೆಂದು ಈ ಮಂತ್ರವನ್ನು ಹೇಳಿರುತ್ತದೆ.

'ಹುಟ್ಟುವದೂ ಇಲ್ಲ, ಸಾಯುವದೂ ಇಲ್ಲ.' ಹುಟ್ಟುವಂಥ ಅನಿತ್ಯ ವಸ್ತುವಿಗೆ ಅನೇಕವಿಕಾರಗಳುಂಟು. ಆ ಯಾವ ವಿಕಾರಗಳೂ (ಆತ್ಮನಲ್ಲಿ) ಇಲ್ಲವೆನ್ನುವದಕ್ಕಾಗಿ ‡ ಅವುಗಳಲ್ಲಿ ಹುಟ್ಟುವದು ನಾಶವಾಗುವದು – ಎಂಬ ಮೊದಲನೆಯ ಕೊನೆಯ ವಿಕಾರಗಳನ್ನು 'ಹುಟ್ಟುವದೂ ಇಲ್ಲ ಸಾಯುವದೂ ಇಲ್ಲ'– ಎಂದು ಆತ್ಮನಲ್ಲಿ ಇಲ್ಲ ಮೊದಲು ನಿಷೇಧಮಾಡಿರುತ್ತದೆ. ತಿಳಿದಂಥ

* ಆಕಾಶ, ಸೂರ್ಯ, ಮನಸ್ಸು, ನಾಮ, ಮನಸ್ಸು– ಮುಂತಾದ ಎಷ್ಟೋ ವಸ್ತುಗಳನ್ನು ಬ್ರಹ್ಮವೆಂದು ಉಪಾಸನೆಮಾಡಬೇಕೆಂದು ಶಾಸ್ತ್ರದಲ್ಲಿ ತಿಳಿಸಿರುತ್ತದೆ, ಇವುಗಳಿಗೆ ಆಲಂಬನಗಳೆಂದು ಹೆಸರು

† ಅದ್ವೈತಪ್ರಕರಣದ ೧೬ನೆಯ ಕಾರಿಕೆಯನ್ನು ನೋಡಿ.

‡ ಇದೆ, ಹುಟ್ಟುತ್ತದೆ, ಬೆಳೆಯುತ್ತದೆ, ಮಾರ್ಪಡುತ್ತದೆ, ಸೊರಗುತ್ತದೆ, ಹಾಳಾಗುತ್ತದೆ– ಎಂಬಿವು ಹೊರಗಿನ ವಸ್ತುಗಳಿಗೆ ಆಗುವ ಆರು ವಿಕಾರಗಳು ಇವುಗಳಲ್ಲಿ ಒಂದೂ ಆತ್ಮನಲ್ಲಿ ಇಲ್ಲ

ವನು ಎಂದರೆ ವ್ಯಾಪಿಯು; ಏಕೆ (ಸಾಯುವದಿಲ್ಲ) ವೆಂದರೆ (ಈ ಆತ್ಮನು) ನಾಶವಾಗದ ಚೈತನ್ಯಸ್ವಭಾವವುಳ್ಳವನಾಗಿರುತ್ತಾನೆ.* ಮತ್ತು ಈ ಆತ್ಮನು ಮತ್ತೆ ಯಾವ ಕಾರಣದಿಂದಲೂ ಹುಟ್ಟಿಲ್ಲ; ಮತ್ತು ಈ ಆತ್ಮನಾದ ತನ್ನಿಂದಲೂ ಬೇರೊಂದು† ವಸ್ತು ಹುಟ್ಟಿಲ್ಲ ಹೀಗಿರುವದರಿಂದ‡ ಈ ಆತ್ಮನು ಅಜನು ಎಂದರೆ ಹುಟ್ಟಿಲ್ಲದವನು, ನಿತ್ಯನು ಶಾಶ್ವತನು ಎಂದರೆ ಅಪಕ್ಷಯವಿಲ್ಲದವನು. ಯಾವದು ಶಾಶ್ವತವಲ್ಲವೋ ಅದು ಸವೆಯುತ್ತಿರುವದು, ಆದರೆ ಈತನು ಶಾಶ್ವತನು, (ಆದ್ದರಿಂದ ಸವೆಯುವದಿಲ್ಲ.) ಆದ್ದರಿಂದಲೇ ಪುರಾಣನು ಎಂದರೆ ಹಿಂದೆಯೂ ಹೊಸಬನೆ. ಯಾವನು ಅವಯವಗಳು ಕೂಡಿಕೊಳ್ಳುವದರಿಂದ ಉಂಟಾಗಿರುವನೋ ಅವನು ಈಗ ಹೊಸಬನು; ಉದಾಹರಣೆಗೆ ಗಡಿಗೆ ಮುಂತಾದವು (ಈಗ ಹೊಸದು ಎನ್ನಿಸಿಕೊಳ್ಳಬಹುದು); ಆದರೆ ಆತ್ಮನು ಇದಕ್ಕೆ ವಿರುದ್ಧನಾಗಿರುವದರಿಂದ ಪುರಾಣನು; ಎಂದರೆ ವೃದ್ಧಿಯಿಲ್ಲದವನು ಎಂದರ್ಥ. ಹೀಗಿರುವದರಿಂದ ಶಸ್ತ್ರವೇ ಮುಂತಾದವುಗಳಿಂದ ಶರೀರವು ಕೊಲ್ಲಲ್ಪಟ್ಟರೂ (ಆತ್ಮನು) ಆ (ಶರೀರದಲ್ಲಿದ್ದರೂ) ಆಕಾಶದಂತೆ§ ಕೊಲ್ಲಲ್ಪಡದೆ ಇರುವನು.

**ಕೊಲ್ಲುವಾತನು ಕೊಲ್ಲುವದಕ್ಕೆ ಯೋಚಿಸಿದರೆ, ಕೊಲ್ಲಲ್ಪಟ್ಟವನು ಕೊಲ್ಲಲ್ಪಟ್ಟೆನೆಂದು ತಿಳಿದರೆ, ಅವರಿಬ್ಬರೂ ಅರಿಯರು; ಈತನು ಕೊಲ್ಲುವದಿಲ್ಲ, ಕೊಲ್ಲಲ್ಪಡುವದಿಲ್ಲ. || ೧೯ ||**

ಆತ್ಮನು ಹೀಗಿದ್ದರೂ ಶರೀರವೇ ಆತ್ಮನೆಂದು ತಿಳಿದು ಕೊಲ್ಲುವಾತನು ಕೊಲ್ಲುವದಕ್ಕೆ ಯೋಚಿಸಿದರೆ, ಎಂದರೆ 'ಇವನನ್ನು ನಾನು ಕೊಲ್ಲುವೆನು' ಎಂದು ತಿಳಿದರೆ, ಮತ್ತು ಇನ್ನೊಬ್ಬನು ಕೊಲ್ಲಲ್ಪಡುವಾಗ ನಾನು 'ಕೊಲ್ಲಲ್ಪಡುತ್ತಿದೇನೆ' ಎಂದು ಆತ್ಮನನ್ನು ಕೊಲ್ಲಲ್ಪಟ್ಟದ್ದಾಗಿ ತಿಳಿದರೆ, ಅವರಿಬ್ಬರೂ (ನಿಜವಾದ) ತಮ್ಮ ಆತ್ಮನನ್ನು ಅರಿಯರು. ಏಕೆಂದರೆ ಆತ್ಮನು ವಿಕಾರವಿಲ್ಲದವನಾದ್ದರಿಂದ ಈತನು ಕೊಲ್ಲುವದೂ ಇಲ್ಲ; ಮತ್ತು ಆಕಾಶದಂತೆ ವಿಕಾರವಿಲ್ಲದವನಾಗಿರುವದರಿಂದಲೇ ಕೊಲ್ಲಲ್ಪಡುವದೂ ಇಲ್ಲ.

ಆದ್ದರಿಂದ ಧರ್ಮ, ಅಧರ್ಮ- ಮುಂತಾದ ಸಂಸಾರವು|| ಆತ್ಮನನ್ನು ಅರಿ

* ಇದು ಬೃಹದಾರಣ್ಯಕ (೪-೩-೩೦) ದ ಸೂಚನೆ ಚೈತನ್ಯದ ನಾಶವನ್ನು ಯಾರೂ ಅರಿಯುವದಕ್ಕೆ ಆಗುವಂತಿಲ್ಲ, ಏಕೆಂದರೆ ಅದನ್ನು ಅರಿಯುವದಕ್ಕೂ ಚೈತನ್ಯವು ಬೇಕಾಗುವದು.

† ಆತ್ಮನನ್ನು ಬಿಟ್ಟು ಬೇರೊಂದು ವಸ್ತುವೇ ಇಲ್ಲ ‡ ಆತ್ಮನು ಕಾರ್ಯಕಾರಣಗಳಿಲ್ಲದವನಾದ್ದರಿಂದ § ಆಕಾಶವು ಎಲ್ಲಾ ವಸ್ತುಗಳ ಒಳಗೂ ಹೊರಗೂ ಇರುತ್ತಿದ್ದರೂ ವಸ್ತುಗಳ ವಿಕಾರದಿಂದ ತಾನು ವಿಕಾರವನ್ನು ಹೊಂದದೆ ಇರುವದು.

|| ಕೊಲ್ಲುವದಿಲ್ಲ ಎಂದು ಹೇಳಿದ್ದು ಉಪಲಕ್ಷಣ; ಆತ್ಮನಲ್ಲಿ ಯಾವ ಕರ್ತೃತ್ವವೂ ಇಲ್ಲವೆಂಬುದು ಶ್ರುತಿಯ ತಾತ್ಪರ್ಯ ಎಂದು ಭಾವ

ಯದವನಿಗೆ ಸೇರಿದ್ದೇ ಹೊರತು ಬ್ರಹ್ಮಜ್ಞಾನಿಗೆ ಸೇರಿದ್ದಲ್ಲ. ಈ ಶ್ರುತಿಯು ಇದಕ್ಕೆ ಪ್ರಮಾಣವಾಗಿರುತ್ತದೆ. ಯುಕ್ತಿಯಿಂದೂ ನೋಡಿದರೂ ಆತ್ಮನಲ್ಲಿ ಧರ್ಮಾಧರ್ಮಗಳು ಹೊಂದುವದಿಲ್ಲ.

**ಅಣುವಿಗಿಂತ ಅಣುವಾಗಿಯೂ ಮಹತ್ತಿಗಿಂತ ಮಹತ್ತಾಗಿಯೂ ಇರುವ ಆತ್ಮನು ಈ ಪ್ರಾಣಿಯ ಗುಹೆಯಲ್ಲಿ ಇಡಲ್ಪಟ್ಟಿರುವನು. ಸಂಕಲ್ಪವಿಲ್ಲದಾತನು ಆತನನ್ನು ಕಂಡುಕೊಳ್ಳುವನು. ಅವನ ಧಾತುಗಳು ಪ್ರಸನ್ನವಾಗಿರುವದರಿಂದ ಆತ್ಮನ ಮಹಿಮೆಯನ್ನು ಕಂಡುಕೊಳ್ಳುವನು, ಶೋಕವಿಲ್ಲದವನಾಗುವನು. ॥ ೨೦ ॥**

ಹಾಗಾದರೆ† ಮತ್ತೆ ಹೇಗೆ ಆತ್ಮನನ್ನು ತಿಳಿದುಕೊಳ್ಳಬೇಕು? ಎಂದು ಹೇಳುತ್ತಾನೆ. ಅಣುವಿಗಿಂತ ಎಂದರೆ, ಸಣ್ಣದಾಗಿರುವ ಸಾಮೆಯ ಕಾಳೆ ಮುಂತಾದವುಗಳಿಗಿಂತ,‡ ಅಣುವಾಗಿರುವನು,§ ಮಹತ್ತಿಗಿಂತ ಎಂದರೆ ದೊಡ್ಡದಾಗಿರುವ ಪರಿಮಾಣದ ಪೃಥಿವಿಯೆ ಮುಂತಾದದ್ದಕ್ಕಿಂತ, ದೊಡ್ಡದಾಗಿರುವನು. ಲೋಕದಲ್ಲಿ ಅಣುವಾಗಲಿ ಮಹತ್ತಾಗಲಿ ಯಾವ ವಸ್ತು ಇದೆಯೋ, ಅದೆಲ್ಲ ಆ ನಿತ್ಯವಾದ ಆತ್ಮನಿಂದಲೇ ಸ್ವರೂಪವುಳ್ಳದ್ದಾಗಿರುವದು; **ಆ ಸ್ವರೂಪವನ್ನು ಬಿಟ್ಟರೆ ತಾನ ಇಲ್ಲದ್ದೇ ಆಗಿಬಿಡುವದು.** ಹೀಗಿರುವದರಿಂದ ಈ ಆತ್ಮನೇ

* ಆತ್ಮನು ಧರ್ಮಾಧರ್ಮಾದಿಗಳನ್ನು ಮಾಡುವದಕ್ಕೆ ಶರೀರಾದಿಗಳಿರಬೇಕು, ಶರೀರಾದಿಗಳೂ ಧರ್ಮಾಧರ್ಮಾದಿಗಳ ಕಾರ್ಯವಾಗಿರುವವು, ಶರೀರಾದಿಸಂಬಂಧವಿಲ್ಲದ ಶರೀರಾದಿಗಳಿಗಿಂತ ಭಿನ್ನನಾಗಿರುವ ಆತ್ಮನೇ ನಾನೆಂಬ ಜ್ಞಾನಿಗೆ ಧರ್ಮಾದಿಗಳು ಯುಕ್ತಿಯಿಂದಲೂ ಹೊಂದುವದಿಲ್ಲ. ದರ್ಮಾಧರ್ಮಗಳು ಇಲ್ಲದ ಸ್ವರೂಪವು ಆತ್ಮನಿಗೆ ಇದೆಯೆ? ಎಂದು ನಚಿಕೇತನು ಕೇಳಿದ್ದನಷ್ಟೆ. ಅದಕ್ಕೆ ಈ ಮಂತ್ರದಿಂದ ಉತ್ತರವನ್ನು ಹೇಳಿದಂತಾಯಿತು. ಆತ್ಮನಿಗೆ ಮರಣವೇ ಇಲ್ಲವೆಂದು ಹೇಳಿದ್ದರಿಂದ ಸತ್ತ ಮೇಲೆ ಇರುತ್ತಾನೊ ಇಲ್ಲವೊ? (೧-೧-೨೦) ಎಂದು ಕೇಳಿದ್ದ ಪ್ರಶ್ನೆಗೂ ಉತ್ತರವನ್ನು ಹೇಳಿದಂತಾಯಿತು. ಜನ್ಮಾದಿಸರ್ವವಿಕಾರಗಳೂ ಇಲ್ಲದ ನಿತ್ಯಸ್ವರೂಪವೇ ಆತ್ಮನದೆಂಬುದು ಮಂತ್ರದ ಒಟ್ಟು ಅಭಿಪ್ರಾಯವು. ಯಾವದರ ಅಜ್ಞಾನದಿಂದ ಪ್ರವೃತ್ತಿಯಾಗಿರುವದೋ ಅದರ ಜ್ಞಾನವಾದ ಮೇಲೆ ಪ್ರವೃತ್ತಿ ಹೇಗೆ ಆದೀತು? ಅದರಂತೆ ಆತ್ಮಜ್ಞಾನಿಗೆ ಧರ್ಮಾಧರ್ಮಗಳ ಪ್ರವೃತ್ತಿಯುಂಟಾಗಲಾರದೆಂಬುವ ನ್ಯಾಯ—ಎಂದು (ಆ||) ವ್ಯಾಖ್ಯಾನಕಾರರು ಬರೆದಿರುತ್ತಾರೆ, ಆದರ ಪ್ರವೃತ್ತಿಯುಂಟಾಗುವದಿಲ್ಲವೆನ್ನುವದಕ್ಕಿಂತಲೂ ಪ್ರವೃತ್ತಿಯ ಸಂಬಂಧವೇ ಆತ್ಮನಿಗಿಲ್ಲವೆಂದು ಹೇಳುವದು ಪ್ರಕೃತಕ್ಕೆ ಹೆಚ್ಚು ಒಪ್ಪುತ್ತದೆ ಎಂದು ತೋರುತ್ತದೆ

† ಆತ್ಮನಲ್ಲಿ ಯಾವ ವಿಕಾರವಾಗಲಿ ಇರುವದೆಂದು ತಿಳಿಯುವದು ಸರಿಯಲ್ಲವಾದರೆ

‡ ಛಾಂದೋಗ್ಯ(೩-೧೪-೩)ಶ್ರುತಿಯ ಸೂಚನೆ

§ ಆತ್ಮನನ್ನು ಅಣು, ಮಹತ್ತು ಎಂದು ಕರೆದಿರುವದು ಗಾತ್ರದ ದೃಷ್ಟಿಯಿಂದಲ್ಲ, ಅತೀಂದ್ರಿಯನಾದ್ದರಿಂದ ಅಣು, ಸರ್ವವ್ಯಾಪಕನಾದ್ದರಿಂದ ಮಹತ್ತು

ಅಣುವಿಗಿಂತ ಅಣುವಾಗಿಯೂ ಮಹತ್ತಿಗಿಂತ ಮಹತ್ತಾಗಿಯೂ ಇರುವನು; ಏಕೆಂದರೆ ನಾಮರೂಪವುಳ್ಳ ಎಲ್ಲಾ ವಸ್ತುಗಳೂ* ಇವನಿಗೆ ಉಪಾಧಿಯಾಗಿರುತ್ತವೆ. †

ಈ ಆತ್ಮನು ಈ ಜಂತುವಿನ ಎಂದರೆ ಬ್ರಹ್ಮನೇ ಮೊದಲಾಗಿ ಸ್ತಂಬದವರೆಗೂ‡ ಇರುವ (ಎಲ್ಲಾ) ಪ್ರಾಣಿಗಳ ಗುಹೆಯಲ್ಲಿಯೂ ಎಂದರೆ ಹೃದಯದಲ್ಲಿಯೂ ಇಡಲ್ಪಟ್ಟಿರುವನು; ಅಂದರೆ (ಎಲ್ಲರ ಹೃದಯದಲ್ಲಿಯೂ ಅವರ) ಆತ್ಮವಾಗಿ ಇರುತ್ತಿರುವನು. ನೋಡುವದು, ಕೇಳುವದು, ಯೋಚಿಸುವದು, ಅರಿಯುವದು- ಎಂಬ ಗುರುತುಗಳುಳ್ಳ § ಈ ಆತ್ಮನನ್ನು, ಸಂಕಲ್ಪವಿಲ್ಲದಾತನು ಎಂದರೆ (ಯಾವ) ಕಾಮವೂ ಇಲ್ಲದೆ ಕಂಡಿರುವ (ಈ ಲೋಕದ ವಿಷಯಗಳಲ್ಲಿಯೂ) ಕಾಣದೆ ಇರುವ (ಪರಲೋಕದ) ವಿಷಯಗಳಲ್ಲಿಯೂ ಬೇಸರಹೊಂದಿದ ಮನಸ್ಸುಳ್ಳವನು, (ಕಂಡುಕೊಳ್ಳುವನು) ಎಂದರ್ಥ.

ಯಾವಾಗ ಹೀಗೆ (ಆತ್ಮನನ್ನು ಕಾಣುವನೋ) ಆಗ ಧಾತುಗಳು– ಶರೀರವನ್ನು ಧರಿಸಿರುವದರಿಂದ ಮನಸ್ಸು ಮುಂತಾದ ಕರಣಗಳು **ಧಾತು**ಗಳೆನಿಸುವವು. ಈ ಧಾತುಗಳು– ಪ್ರಸನ್ನವಾಗುವವು. ಈ ಧಾತುಗಳ ಪ್ರಸನ್ನತೆಯಿಂದ, ಕರ್ಮದಿಂದ ವೃದ್ಧಿಯಾಗಲಿ ಕ್ಷಯವಾಗಲಿ ಆತ್ಮನಿಗೆ ಆಗುವದಿಲ್ಲವೆಂಬ ||

* ಇಲ್ಲಿ ವಸ್ತು ಎಂದರೆ ಕರ್ಮವೆಂದು ಅರ್ಥಮಾಡಬೇಕಾಗಿ (ಗೋ||) ವ್ಯಾಖ್ಯಾನಕಾರರು ಹೇಳುತ್ತಾರೆ. ಆದರೆ ಇದು ಅವಶ್ಯವಿಲ್ಲ ರೂಪವೆಂಬ ಮಾತಿನಲ್ಲೇ ಕರ್ಮವನ್ನೂ ಅಡಕಮಾಡಬಹುದಾಗಿದೆ ಹೀಗೆ ಅಡಕಮಾಡುವದು ಭಾಷ್ಯದ ಶೈಲಿಯೂ ಆಗಿರುತ್ತದೆ

† ಅಣು, ಮಹತ್ತು- ಮುಂತಾದ ರೂಪದಲ್ಲಿ ತೋರುವ ವಸ್ತುಗಳೆಲ್ಲ ನಿಜವಾಗಿ ಆತ್ಮನೇ, ಆತ್ಮನನ್ನು ಬಿಟ್ಟರೆ ನಾಮರೂಪಗಳು ಬೇರೆ ಇರುವದೇ ಇಲ್ಲ ಅಣು, ಮಹತ್ತು- ಇವೆಲ್ಲದರ ರೂಪದಲ್ಲಿಯೂ ಇದ್ದು ಈ ರೂಪಕ್ಕಿಂತ ಬೇರೆಯಾಗಿಯೂ ಇವುಗಳಿಗೆ ಆಧಾರವಾಗಿಯೂ ಇರಬಲ್ಲ ಆತ್ಮನು ಅಣುವಿಗಿಂತ ಅಣು, ಮಹತ್ತಿಗಿಂತ ಮಹತ್ತು ಎಂದು ಹೇಳಬಹುದಾಗಿದೆ

‡ ಸ್ತಂಬವೆಂದರೆ ಒಂದು ಬಗೆಯ ಹುಲ್ಲು, ಸ್ಥಾವರಪ್ರಾಣಿಗಳಲ್ಲಿ ತೀರ ಕಡಿಮೆಯ ತರದ ಪ್ರಾಣಿಯವರೆಗೂ ಎಂದರ್ಥ

§ ಗುರುತುಗಳೆಂದರೆ ಶ್ರವಣಮನನನಿದಿಧ್ಯಾಸನಗಳೆಂಬ ಸಾಧನಗಳೆಂದು (ಗೋ||) ವ್ಯಾಖ್ಯಾನದಲ್ಲಿದೆ ಆದರೆ ಇಲ್ಲಿ ವ್ಯಾಖ್ಯಾನಮಾಡಿರುವದೇ ಸರಿ ಎಂಬುದು ಐತರೇಯಭಾಷ್ಯ, ಬೃಹದಾರಣ್ಯಕಭಾಷ್ಯ, ಉಪದೇಶಸಾಹಸ್ರೀ- ಮುಂತಾದ ಗ್ರಂಥಗಳಿಂದ ಗೊತ್ತಾಗುತ್ತದೆ

|| ೧೯ನೆಯ ಮಂತ್ರದಲ್ಲಿ ಧರ್ಮಾಧರ್ಮಗಳು ಆತ್ಮನಿಗೆ ಇಲ್ಲವೆಂದು ಹೇಳಿತ್ತಷ್ಟೆ ಧರ್ಮಾಧರ್ಮಗಳಿಂದ ಆತ್ಮನಲ್ಲಿ ಯಾವ ವಿಕಾರವೂ ಆಗುವದಿಲ್ಲ– ಎಂಬ ಈ ಮಾತು ಕರಣಗಳು ವಿಷಯದಲ್ಲಿಯೇ ಎರಗುತ್ತಿರುವ ಕಾಮಿಗೆ ತಿಳಿಯುವದಿಲ್ಲ ಇಂದ್ರಿಯಗಳನ್ನು ನಿಗ್ರಹಿಸಿದಾತನಿಗೆ ಮನಸ್ಸು ನಿರ್ಮಲವಾಗಿ ಈ ತತ್ತ್ವವು ತಿಳಿಯುವದು.

ಆತ್ಮನ ಮಹಿಮೆಯನ್ನು* ಕಂಡುಕೊಳ್ಳುವನು, ಇವನೇ ನಾನೆಂದು ನೇರಾಗಿ ತಿಳಿದುಕೊಳ್ಳುವನು. ಆಮೇಲೆ ಶೋಕವಿಲ್ಲದವನಾಗುವನು.

**ಕೂತುಕೊಂಡು ದೂರ ಹೋಗುತ್ತಿರುವನು; ಮಲಗಿಕೊಂಡು ಎಲ್ಲಾ ಕಡೆಯಲ್ಲಿಯೂ ಹೋಗಿರುವನು. ಮದಾಮದಸ್ವರೂಪನಾದ ಆ ದೇವನನ್ನು ನನಗಿಂತ ಬೇರೆ ಯಾವನು ತಿಳಿದಾನು? ॥ ೨೧ ॥**

ಹಾಗಿಲ್ಲದಿದ್ದರೆ ಕಾಮಿಗಳಾದ ಸಾಮಾನ್ಯಜನರಿಗೆ ಆ ಆತ್ಮನನ್ನು ತಿಳಿಯುವದು ಕಷ್ಟ. ಏಕೆಂದರೆ, (ಈತನು) ಕೂತುಕೊಂಡು ಅಲ್ಲಾಡದೆ ಇದ್ದಲ್ಲಿಯೇ ಇದ್ದುಕೊಂಡು, ದೂರ ಹೋಗುತ್ತಿರುವನು; ಮಲಗಿಕೊಂಡು ಎಲ್ಲಾ ಕಡೆಯಲ್ಲಿಯೂ ಹೋಗಿರುವನು. ಹೀಗೆ ಈ ಆತ್ಮನೆಂಬ ದೇವನು ಮದಾಮದ ಸ್ವರೂಪನು ಎಂದರೆ ಸಂತೋಷದಿಂದಲೂ ಕೂಡಿರುವನು, ಸಂತೋಷದಿಂದ ಕೂಡದೆಯೂ ಇರುವನು- ಎಂದರೆ ವಿರುದ್ಧಧರ್ಮಗಳಿಂದ ಕೂಡಿರುವನು. ಆದ್ದರಿಂದ ತಿಳಿಯಲಶಕ್ಯನಾಗಿರುವದರಿಂದ ಅಂಥ ಮದಾಮದಸ್ವರೂಪನಾದ ಆ ದೇವನನ್ನು ನನ್ನನ್ನು ಬಿಟ್ಟು ಇನ್ನು ಯಾರು ತಿಳಿದಾನು? ನನ್ನಂಥ ಸೂಕ್ಷ್ಮಬುದ್ಧಿಯುಳ್ಳ ಜ್ಞಾನಿಗೇ ಈ ಆತ್ಮನು ಸುಲಭವಾಗಿ ತಿಳಿಯುವದಕ್ಕೆ ಆಗುವನು. ನಿಂತಿರುವದು ಆದರೂ (ಆಗಲೆ) ಓಡಾಡುತ್ತಿರುವದು, ನಿತ್ಯವಾಗಿರುವದು ಆದರೂ ಅನಿತ್ಯವಾಗಿರುವದು- ಇವೇ ಮುಂತಾದ ಪರಸ್ಪರವಿರುದ್ಧವಾದ ಅನೇಕ ಧರ್ಮಗಳು ಇವನಿಗೆ ಉಪಾಧಿಯಾಗಿರುವದರಿಂದ ಇವನು ವಿರುದ್ಧಧರ್ಮವುಳ್ಳವನಾಗಿ ಚಿಂತಾಮಣಿಯ† ಹಾಗೆ ಎಲ್ಲಾ ರೂಪಗಳನ್ನೂ ಉಳ್ಳವನೋ ಎಂಬಂತೆ ತೋರುತ್ತಿರುವನು. ಆದ್ದರಿಂದ ಇವನನ್ನು ತಿಳಿಯುವದು (ಅಜ್ಞಾನಿಗಳಿಗೆ ಬಲು) ಕಷ್ಟ- (ಎಂದು) ತಿಳಿಸುವದಕ್ಕೆ 'ನನ್ನನ್ನು ಬಿಟ್ಟು ಬೇರೆ ಯಾವನು ತಿಳಿದಾನು?' ಎಂದು ಹೇಳುತ್ತಾನೆ.

ಕರಣಗಳು ಉಪಶಾಂತಿಯಾಗುವದೇ ಶಯನವು. ಕರಣಗಳಿಂದ ಉಂಟಾಗುವ ಒಂದಂಶದ ವಿಜ್ಞಾನವು ಮಲಗಿದಾತನಿಗೆ ಹೋಗಿಬಿಡುತ್ತದೆ; ಹೀಗೆ (ವಿಶೇಷಜ್ಞಾನವು ಹೋಗಿ)ರುವಾಗ (ಆತ್ಮನು) ಬರಿಯ ಸಾಮಾನ್ಯವಿಜ್ಞಾನವೇ‡ ಆಗಿರುವನು. ಆದ್ದರಿಂದ ಇವನು ಎಲ್ಲಾ ಕಡೆಯಲ್ಲಿಯೂ ಹೋಗಿರುವಂತಿರುವನು. ವಿಶೇಷಜ್ಞಾನಗಳಲ್ಲಿರುವಾಗ (ಆತ್ಮನು) ತನ್ನ ರೂಪದಲ್ಲಿ ಇದ್ದುಕೊಂಡೇ

---

* ಬೃಹದಾರಣ್ಯಕ(೪-೪-೨೩)ದ ಸೂಚನೆ.

† (ಆ॥) ವ್ಯಾಖ್ಯಾನಕಾರರು ವಿಶ್ವರೂಪ ಎಂಬುದೂ ಒಂದು ರತ್ನವೆಂದು ಹೇಳುತ್ತಾರೆ: ಆದರೆ ಪ್ರಕರಣವನ್ನು ನೋಡಿದರೆ ಈ ಮಾತು ಆತ್ಮನಿಗೆ ಸೇರಿದ ವಿಶೇಷಣವೆಂದೇ ತೋರುತ್ತದೆ.

‡ ಮನೆ, ಬಾಗಿಲು- ಎಂದು ಬೇರೆ ಬೇರೆ ಆಗುವ ಜ್ಞಾನವು ಒಂದು ಅಂಶದ ವಿಶೇಷಜ್ಞಾನ; ಅನುಭವರೂಪವಾಗಿ ಮಾತ್ರ ಇರುವ ಜ್ಞಾನವು ಸಾಮಾನ್ಯಜ್ಞಾನ.

ಇದ್ದರೂ ಮನಸ್ಸೇ ಮುಂತಾದವುಗಳು ಇವನಿಗೆ ಉಪಾಧಿಯಾಗಿರುವದರಿಂದ ಅವು ಅಲ್ಲಾಡುವಾಗ ತಾನೂ ದೂರ ಹೋಗುವಂತಿರುವನು *; ಆದರೆ ಅವನು (ನಿಜವಾಗಿ) ಇಲ್ಲಿಯೇ ಇರುವನು.

**ಅವಸ್ಥಿತಿಯಿಲ್ಲದ ಶರೀರಗಳಲ್ಲಿ ಅಶರೀರನಾಗಿ ಅವಸ್ಥಿತನಾಗಿರುವವನಾಗಿಯೂ ದೊಡ್ಡವನಾಗಿಯೂ ವಿಭುವಾಗಿಯೂ ಇರುವ ಆತ್ಮನನ್ನು ತಿಳಿದುಕೊಂಡರೆ ಧೀರನು ಶೋಕಿಸದೆ ಇರುವನು. || ೨೨ ||**

ಮತ್ತು ಆ (ಆತ್ಮನನ್ನು) ಅರಿಯುವುದರಿಂದ ಶೋಕವನ್ನು ದಾಟಬಹುದು ಎಂಬುದನ್ನೂ † ತೋರಿಸುತ್ತಾನೆ. ತನ್ನ ರೂಪದಿಂದ ಆಕಾಶದಂತೆ ಇರುವ (ಈ) ಆತ್ಮನು ಶರೀರವಿಲ್ಲದವನಾಗಿರುವನು; ‡ ಹೀಗೆ ಅಶರೀರನಾಗಿ ದೇವತೆಗಳು, ಪಿತೃಗಳು, ಮನುಷ್ಯರು- ಮುಂತಾದವರ ಅವಸ್ಥಿತಿಯಿಲ್ಲದ ಅನಿತ್ಯವಾದ ಶರೀರಗಳಲ್ಲಿ (ತಾನು) ಅವಸ್ಥಿತನಾಗಿರುವವನಾಗಿಯೂ ಎಂದರೆ ನಿತ್ಯನಾಗಿ § ಯಾವ ವಿಕಾರವೂ ಇಲ್ಲದೆ ಇರುವವನಾಗಿಯೂ ಎಂದರ್ಥ; ದೊಡ್ಡವನಾಗಿಯೂ, ದೊಡ್ಡದಾಗಿರುವದೆಂಬುದು ಮತ್ತೊಂದಕ್ಕೆ ಹೋಲಿಸಿ ಹೇಳಿದ್ದೆಂದು || ತಿಳಿದಾರೆಂದು 'ವಿಭುವಾಗಿಯೂ' ಎಂದರೆ ವ್ಯಾಪಿಸಿರುವವನಾಗಿಯೂ ಎಂಬ ಮುಂದಿನ ವಿಶೇಷಣವನ್ನು ಹೇಳಿರುತ್ತದೆ. (ಹೀಗೆ ಇರುವ) ಆತ್ಮನನ್ನು– ಇಲ್ಲಿ 'ಆತ್ಮನನ್ನು, ಎಂದು ಹೇಳಿರುವದು ತನಗಿಂತ ಬೇರೆಯಲ್ಲ ಎಂದು ತಿಳಿಸುವದಕ್ಕೆ. ಆತ್ಮಶಬ್ದಕ್ಕೆ ನಮ್ಮ ಒಳಗಿರುವ ಆತ್ಮ ಎಂಬ

---

* ಕನಸಿನಲ್ಲಿ, ಎಚ್ಚರದಲ್ಲಿ.

† ೨೦ನೆಯ ಮಂತ್ರದಲ್ಲಿ 'ಅಕ್ರತುಃ ಪಶ್ಯತಿ' ಅಕಾಮನು ಮಾತ್ರ ಕಾಣುತ್ತಾನೆ, 'ವೀತಶೋಕಃ' ಆತ್ಮನನ್ನು ತಿಳಿದವನು ಶೋಕವಿಲ್ಲದವನಾಗುತ್ತಾನೆ– ಎಂದು ಎರಡು ವಿಷಯಗಳನ್ನು ಹೇಳಿತ್ತು. ಮೊದಲನೆಯದನ್ನು ಹಿಂದಿನ ಮಂತ್ರದಲ್ಲಿ ವಿವರಿಸಿದ್ದಾಯಿತು, ಈಗ ಎರಡನೆಯ ವಿಚಾರವನ್ನು ವಿವರಿಸುತ್ತಾನೆ– ಎಂದು ಭಾವ

‡ ಪರಮಾರ್ಥದೃಷ್ಟಿಯಿಂದ ನೋಡಿದರೆ ಆತ್ಮನಿಗೆ ಶರೀರವೇ ಇಲ್ಲ. ಏಕೆಂದರೆ ಶರೀರವು ಅಳತೆಗೆ ಸಿಕ್ಕುಬೀಳುವ ವಸ್ತುವಿಗೆ ಮಾತ್ರ ಇರುವದಕ್ಕೆ ಸಾಧ್ಯ.

§ ಆತ್ಮನಲ್ಲಿ ದೇವಶರೀರದಿಂದ ಆಗುವ ಹೆಚ್ಚಿಗೆಯಾಗಲಿ ಮನುಷ್ಯಶರೀರದಿಂದ ಆಗುವ ಕಡಿಮೆಯಾಗಲಿ ಇರುವದಿಲ್ಲ, ಈ ಶರೀರಗಳಿಗೆ ಅಂಟುವ ವಿಕಾರಗಳು ಯಾವವೂ (ನಿಜವಾಗಿ) ಅವನಲ್ಲಿರುವದಿಲ್ಲ. ಏಕೆಂದರೆ ಅವನು ಎಲ್ಲಾ ವಿಕಾರಗಳಿಗೂ ಸಾಕ್ಷಿಯಾಗಿರುವನು.

|| ಎರಡು ವಸ್ತುಗಳಲ್ಲಿ ಒಂದು ಇನ್ನೊಂದಕ್ಕಿಂತ ದೊಡ್ಡದಾಗಿದ್ದರೂ ಅದಕ್ಕಿಂತ ದೊಡ್ಡ ಮೂರನೆಯ ವಸ್ತುವಿರಬಹುದು; ಆತ್ಮನು ಹಾಗಲ್ಲ, ಎಲ್ಲವನ್ನೂ ವ್ಯಾಪಿಸಿರುವದರಿಂದ ಎಲ್ಲಕ್ಕೂ ದೊಡ್ಡವನು.

ಅರ್ಥವೇ ಮುಖ್ಯಾರ್ಥವು.* ಇಂಥ ಆತ್ಮನನ್ನು– ನಾನೇ ಇವನೆಂದು ತಿಳಿದು ಕೊಂಡ ಧೀರನು ಎಂದರೆ ಪಂಡಿತನು ಶೋಕಿಸದೆ ಇರುವನು; ಏಕೆಂದರೆ ಹೀಗಿರುವಾಗ ಆತ್ಮಜ್ಞಾನಿಗೆ ಶೋಕವು ಉಂಟಾಗಲಾರದು.†

## ಆತ್ಮಜ್ಞಾನಕ್ಕೆ ಸಾಧನ

**ಈ ಆತ್ಮನು ಪ್ರವಚನಕ್ಕೆ ಸಿಕ್ಕುವನಲ್ಲ; ಮೇಧಾಶಕ್ತಿಗೆ (ಸಿಕ್ಕು ವನಲ್ಲ,) ಬಹಳ ಶ್ರವಣಕ್ಕೂ ಸಿಕ್ಕುವನಲ್ಲ. ಯಾವ (ಪರಮಾತ್ಮ) ನನ್ನೇ ಈತನು ಬೇಕೆನ್ನುತ್ತಿರುವನೋ ಅಂಥವನಿಗೆ ಲಭ್ಯನಾಗಿರುವನು. ಅವನಿಗೆ ಈ ಆತ್ಮನು ತನ್ನ ಶರೀರವನ್ನು ಬಿಚ್ಚಿ ತೋರಿಸುವನು. ॥೨೩॥**

ಈ ಆತ್ಮನನ್ನು ತಿಳಿಯುವದು ಕಷ್ಟವಾಗಿದ್ದಾಗ್ಯೂ (ಸರಿಯಾದ) ಸಾಧನ ದಿಂದ ಇವನನ್ನು ಸುಲಭವಾಗಿ ತಿಳಿಯಲೇಬಹುದು ಎಂದು ಈಗ ಹೇಳು ತ್ತಾನೆ. ಈ ಆತ್ಮನು ಪ್ರವಚನಕ್ಕೆ ಎಂದರೆ ಅನೇಕವೇದಗಳನ್ನು ಕಲಿತುಕೊಂಡ (ಮಾತ್ರ)ಕ್ಕೆ ಸಿಕ್ಕುವನಲ್ಲ, ಎಂದರೆ ತಿಳಿಯುವನಲ್ಲ; ಮೇಧಾಶಕ್ತಿಗೂ ಎಂದರೆ ಗ್ರಂಥಗಳ ಅರ್ಥವನ್ನು ನೆನಪಿನಲ್ಲಿಡುವ ಶಕ್ತಿಗೂ (ಸಿಕ್ಕುವವನಲ್ಲ), ಸುಮ್ಮನೆ‡ ಬಹಳ ಶ್ರವಣಮಾಡಿದ ಮಾತ್ರದಿಂದಲೂ (ಸಿಕ್ಕುವವನಲ್ಲ).

ಹಾಗಾದರೆ ಏತಕ್ಕೆ ಸಿಕ್ಕುವನು? ಎಂದರೆ ಹೇಳುತ್ತೇನೆ. ಯಾವ ತನ್ನ ಆತ್ಮನನ್ನೇ ಈ ಸಾಧಕನು ಬೇಕೆಂದು ಇಚ್ಛಿಸುತ್ತಿರುವನೋ ಅಂಥ ಇಚ್ಛಿ ಸುತ್ತಿರುವ ತನ್ನಿಂದಲೇ (ತನ್ನ) ಆತ್ಮನು ತಾನೇ ಲಭ್ಯನಾಗುವನು, ಎಂದರೆ ತಿಳಿಯುವದಕ್ಕಾಗುವನು ಎಂದರ್ಥ. ನಿಷ್ಕಾಮನಾಗಿ (ತನ್ನ) ಆತ್ಮನೇ ಬೇಕೆನ್ನು

---

* ಆತ್ಮ ಎಂಬುದಕ್ಕೆ ತಾನು ಎಂಬುದೇ ಮುಖ್ಯಾರ್ಥವಾದ್ದರಿಂದ ತನ್ನ ಸ್ವರೂಪವೇ ಬ್ರಹ್ಮ ವೆಂದು ತಿಳಿಯಬೇಕೆಂಬುದು ಶ್ರುತಿಯ ತಾತ್ಪರ್ಯ. ಆತ್ಮ ಎಂಬ ಮಾತನ್ನು ಒಳಗಿನ ಸ್ವರೂಪಕ್ಕೆ ರೂಢಿಯಾಗಿ ಉಪಯೋಗಿಸುತ್ತಾರೆಯೇ ಹೊರತು ತನಗಿಂತ ಬೇರೆಯಾದ ವಸ್ತುವು ತನ್ನ ಆತ್ಮ ವೆಂದು ಯಾರೂ ಹೇಳುವದಿಲ್ಲ. ಆದ್ದರಿಂದ ಜೀವನಿಗಿಂತ ಬೇರೆಯಾಗಿ ಈಶ್ವರನೆಂಬ ಆತ್ಮನು ಇದ್ದಾ ನೆಂದು ತಾರ್ಕಿಕರೇ ಮುಂತಾದವರು ಹೇಳುವದು ಲೋಕರೂಢಿಗೂ ಶ್ರುತಿಗೂ ವಿರುದ್ಧವೆಂದು ಭಾವ

† ಏಕೆಂದರೆ ಶರೀರವಿಲ್ಲದ ಸರ್ವವ್ಯಾಪಿಯಾದ ನಿರ್ವಿಕಾರನಾದ ತನಗೆ ದುಃಖವಿಲ್ಲವೇ ಇಲ್ಲ ವೆಂಬುದು ಅವನ ಅನುಭವವಾಗಿರುವದು.

‡ ಆತ್ಮವನ್ನು ತಿಳಿಸಿಕೊಡುವ ಉಪನಿಷತ್ತುಗಳನ್ನು ಬಿಟ್ಟು ಮಿಕ್ಕ ಶಾಸ್ತ್ರಗಳನ್ನು ಶ್ರವಣ ಮಾಡಿದರೂ ಅಥವಾ ಜ್ಞಾನಿಯಾದ ಗುರುವಿನ ಉಪದೇಶವಿಲ್ಲದೆ ಬರಿಯ ಉಪನಿಷತ್ತನ್ನು ಶ್ರವಣ ಮಾಡಿದರೂ ಆತ್ಮಜ್ಞಾನವಾಗುವದಿಲ್ಲ- ಎಂದು ವ್ಯಾಖ್ಯಾನಕಾರರು ಬರೆದಿದಾರೆ. ಮನನನಿಧಿಧ್ಯಾಸನ ಗಳಿಲ್ಲದೆ ಸುಮ್ಮನೆ ಕಿವಿಗೆ ಹಾಕಿಕೊಂಡ ಉಪನಿಷತ್ತಿನಿಂದ ಆತ್ಮಜ್ಞಾನವಾಗಲಾರದು ಎಂದು ಸರಳವಾಗಿ ಅರ್ಥವಾಗುತ್ತದೆ.

ವವನಿಗೆ ತನ್ನಿಂದಲೇ* ತಾನು ಅರಿಯಲ್ಪಡುವನು ಎಂದು ಅಭಿಪ್ರಾಯ. ಹೇಗೆ ಲಭ್ಯನಾಗುವನು ? ಎಂದರೆ ಹೇಳುತ್ತೇನೆ. ಆವನಿಗೆ ಎಂದರೆ ಆತ್ಮನೇ ಬೇಕೆನ್ನುವಾತನಿಗೆ ಈ ಆತ್ಮನು ತನ್ನ ಪಾರಮಾರ್ಥಿಕವಾದ ಶರೀರವನ್ನು ಬಿಚ್ಚಿ ತೋರಿಸುವನು, ಎಂದರೆ ನಿಜವಾದ ಸ್ವರೂಪವನ್ನು† ತೋರಿಸುವನು ಎಂದರ್ಥ.

**ದುರಾಚಾರವನ್ನು ಕೈಬಿಡದವನು, ಶಾಂತಿಯಿಲ್ಲದವನು, ಸಮಾಧಾನವಿಲ್ಲದವನು, ಮನಃಶಾಂತಿಯಿಲ್ಲದವನು– (ಇವರು) ಯಾರೂ ಪ್ರಜ್ಞಾನದಿಂದ ಈತನನ್ನು ಪಡೆಯುವದಕ್ಕಾಗಲಾರದು. ॥ ೨೪ ॥**

ಇದೂ ಅಲ್ಲದೆ ದುರಾಚಾರವನ್ನು ಎಂದರೆ ಶ್ರುತಿಯಲ್ಲಿಯೂ ಸ್ಮೃತಿಯಲ್ಲಿಯೂ ಬೇಡವೆಂದು‡ ಹೇಳಿರುವ ಕರ್ಮಗಳನ್ನು ಬಿಡದೆ ಇರುವವನಾಗಲಿ, ಇಂದ್ರಿಯಗಳಲ್ಲಿ ಲೋಲನಾಗುವದನ್ನು ಬಿಟ್ಟು ಶಾಂತಿಯನ್ನು ಹೊಂದದವನಾಗಲಿ, ಸಮಾಧಾನವಿಲ್ಲದವನಾಗಲಿ ಎಂದರೆ ಒಂದೇ ಕಡೆಗೆ ಮನಸ್ಸಿಡಲಾರದೆ ಚೆಲ್ಲಾಡುವ ಚಿತ್ತವುಳ್ಳವನಾಗಲಿ, ಸಮಾಧಾನವುಳ್ಳ ಚಿತ್ತವಿದ್ದರೂ ಆ ಸಮಾಧಾನದ ಫಲವು (ತನಗೆ) ಬೇಕೆಂದು ಮನಸ್ಸನ್ನು ಕೆಲಸಕ್ಕೆ ಹಚ್ಚಿಕೊಂಡು ಶಾಂತಿಯನ್ನು ಹೊಂದಿಸದೆ ಇರುವವನಾಗಲಿ, ಪ್ರಜ್ಞಾನದಿಂದ ಎಂದರೆ ಬ್ರಹ್ಮವಿಜ್ಞಾನದಿಂದ ಈ ಪ್ರಕೃತನಾದ ಆತ್ಮನನ್ನು ಪಡೆಯಲಾರನು. ಆದರೆ ಯಾರು ದುರಾಚಾರವನ್ನು ಬಿಟ್ಟು, ಇಂದ್ರಿಯಗಳಲ್ಲಿ ಲೋಲನಾಗದೆ, ಚಿತ್ತಸಮಾಧಾನವನ್ನು ಹೊಂದಿ, ಆ ಸಮಾಧಾನದ ಫಲದಲ್ಲಿಯೂ (ಬಯಕೆಯಿಲ್ಲದೆ) § ಮನಃಶಾಂತಿಯನ್ನು ಹೊಂದಿರುವನೋ ಅಂಥವನು ಆಚಾರ್ಯನಿಂದ ಪ್ರಜ್ಞಾನವನ್ನು ಪಡೆಯುವದರಿಂದ ಮೇಲೆ ಹೇಳಿದ ಆತ್ಮನನ್ನು ಪಡೆಯುವನು ಎಂದರ್ಥ.

---

* ಆತ್ಮಲಾಭವು ಸಾಧನದಿಂದ ಆಗತಕ್ಕದ್ದಲ್ಲ, ಅನಾತ್ಮದೃಷ್ಟಿಯನ್ನು ಬಿಟ್ಟರೆ ಸಾಕು, ಆತ್ಮದೃಷ್ಟಿಯು ಸಿದ್ಧವಾಗಿಯೇ ಇರುವದು- ಎಂದು ಭಾವ. ತನ್ನಿಂದಲೇ ತಾನು ಅರಿಯಲ್ಪಡುವನು ಎಂಬ ಮಾತಿನಿಂದ ಆತ್ಮನು ಜ್ಞಾನಕ್ಕೆ ವಿಷಯನಾಗುವನು– ಎಂದು ಅಕ್ಷರಾರ್ಥವನ್ನು ಮಾಡಿಕೊಳ್ಳಬಾರದು. ಬೃಹದಾರಣ್ಯಕ (೪–೪–೨೦) ಭಾಷ್ಯವನ್ನು ನೋಡಿ.

† ಆತ್ಮನು ಅಶರೀರನು, ಆದ್ದರಿಂದ ಅವನ ಶರೀರವೆಂದರೆ ಸ್ವರೂಪವೇ.

‡ ಇದು 'ಅವಿರತಾತ್' ಎಂಬುದರ ಪರಿವರ್ತನೆ. 'ವಿಧಿಸದೆ ಇರುವ' ಎಂದು ಅಕ್ಷರಾರ್ಥವನ್ನು ಹಿಡಿದು ಕನ್ನಡಿಸಿದರೆ ವಿಧಿಸಿರುವ ದುಶ್ಚರಿತಗಳೂ ಉಂಟೆಂದು ಅರ್ಥವಾಗುವದಕ್ಕೆ ಅವಕಾಶವಾಗುವದು. ಆದರೆ ಇದು ಸರಿಯಲ್ಲ; ಏಕೆಂದರೆ ಶ್ಯೇನಯಾಗವೇ ಮುಂತಾದವುಗಳಲ್ಲಿ ಕೂಡ ಶಾಸ್ತ್ರವು ಅಧರ್ಮವನ್ನು ವಿಧಿಸುವದಿಲ್ಲ ಎಂದು ಮೀಮಾಂಸಕರು ನಿರ್ಣಯಿಸಿರುತ್ತಾರೆ. ಜೈಮಿನಿ ಸೂತ್ರ(೧–೧–೨)ದ ಮೇಲೆ ಶಬರಸ್ವಾಮಿಗಳು ಬರೆದಿರುವ ಭಾಷ್ಯದಲ್ಲಿ ಈ ವಿಷಯವನ್ನು ಚರ್ಚಿಸಿರುತ್ತದೆ.

§ ಅದ್ವೈತಪ್ರಕರಣ(೪೩–೪೪)ವನ್ನು ನೋಡಿ.

**ಯಾವಾತನಿಗೆ ಬ್ರಹ್ಮವೂ ಕ್ಷತ್ರವೂ ಎರಡೂ ಊಟವಾಗಿರುವವೋ, ಮೃತ್ಯುವು ಯಾವಾತನಿಗೆ ಉಪ್ಪಿನಕಾಯಿಯಾಗಿರುವನೋ ಆತನು ಎಲ್ಲಿರುತ್ತಾನೋ ಅದನ್ನು ಹೀಗೆ ಯಾವನು ತಾನೆ ಅರಿತುಕೊಂಡಾನು ? ||**

ಆದರೆ ಯಾವಾತನು ಹೀಗೆ ಇರುವದಿಲ್ಲವೋ ಅಂಥ ಪ್ರಾಕೃತಬುದ್ಧಿಯುಳ್ಳ ಮೇಲೆ ಹೇಳಿದಂಥ ಸಾಧನಗಳಿಲ್ಲದ ಯಾವನು ತಾನೆ (ಈ ಆತ್ಮನನ್ನು ಅರಿತುಕೊಂಡಾನು ?) ಧರ್ಮಗಳನ್ನೆಲ್ಲ ಹಿಡಿದು ನಿಲ್ಲಿಸಿಕೊಂಡಿರುವವುಗಳೂ ಎಲ್ಲರನ್ನೂ ಕಾಪಾಡುತ್ತಿರುವವುಗಳೂ ಆಗಿರುವ ಬ್ರಹ್ಮ, ಕ್ಷ್ಣತ್ರ* ಎಂಬೆರಡೂ ಯಾವ ಆತ್ಮನಿಗೆ ಊಟವಾ:ಗಿರುವವೊ† ಎಂದರೆ ಅನ್ನಮಾತ್ರವಾಗಿರುವವೊ, ಸರ್ವವನ್ನೂ ನಾಶಗೊಳಿಸುತ್ತಿರುವ ಮೃತ್ಯುವು ಕೂಡ ಯಾವಾತನಿಗೆ ಉಪ್ಪಿನಕಾಯಿಯೊ‡, ಎಂದರೆ ಊಟಕ್ಕೂ ಕೂಡ ಸಾಲುವಂತಿಲ್ಲವೋ, ಅಂಥ ಆತ್ಮನು ಎಲ್ಲಿರುತ್ತಾನೆಂಬುದನ್ನು– ಹೀಗೆ ಎಂದರೆ ಮೇಲೆ ಹೇಳಿದ ಸಾಧನಗಳುಳ್ಳಾತನಂತೆ (ಸಾಧನರಹಿತನಾದ ಯಾವನು ತಾನೆ) ಅರಿತುಕೊಂಡಾನು ? §

---

# ಒಂದನೆಯ ಅಧ್ಯಾಯ–ಮೂರನೆಯ ವಲ್ಲಿ

## ಸಂಸಾರದ ಗತಿ, ಮೋಕ್ಷದ ಗತಿ

(ತಾವು ಮಾಡಿರುವದರ) "ಋತವನ್ನು ಪಾನಮಾಡುತ್ತಾ" ಎಂದು (ಪ್ರಾರಂಭವಾಗಿರುವ) ಈ (ಮೂರನೆಯ) ವಲ್ಲಿಯ ಸಂಬಂಧವು ಏನೆಂದರೆ: —

---

* ಇದು ಬೃಹದಾರಣ್ಯಕ(೧–೪–೧೧)ದ ಶ್ರುತಿಯ ಸೂಚನೆ.

† ಬ್ರಹ್ಮಕ್ಷತ್ರವು ಇದರ ಆಹಾರವೆಂದರೆ ಇದು ಧರ್ಮಕ್ಕೂ ಮೀರಿರುವ ತತ್ತ್ವವೆಂದರ್ಥ.

‡ ಮೃತ್ಯುವನ್ನೇ ತಿನ್ನುವಾತನು ಎಂಬುದರಿಂದ ಇಲ್ಲಿ ಪರಮಾತ್ಮನೇ ಮಂತ್ರದಲ್ಲಿ ಹೇಳಲ್ಪಟ್ಟಿರುತ್ತಾನೆ- ಎಂದು ಬ್ರಹ್ಮಸೂತ್ರ(೧–೨–೭)ದಲ್ಲಿ ನಿರ್ಣಯಮಾಡಿರುತ್ತದೆ.

§ ಅಧರ್ಮವನ್ನೆ ಬಿಡದವನು ಧರ್ಮಕ್ಕೂ ಆಚೆಯಿರುವ ಆತ್ಮತತ್ತ್ವವನ್ನು ಹೇಗೆ ತಿಳಿದಾನು ? ತನ್ನನ್ನು ಹಿತವನ್ನು ವಿಕಾರಗೊಳಿಸಿ ಮೃತ್ಯುವಿನ ಬಾಯಿಗೊಡ್ಡುವ ಆಚರಣೆಯನ್ನು ಇಟ್ಟುಕೊಂಡಿರುವವನು ಮೃತ್ಯುವಿಗೂ ಮೃತ್ಯುವಾಗಿರುವ ತತ್ತ್ವವನ್ನು ಹೇಗೆ ತಿಳಿದುಕೊಂಡಾನು ? ಎಂದು ಭಾವ.

ವಿದ್ಯೆಯೂ ಅವಿದ್ಯೆಯೂ ಬೇರೆ ಬೇರೆ ವಿರುದ್ಧವಾದ ಫಲವುಳ್ಳವೆಂದು ಹಿಂದೆ ಹೇಳಿರುತ್ತದೆ; ಆದರೆ ಅವುಗಳನ್ನು ಫಲದೊಡನೆ ಇದ್ದದ್ದು ಇದ್ದಂತೆ ನಿರ್ಣಯಮಾಡಿರುವದಿಲ್ಲ. ಅದನ್ನು ನಿರ್ಣಯಮಾಡುವದಕ್ಕಾಗಿ ಈ (ವಲ್ಲಿಯಲ್ಲಿ) ರಥದ ರೂಪಕವನ್ನು ಕಲ್ಪಿಸಿರುತ್ತದೆ. ಇದರಿಂದ (ವಿಷಯವನ್ನು) ತಿಳಿಯುವದಕ್ಕೆ ಅನುಕೂಲವಾಗಿರುವದು. ಇದಕ್ಕಾಗಿಯೇ ಪಡೆಯುವವನು ಪಡೆಯಲ್ಪಡತಕ್ಕವನು, ಹೋಗುವವನು ಅವನು ಎಲ್ಲಿಗೆ ಹೋಗುತ್ತಾನೋ ಅದು- ಎಂಬ (ಎರಡನ್ನೂ) ವಿಂಗಡಿಸಿ ತಿಳಿಸುವದಕ್ಕಾಗಿ ಇಬ್ಬರು* ಆತ್ಮರನ್ನು ಹೇಳುತ್ತಾರೆ.

**ತಾವು ಮಾಡಿರುವದರ ಋತವನ್ನು (ಈ) ಲೋಕದಲ್ಲಿ ಪಾನ ಮಾಡುತ್ತಾ, ಹೆಚ್ಚಿನದಾದ ಪರಾರ್ಧದಲ್ಲಿ ಗುಹೆಯನ್ನು ಹೊಕ್ಕಿರುವ, ನೆರಳುಬಿಸಿಲುಗಳಾದ (ಇಬ್ಬರನ್ನು) ಬ್ರಹ್ಮವಿದರೂ ಪಂಚಾಗ್ನಿಗಳಾದ ತ್ರಿಣಾಚಿಕೇತರೂ ಹೇಳುತ್ತಿರುವರು. ॥ ೧ ॥**

ಋತವೆಂದರೆ ಕರ್ಮಫಲವು; (ಇದು) ಅವಶ್ಯವಾಗಿ ಆಗಿಯೇ† ತೀರುವದರಿಂದ ಸತ್ಯವೆನಿಸಿರುವದು. ಅದನ್ನು ಪಾನಮಾಡುತ್ತಾ– ಇವರಿಬ್ಬರಲ್ಲಿ ಒಬ್ಬನು ಕರ್ಮಫಲವನ್ನು ಪಾನಮಾಡುತ್ತಿರುವನು, ಎಂದರೆ ಅನುಭವಿಸುತ್ತಿರುವನು, ಇನ್ನೊಬ್ಬನು ಅನುಭವಿಸುವದಿಲ್ಲ. ಆದರೂ ಪಾನಮಾಡುವವನ ಸಂಬಂಧದಿಂದ ಛತ್ರಿನ್ಯಾಯದಿಂದ‡ 'ಪಾನಮಾಡುತ್ತಾ' ಎಂದು (ಅವನನ್ನೂ ಸೇರಿಸಿ) ಹೇಳಿರುತ್ತದೆ. (ಮೂಲದಲ್ಲಿ) 'ಸುಕೃತಸ್ಯ' (ಎಂದಿದೆಯಷ್ಟೆ; ಅದಕ್ಕೆ) ತಾನೇ ಮಾಡಿರುವ§ ಎಂದು ಅರ್ಥ. (ಇಂಥ) ಕರ್ಮದ 'ಋತವನ್ನು ಪಾನಮಾಡುತ್ತಾ'' ಎಂದು (ಸುಕೃತಸ್ಯ)§ ಎಂಬ ಮಾತನ್ನು ಹಿಂದಕ್ಕೆ ಸೇರಿಸಿಕೊಳ್ಳಬೇಕು. ಲೋಕದಲ್ಲಿ|| ಎಂದರೆ ಶರೀರದಲ್ಲಿ, ಗುಹೆಯನ್ನು ಹೊಕ್ಕಿರುವ ಎಂದರೆ ಗುಹೆಯಂತಿ

* ನಿಜವಾಗಿ ಇಬ್ಬರು ಆತ್ಮರು ಇಲ್ಲವಾದರೂ ನಾವು ತಿಳಿದುಕೊಂಡಿರುವ ಆತ್ಮಸ್ವರೂಪ, ತಿಳಿದುಕೊಳ್ಳಬೇಕಾದ ಆತ್ಮಸ್ವರೂಪ- ಈ ಎರಡನ್ನೂ ವಿಂಗಡಿಸುವದಕ್ಕಾಗಿ ವಿಭಾಗವನ್ನು ಕಲ್ಪಿಸಿರುತ್ತದೆ ಎಂದು ಭಾವ.

† ಕರ್ಮದ ಫಲವು ಅವಶ್ಯವಾಗಿ ಆಗಿಯೇ ಬಿಡುವದರಿಂದ ವ್ಯವಹಾರದೃಷ್ಟಿಯಿಂದ ಸತ್ಯವ.

‡ ಅನೇಕ ಜನರಿಗೆ ಒಂದೇ ಕೊಡೆ ಇರುವಾಗಲೂ 'ಛತ್ರಿಯವರು (ಕೊಡೆಯವರು) ಹೋಗುತ್ತಿದಾರೆ' ಎಂದು ಹೇಳಬಹುದಷ್ಟೆ? ಅದರಂತೆ ಪಾನಮಾಡುವವರು ಎಂಬಲ್ಲಿ ಒಬ್ಬನು ಪಾನಮಾಡಿದರೂ ಸಾಕು ಇಲ್ಲಿ ಎರಡನೆಯವನು ಪರಮಾತ್ಮನೇ ಎಂಬುದನ್ನು ಬ್ರಹ್ಮಸೂತ್ರದಲ್ಲಿ (೧-೨-೧೧) ನಿರ್ಣಯಿಸಿರುತ್ತದೆ ಮುಂಡಕ(೩-೧-೧)ವನ್ನು ನೋಡಿ.

§ ಸ್ವಕೃತ ಎಂಬರ್ಥದಲ್ಲಿ ವೇದದಲ್ಲಿ ಸುಕೃತ ಎಂದು ಪ್ರಯೋಗಿಸುವದುಂಟು. ತೈತ್ತಿರೀಯ (೨-೭)ವನ್ನು ನೋಡಿ

|| ಲೋಕವೆಂದರೆ ನಾವು ಅನುಭವಿಸುವ ಸುಖದುಃಖಗಳಿಗೆ ಆಶ್ರಯವಾದದ್ದು.

ರುವ* ಬುದ್ಧಿಯನ್ನು ಹೊಕ್ಕಿರುವ, ಹೆಚ್ಚಿನದಾದ ಎಂದರೆ ಹೊರಗಿನ ಶರೀರಾಕಾಶದ ರೂಪಕ್ಕಿಂತ ಹೆಚ್ಚಿನ†, ಪರಾರ್ಧದಲ್ಲಿ‡– ಹೆಚ್ಚಿನ ಬ್ರಹ್ಮದ ಸ್ಥಾನವಾದ್ದರಿಂದ (ಬುದ್ಧಿಯು) ಪರಾರ್ಧವೆನಿಸುವದು. ಅದರಲ್ಲಿಯೇ ಪರಬ್ರಹ್ಮವು ತೋರುವದು§, (ಆದ್ದರಿಂದ ಅದು ಬ್ರಹ್ಮಸ್ಥಾನವು); ಆದ್ದರಿಂದ ಆ ಪರಾರ್ಧದಲ್ಲಿ ಎಂದರೆ– ಹೃದಯವೆಂಬ ಆಕಾಶದಲ್ಲಿ ಹೊಕ್ಕಿರುವ || ಎಂದರ್ಥ. ಮತ್ತು ಸಂಸಾರಿಯಾಗಿರುವವನೊಬ್ಬನು, ಸಂಸಾರಿಯಲ್ಲದವನೊಬ್ಬನು– ಹೀಗೆ ವಿಲಕ್ಷಣಸ್ವರೂಪರಾಗಿರುವದರಿಂದ** ನೆರಳುಬಿಸಿಲುಗಳಂತೆ ಇರುವ ಆ ಇಬ್ಬರು (ಆತ್ಮರನ್ನು) ಬ್ರಹ್ಮಜ್ಞಾನಿಗಳು ಹೇಳುತ್ತಾರೆ, ತಿಳಿಸಿಕೊಡುತ್ತಾರೆ. ಅಕರ್ಮಿಗಳಾದ (ಜ್ಞಾನಿಗಳು) ಮಾತ್ರವೇ ಅಲ್ಲ, ಯಾರು ಮೂರು ಸಲ ನಾಚಿಕೇತಾಗ್ನಿಯನ್ನು ಉಪಾಸನೆಮಾಡಿ ಪಂಚಾಗ್ನಿ ವಿದ್ಯೆಯನ್ನು ಸೇವಿಸುವ †† ಗೃಹಸ್ಥರಾಗಿರುವರೋ (ಅವರೂ ಹೇಳುತ್ತಾರೆ.)

---

* ಶರೀರ, ಇಂದ್ರಿಯ, ಪ್ರಾಣ, ಮನಸ್ಸು, ಬುದ್ಧಿ- ಇವು ಒಂದರೊಳಗೆ ಒಂದಿರುವದರಿಂದ ಎಲ್ಲಕ್ಕೂ ಒಳಗಿನ ಬುದ್ಧಿಯು ಗುಹೆಯಂತಿರುವದು

† ಶರೀರವು ಆಕಾಶದಲ್ಲಿರುವದಷ್ಟೆ, ಅದರೊಳಗೆ ಬುದ್ಧಿಯು ತೋರಿಕೊಳ್ಳುವದರಿಂದಲೂ ಹೊರಗಿನ ಆಕಾಶಕ್ಕಿಂತಲೂ ಸೂಕ್ಷ್ಮವಾಗಿರುವದರಿಂದಲೂ ಬುದ್ಧಿಯು ಹೆಚ್ಚಿನದಾಗಿರುವದು ಆಕಾಶದಂತೆಯೇ ಸರ್ವವ್ಯಾಪಿಯಾಗಿ ಪರಿಚ್ಛೇದವನ್ನರಿಯದೆ ಇರುವದರಿಂದ ಇದನ್ನು 'ಚಿತ್ತಾಕಾಶ' ವೆಂದು ಕರೆಯುತ್ತಾರೆ.

‡ 'ಪರಾರ್ಧ್ಯೇ'– ಎಂದೂ ಶ್ರುತಿಯ ಪಾಠವಿದೆ, ಭಾಷ್ಯದಂತೆ ನೋಡಿದರೆ 'ಪರಾರ್ಧೇ' ಎಂಬುದೇ ಸರಿಯಾದ ಪಾಠವೆಂದು ತೋರುತ್ತದೆ

§ ಬ್ರಹ್ಮವು ಜ್ಞಾನದ ಸ್ವರೂಪವೆಂಬುದು ಬುದ್ಧಿಯನ್ನು ನೋಡುವದರಿಂದ ಮಾತ್ರ ಗೊತ್ತಾಗುವದು. ಆದ್ದರಿಂದ ಬುದ್ಧಿಯನ್ನು ಬ್ರಹ್ಮದ ಸ್ಥಾನವೆಂದು ಕರೆದಿರುತ್ತದೆ- ಎಂದು ಭಾವ.

|| ಬ್ರಹ್ಮವು ಹೃದಯವನ್ನು ಹೊಕ್ಕಿದೆ ಎಂಬುದು ಉಪಚಾರದ ಮಾತು, ಏಕೆಂದರೆ ಬ್ರಹ್ಮವು ಸರ್ವವ್ಯಾಪಿಯಾದ್ದರಿಂದ ಅದು ಹೊಗದೇ ಇರುವ ಸ್ಥಳವೇ ಇರಲಿಲ್ಲ. ನಿರ್ವಿಶೇಷವಾದ ಬ್ರಹ್ಮವು ಸ್ವಚ್ಛವಾದ ಬುದ್ಧಿಯ ಸಂಬಂಧದಿಂದ ಜ್ಞಾತೃವಾಗಿ ಬೆಳಗುವದು, ಎಂಬರ್ಥವನ್ನು ತಿಳಿಸುವದೇ ಪ್ರವೇಶವಾಕ್ಯದ ತಾತ್ಪರ್ಯವೆಂದು ತೈತ್ತಿರೀಯವೇ ಮುಂತಾದ ಉಪನಿಷತ್ತುಗಳ ಭಾಷ್ಯದಲ್ಲಿ ಹೇಳಿರುತ್ತದೆ.

** ಅವಿದ್ಯೆಗೆ ತೋರುವವನು ಜೀವಾತ್ಮ, ವಿದ್ಯೆಗೆ ತೋರುವವನು ಪರಮಾತ್ಮ; ಆದ್ದರಿಂದ ಈ ಇಬ್ಬರಿಗೂ ತುಂಬ ವೈಲಕ್ಷಣ್ಯವಿದೆ.

†† ಗಾರ್ಹಪತ್ಯ, ದಕ್ಷಿಣಾಗ್ನಿ, ಆಹವನೀಯ, ಸಭ್ಯ, ಆವಸಥ್ಯ- ಎಂದೂ ಐದು ಅಗ್ನಿಗಳೆಂದು ವ್ಯಾಖ್ಯಾನಕಾರರು ಹೇಳುತ್ತಾರೆ ಆದರೆ ಅಂತರಿಕ್ಷ, ಪರ್ಜನ್ಯ, ಪೃಥಿವಿ, ಪುರುಷ, ಸ್ತ್ರೀ- ಎಂಬವೇ ಐದು ಅಗ್ನಿಗಳೆಂಬುದು ಛಾಂದೋಗ್ಯದಲ್ಲಿ ಸ್ಪಷ್ಟವಾಗಿರುವದರಿಂದ .ಪಂಚಾಗ್ನಿವಿದ್ಯೆ

**ಯಾವದು ಯಜ್ಞಮಾಡುವವರಿಗೆ ಸೇತುವಾಗಿರುವದೋ (ಅಂಥ) ನಾಚಿಕೇತವನ್ನು (ತಿಳಿಯಲು) ನಾವು ಶಕ್ತರಾಗಿರುವೆವು. (ಯಾವದು) ದಾಟಲು ಇಚ್ಛೆಯುಳ್ಳಂಥವರಿಗೆ ಅಭಯವಾದ ದಡವಾಗಿರುವದೋ ಅಂಥ ಅಕ್ಷರವಾದ ಬ್ರಹ್ಮವನ್ನು ತಿಳಿಯಲು ಶಕ್ತರಾಗಿರುವೆವು. ‖ ೨ ‖**

ಯಾವದು ಯಜ್ಞಮಾಡುವ ಯಜಮಾನರಿಗೆ ಎಂದರೆ ಕರ್ಮಿಗಳಿಗೆ ಸೇತುವಾಗಿ ದುಃಖವನ್ನು ದಾಟುವದಕ್ಕೆ ಸಾಧನವಾಗಿರುವದರಿಂದ ಸೇತುವಿನಂತೆ ಇರುವದೋ ಅಂಥ ನಾಚಿಕೇತವೆಂಬ ಅಗ್ನಿಯನ್ನು * ತಿಳಿದು ಉಪಾಸನೆ ಮಾಡಲು† ನಾವು ಶಕ್ತರಾಗಿರುವೆವು; ಮತ್ತು ಯಾವದು (ಸಂಸಾರವನ್ನು) ದಾಟಬೇಕೆಂಬ ಇಚ್ಛೆಯುಳ್ಳ ಬ್ರಹ್ಮಜ್ಞಾನಿಗಳಿಗೆ ಅಭಯವಾದ ಹೆದರಿಕೆಯಿಲ್ಲದಂಥ ಸಂಸಾರದ ಆಚೆಯ ದಡವಾಗಿರುವದೋ ಉತ್ತಮವಾದ ಆಶ್ರಯವಾಗಿರುವದೋ, ನಾಶವಿಲ್ಲದ ಆತ್ಮವೆಂಬ ಅಂಥ ಬ್ರಹ್ಮವನ್ನು ತಿಳಿಯುವದಕ್ಕೂ ಶಕ್ತರಾಗಿರುವೆವು.

ಕರ್ಮಿಗಳಿಗೂ ಜ್ಞಾನಿಗಳಿಗೂ ಆಶ್ರಯವಾಗಿರುವ ಪರ ಮತ್ತು ಅಪರ-ಎಂಬ **ಎರಡು ಬ್ರಹ್ಮ**ಗಳನ್ನೂ ತಿಳಿದುಕೊಳ್ಳಬೇಕು ಎಂಬುದು ವಾಕ್ಯದ ಒಟ್ಟು ಅರ್ಥವು. ಇವೆರಡನ್ನೇ ‡ 'ಋತವನ್ನು ಪಾನಮಾಡುತ್ತಾ' ಎಂಬ (೧ನೆಯ) ಮಂತ್ರದಲ್ಲಿ ಸೂಚಿಸಿತ್ತು.

**ಆತ್ಮನನ್ನು ರಥಿಯೆಂದು ತಿಳಿ, ಶರೀರವನ್ನು ರಥವೆಂದು (ತಿಳಿ); ಬುದ್ಧಿಯನ್ನಾದರೆ ಸಾರಥಿಯೆಂದು ತಿಳಿದುಕೊ, ಮತ್ತು ಮನಸ್ಸನ್ನು ಹಗ್ಗವೆಂದೇ (ತಿಳಿ.) ‖ ೩ ‖**

---

ಯನ್ನು ಉಪಾಸನೆಮಾಡಿರುವ ಗೃಹಸ್ಥರು ಪರಮಾತ್ಮಸ್ವರೂಪವನ್ನು ನಂಬಿ ಉಪಾಸನೆಮಾಡುವರು ಎಂಬುದೇ ಸರಿಯಾದ ಅರ್ಥವೆಂದು ತೋರುತ್ತದೆ. ಈ ಅಭಿಪ್ರಾಯಕ್ಕೂ ವ್ಯಾಖ್ಯಾನಕಾರರ ಸಮ್ಮತಿಯುಂಟು.

* ಕಾರ್ಯಬ್ರಹ್ಮವಾದ ಹಿರಣ್ಯಗರ್ಭವನ್ನು.　　† ಅಪರಬ್ರಹ್ಮವನ್ನು ಸುಮ್ಮನೆ ತಿಳಿದುಕೊಂಡರೆ ಸಾಲದು, ಅದು ಮನಸ್ಸಿಗೆ ಅಳವಡುವಂತೆ ಉಪಾಸನೆಮಾಡಬೇಕು. ಹಾಗೆ ಮಾಡಿದರೆ ಲೋಕಾಂತರದಲ್ಲಿ ಕಾಲಕ್ರಮದಲ್ಲಿ ಮುಕ್ತಿಯಾಗುವದು- ಎಂಬುದು ಶಾಸ್ತ್ರಾರ್ಥ. ಪರಬ್ರಹ್ಮವನ್ನು ತಿಳಿದುಕೊಂಡರೆ ಸಾಕು, ಇಲ್ಲಿಯೇ ಮುಕ್ತಿ.

‡ ಪಂಚಾಗ್ನಿಗಳು ಅಪರಬ್ರಹ್ಮವನ್ನು ಹೊಂದುವರು; ಜ್ಞಾನಿಗಳು ಪರಬ್ರಹ್ಮವನ್ನು ಹೊಂದುವರು. ಇವರಿಬ್ಬರ ವಿಚಾರವನ್ನು ಹಿಂದೆ ಮಂತ್ರದಲ್ಲಿ ಸೂಚಿಸಿತ್ತು ಎಂದರ್ಥ. ಒಂದನೆಯ ಮಂತ್ರದಲ್ಲಿ ಜೀವವನ್ನು ಹೇಳಿದೆಯೇ ಹೊರತು ಅಪರಬ್ರಹ್ಮವನ್ನು ಹೇಳಿಲ್ಲ; ಆದರೂ ಸಂಸಾರಿಯಾದ ಜೀವನಿಗೆ ಆಗುವ ಉತ್ತಮಗತಿಯು ಅಪರಬ್ರಹ್ಮವಾದ್ದರಿಂದ ಅದನ್ನೂ ಸೂಚಿಸಿದೆ ಎಂದು ಭಾವ.

ಇವರಿಬ್ಬರಲ್ಲಿ ಉಪಾಧಿಯಿಂದ ಆಗಿರುವ ಯಾವ ಸಂಸಾರಿ(ಯಾದ ಆತ್ಮನು) ವಿದ್ಯಾವಿದ್ಯೆಗಳೆರಡಕ್ಕೂ (ತಕ್ಕವನಾಗಿ) ಮೋಕ್ಷವನ್ನು ಹೊಂದುವದಕ್ಕೂ ಸಂಸಾರವನ್ನು ಹೊಂದುವದಕ್ಕೂ ತಕ್ಕವನಾಗಿರುವನೋ ಅವನಿಗೆ ಆ ಎರಡನ್ನೂ ಪಡೆಯುವದಕ್ಕೆ ಹೋಗುವ ಸಾಧನವಾದ ರಥವನ್ನು ಕಲ್ಪಿಸುತ್ತಾನೆ.

ಅವರಿಬ್ಬರಲ್ಲಿ ಋತವನ್ನು ಪಾನಮಾಡುವ ಸಂಸಾರಿಯಾದ ಆತ್ಮನನ್ನೇ ರಥಿಯು ಎಂದರೆ ಗಾಡಿಯ ಒಡೆಯನು ಎಂದು ತಿಳಿದುಕೊ; ಶರೀರವನ್ನೇ ರಥವೆಂದು ತಿಳಿ; ಏಕೆಂದರೆ ಶರೀರವು ಗಾಡಿಗೆ ಕಟ್ಟಿರುವ ಕುದುರೆಗಳ ಹಾಗಿರುವ ಇಂದ್ರಿಯಗಳಿಂದ (ಅತ್ತಿತ್ತ) ಜಗ್ಗಾಡಲ್ಪಡುತ್ತಿರುವದು. ನಿರ್ಣಯ ಮಾಡುವ ಬುದ್ಧಿಯನ್ನು ಸಾರಥಿಯೆಂದು ತಿಳಿದುಕೊ; ಏಕೆಂದರೆ ಮುಖ್ಯವಾಗಿ ಸಾರಥಿಯು ಒಯ್ದಲ್ಲಿಗೇ ಗಾಡಿಯು ಹೋಗುತ್ತಿರುವಂತೆ ಶರೀರವು ಮುಖ್ಯವಾಗಿ ಬುದ್ಧಿಯು ಒಯ್ದಲ್ಲಿಗೇ ಹೋಗುತ್ತಿರುವದು. ದೇಹದಲ್ಲಿರುವ ಕಾರ್ಯಗಳೆಲ್ಲ ಬಹು ಮಟ್ಟಿಗೆ ಬುದ್ಧಿಯಿಂದಲೇ* ಮಾಡತಕ್ಕವುಗಳಾಗಿವೆ. ಸಂಕಲ್ಪ†, ವಿಕಲ್ಪ- ಮುಂತಾದ ರೂಪದಲ್ಲಿರುವ ಮನಸ್ಸನ್ನು ಹಗ್ಗವೆಂದೇ ಎಂದರೆ ಕಡಿವಾಣವೆಂದೇ ತಿಳಿ; ಏಕೆಂದರೆ ಕಡಿವಾಣದಿಂದ ಕುದುರೆಗಳು ನಡೆಯುವ ಹಾಗೆ ಮನಸ್ಸಿನ ಹಿಡಿತದಿಂದಲೆ ಕಿವಿ ಮುಂತಾದ ಕರಣಗಳು ಪ್ರವರ್ತಿಸುತ್ತಿರುವವು.

**ಇಂದ್ರಿಯಗಳು ಕುದುರೆಗಳೆನ್ನುತ್ತಾರೆ, ವಿಷಯಗಳನ್ನು ಅವುಗಳ ಗೋಚರ (ಎನ್ನುತ್ತಾರೆ). ಆತ್ಮ, ಇಂದ್ರಿಯ, ಮನಸ್ಸು- ಇವುಗಳಿಂದ ಕೂಡಿದಾತನನ್ನೇ ತಿಳಿದವರು ಭೋಕ್ತ ಎನ್ನುತ್ತಾರೆ. ॥ ೪ ॥**

ಈ ರಥದ ಕಲ್ಪನೆಯಲ್ಲಿ ಜಾಣರಾದವರು ಕಣ್ಣು ಮುಂತಾದ ಇಂದ್ರಿಯಗಳು ಶರೀರವೆಂಬ ರಥವನ್ನು ಎಳೆಯುತ್ತವೆಯೆಂಬ ಹೋಲಿಕೆಯನ್ನು ಕಂಡು ಅವುಗಳನ್ನು ಕುದುರೆಗಳು ಎನ್ನುತ್ತಾರೆ. ಕುದುರೆಗಳೆಂದು ಕಲ್ಪಿಸಿದ ಅದೇ ಇಂದ್ರಿಯಗಳಿಗೆ ರೂಪವೇ ಮುಂತಾದ ವಿಷಯಗಳು ಗೋಚರ ಎಂದರೆ ಮಾರ್ಗಗಳು ಎನ್ನುತ್ತಾರೆ. ‡ ಆತ್ಮ, ಇಂದ್ರಿಯ, ಮನ- ಇವುಗಳಿಂದ ಕೂಡಿದ ಶರೀ

---

* ಶರೀರದಲ್ಲಿ ಉಸಿರುಬಿಡುವದು, ರಕ್ತಚಲನೆ- ಮುಂತಾದ ಕೆಲವು ಕಾರ್ಯಗಳು ನಮ್ಮ ಬುದ್ಧಿಯ ಸಹಾಯವನ್ನು ಅಪೇಕ್ಷಿಸದೆಯೇ ನಡೆಯುತ್ತಿರುವವು. ಆದರೂ ಬಹುಮಟ್ಟಿಗೆ ನಾವು ಶರೀರದಿಂದ ಮಾಡುವ ಕಾರ್ಯವನ್ನೆಲ್ಲ ಬುದ್ಧಿಯು ಮೊದಲು ನಿರ್ಣಯಿಸಬೇಕಾಗಿರುವದರಿಂದ ಇದನ್ನು ಸಾರಥಿಯೆನ್ನಬಹುದು

† ಹೀಗೆ ಮಾಡುವೆನೆಂದು ಮಾಡಿಕೊಳ್ಳುವ ಮನೋವ್ಯಾಪಾರಕ್ಕೆ ಸಂಕಲ್ಪವೆಂದು ಹೆಸರು. ಬಗೆಬಗೆಯಾಗಿ ತೋರುವದೆಂದು ಬಿಡಿಸಿ ಕಲ್ಪಿಸುವ ಮನೋವ್ಯಾಪಾರಕ್ಕೆ ವಿಕಲ್ಪವೆಂದು ಹೆಸರು

‡ 'ವಿದ್ಧಿ' ಎಂದು ಮೂಲದಲ್ಲಿದೆ: 'ವಿದುಃ' ಎಂದಿರಬಹುದೆಂದು ಪ್ರಕರಣಾನುಸಾರವಾಗಿ ತಿದ್ದಿಕೊಂಡಿದೆ.

ರೇಂದ್ರಿಯಮನಸ್ಸುಗಳೊಡನೆ ಸೇರಿದ ಆತ್ಮನೇ ಸಂಸಾರಿ ಎಂದು ವಿವೇಕಿಗಳಾದ ತಿಳಿಪವರು ಹೇಳುವರು. ಏಕೆಂದರೆ ಬರಿಯ ಆತ್ಮನಿಗೆ ಭೋಕ್ತೃತ್ವವಿರುವದಿಲ್ಲ, ಬುದ್ಧಿ ಮುಂತಾದ ಉಪಾಧಿಗಳಿಂದಲೇ ಅವನಿಗೆ ಭೋಕ್ತೃತ್ವವುಂಟಾಗಿರುವದು. ಆದ್ದರಿಂದಲೇ* ಬೇರೊಂದು ಶ್ರುತಿಯು "ಧ್ಯಾನಮಾಡುವಂತಿರುವನು, ಚಲಿಸು ವಂತಿರುವನು" (ಬೃ) ಎಂದು ಬರಿಯ ಆತ್ಮನು ಭೋಕ್ತೃವಲ್ಲವೆಂದೇ ತಿಳಿಸು ತ್ತದೆ. ಮತ್ತು ಹೀಗೆ (ಸ್ವತಃ ಭೋಕ್ತೃವಲ್ಲವೆಂಬುದು ನಿಜ) ವಾದರೇ ವಿಷ್ಣು ವಿನ ಸ್ಥಾನವು ತನ್ನ ಆತ್ಮವು ಎಂದು ತಿಳಿದುಕೊಳ್ಳುವನೆಂದು ರಥಕಲ್ಪನೆಯಿಂದ ಮುಂದೆ (೯ನೆಯ ಮಂತ್ರದಲ್ಲಿ) ಹೇಳಿರುವದೂ ಹೊಂದುತ್ತದೆ, ಹಾಗಿಲ್ಲದಿದ್ದರೆ ಹೊಂದುವದಿಲ್ಲ; ಏಕೆಂದರೆ ಸ್ವಭಾವವನ್ನು ದಾಟುವದು (ಯಾರಿಗೂ) ಆಗ ಲಾರದು.

**ಯಾವನು ಯಾವಾಗಲೂ ಬಿಗಿಹಿಡಿಯದ ಮನಸ್ಸುಳ್ಳವನಾಗಿ ತಿಳಿ ವಳಿಕೆಯಿಲ್ಲದವನಾಗಿರುವನೋ ಅವನ ಇಂದ್ರಿಯಗಳು ಸಾರಥಿಯ ತುಂಟಕುದುರೆಗಳ ಹಾಗೆ ವಶವಾಗದೆ ಇರುವವು. ॥ ೫ ॥**

ಹೀಗಿರುವದರಿಂದ ಬುದ್ಧಿ ಎಂಬ ಯಾವ ಸಾರಥಿಯು ತಿಳಿವಳಿಕೆಯಿಲ್ಲದೆ ಪ್ರವೃತ್ತಿಯಲ್ಲಾಗಲಿ ನಿವೃತ್ತಿಯಲ್ಲಾಗಲಿ ವಿವೇಕವಿಲ್ಲದೆ ಹೆಡ್ಡನಾಗಿ, ಗಾಡಿ ಯನ್ನು ನಡೆಯಿಸುವದಕ್ಕೆ ತಿಳಿಯದೆ ಇರುವ (ದೃಷ್ಟಾಂತದ) ಸಾರಥಿಯ ಹಾಗೆ, ಹಗ್ಗದಂತಿರುವ ಮನಸ್ಸನ್ನು ಯಾವಾಗಲೂ ಬಿಗಿಹಿಡಿಯದೆ, ಅದನ್ನು ಸಮಾ ಧಾನದಲ್ಲಿಟ್ಟುಕೊಳ್ಳದೆ ಇರುವನೋ, ಅಂಥ ಹೆಡ್ಡನಾದ ಬುದ್ಧಿಯೆಂಬ ಸಾರಥಿಗೆ ಕುದುರೆಗಳ ಹಾಗಿರುವ ಇಂದ್ರಿಯಗಳು– ದೃಷ್ಟಾಂತದ ಸಾರಥಿಗೆ ಹೇಗೆ ಪಳಗಿಸದ ತುಂಟಕುದುರೆಗಳು ವಶವಾಗದೆ ಅಡ್ಡಿಮಾಡುವದಕ್ಕಾಗದೆ ಇರು ವವೋ ಹಾಗೆ– ವಶವಾಗದೆ ಇರುವವು.

**ಯಾವನಾದರೆ ಯಾವಾಗಲೂ ಬಿಗಿಹಿಡಿದ ಮನಸ್ಸುಳ್ಳಾತನಾಗಿ ತಿಳಿವಳಿಕೆಯುಳ್ಳವನಾಗಿರುವನೋ ಅವನಿಗೆ ಇಂದ್ರಿಯಗಳು ಸಾರಥಿಯ ಒಳ್ಳೆಯ ಕುದುರೆಗಳ ಹಾಗೆ ವಶವಾಗಿರುವವು. ॥ ೬ ॥**

ಆದರೆ ಯಾವನು ಮೇಲೆ ಹೇಳಿದಂಥವನಲ್ಲದೆ ತಿಳಿವಳಿಕೆಯುಳ್ಳ ಸಾರಥಿ ಯಾಗಿರುವನೋ, ಮನಸ್ಸನ್ನು ಬಿಗಿಹಿಡಿದು ಯಾವಾಗಲೂ ಚಿತ್ತಸಮಾ ಧಾನವುಳ್ಳವನಾಗಿರುವನೋ, ಅವನಿಗೆ ಕುದುರೆಗಳಂತಿರುವ ಇಂದ್ರಿಯಗಳು– ದೃಷ್ಟಾಂತದ ಸಾರಥಿಯು ಪಳಗಿಸಿದ ಒಳ್ಳೆಯ ಕುದುರೆಗಳಂತೆ– ಮುಂದಕ್ಕೆ

---

* ಆತ್ಮನು ತಾನು ಸ್ವಭಾವದಿಂದ ಕರ್ತೃಭೋಕ್ತೃವಲ್ಲದ್ದರಿಂದಲೇ.

ನಡೆಯಿಸುವದಕ್ಕಾದರೂ ಹಿಂದಕ್ಕೆಳೆಯುವದಕ್ಕಾದರೂ ಶಕ್ಯವಾಗಿ ಸ್ವಾಧೀನದಲ್ಲಿರುವವು.

**ಯಾವನು ತಿಳಿವಳಿಕೆಯಿಲ್ಲದೆ, ಮನಸ್ಸಿಲ್ಲದವನಾಗಿ, ಯಾವಾಗಲೂ ಅಶುಚಿಯಾಗಿ ಇರುವನೋ ಅವನು ಆ ಸ್ಥಾನವನ್ನು ಹೊಂದುವದಿಲ್ಲ, ಸಂಸಾರವನ್ನೂ ಪಡೆಯುತ್ತಾನೆ. || ೭ ||**

ಇವರಿಬ್ಬರು (ಸಾರಥಿಗಳಲ್ಲಿ)* ಹಿಂದೆ ಹೇಳಿದಂತೆ ತಿಳಿವಳಿಕೆಯಿಲ್ಲದ ಬುದ್ಧಿ ಸಾರಥಿಯಿಂದ ಈ ಫಲವೆಂದು ಹೇಳುತ್ತಾನೆ. ಯಾವನು ತಿಳಿವಳಿಕೆಯಿಲ್ಲದೆ ಮನಸ್ಸನ್ನು ಬಿಗಿಹಿಡಿಯದೆ ಅವನು ಆ ಕಾರಣದಿಂದಲೇ ಯಾವಾಗಲೂ ಅಶುಚಿಯಾಗಿರುವನೋ ಅಂಥ ರಥಿಕನು ಹಿಂದೆ ಹೇಳಿದ ಅಕ್ಷರವೆಂಬ ಹೆಚ್ಚಿನ ಸ್ಥಾನವನ್ನು ಆ ಸಾರಥಿಯಿಂದ ಹೊಂದಲಾರನು. ಆ (ಸ್ಥಾನವನ್ನು) † ಹೊಂದುವದಿಲ್ಲವೆಂಬುದೊಂದೇ ಅಲ್ಲ, ಹುಟ್ಟುಸಾವುಗಳ ರೂಪದಲ್ಲಿರುವ ಸಂಸಾರವನ್ನೂ ಪಡೆಯುತ್ತಾನೆ.

**ಯಾವನಾದರೆ ತಿಳಿವಳಿಕೆಯುಳ್ಳವನಾಗಿ ಮನಸ್ಸನ್ನುಳ್ಳಾತನಾಗಿ ಶುಚಿಯಾಗಿರುವನೋ, ಅವನು ಮಾತ್ರ ಆ ಸ್ಥಾನವನ್ನು ಹೊಂದುವನು; ಅದರಿಂದ (ಅವನು) ಮತ್ತೆ ಹುಟ್ಟುವದಿಲ್ಲ. || ೮ ||**

ಆದರೆ ತಿಳಿವಳಿಕೆಯುಳ್ಳವನಾಗಿ ಎಂದರೆ ತಿಳಿವಳಿಕೆಯುಳ್ಳ ಸಾರಥಿಯಿರುವ ಇನ್ನೊಬ್ಬ ರಥಿಕನುಂಟಷ್ಟೆ, ಎಂದರೆ ಜ್ಞಾನಿಯಾದವನು(ಂಟಷ್ಟೆ) ಎಂದಭಿಪ್ರಾಯ; ಅವನು ಮನಸ್ಸುಳ್ಳವನಾಗಿ ಎಂದರೆ ಮನಸ್ಸನ್ನು ಬಿಗಿಹಿಡಿದುಕೊಂಡು ಆ ಕಾರಣದಿಂದಲೇ ಯಾವಾಗಲೂ ಶುಚಿಯಾಗಿರುವನು. ಅವನು ಮಾತ್ರ ಆ ಸ್ಥಾನವನ್ನು ಹೊಂದುವನು. ಆ ಸ್ಥಾನವನ್ನು ಹೊಂದಿ ಅವನು ಕೆಳಕ್ಕೆ ಜಾರಿ ಬೀಳದೆ ಇರುವದರಿಂದ ಮತ್ತೆ ಸಂಸಾರದಲ್ಲಿ ಹುಟ್ಟುವದಿಲ್ಲ.

**ಯಾವ ಮನುಷ್ಯನು ವಿಜ್ಞಾನವೆಂಬ ಸಾರಥಿಯುಳ್ಳಾತನೂ ಮನಸ್ಸೆಂಬ ಹಗ್ಗವುಳ್ಳಾತನೂ ಆಗಿ ಇರುವನೋ, ಅವನು ದಾರಿಯ ಕೊನೆಯಾದ ಆ ವಿಷ್ಣುವಿನ ಪರಮಪದವನ್ನು ಹೊಂದುತ್ತಾನೆ. || ೯ ||**

ಅದು ಯಾವ ಪದವು ? ಎಂದರೆ ಹೇಳುತ್ತಾನೆ. ಯಾವನು ವಿಜ್ಞಾನವೆಂಬ ಸಾರಥಿಯುಳ್ಳವನೂ ಎಂದರೆ ಹಿಂದೆ ಹೇಳಿದ ವಿವೇಕದಿಂದ ಕೂಡಿದ ಬುದ್ಧಿಯೆಂಬ ಸಾರಥಿಯುಳ್ಳಾತನೂ ಮನಸ್ಸೆಂಬ ಹಗ್ಗವುಳ್ಳವನೂ ಎಂದರೆ ಮನಸ್ಸನ್ನು ಬಿಗಿಹಿಡಿದು ಚಿತ್ತಸಮಾಧಾನವನ್ನು ಹೊಂದಿದವನೂ ಆಗಿ ಶುಚಿಯಾಗಿರುವನೋ ಆ ಮನುಷ್ಯನು, ಆ ಜ್ಞಾನಿಯು, ಸಂಸಾರಗತಿಯೆಂಬ ದಾರಿಯ ಕೊನೆಯನ್ನು

---

* 'ತತ್ರ'– ಎಂಬ ಪಾಠವು 'ತಸ್ಯ' ಎಂಬುದಕ್ಕಿಂತ ಉತ್ತಮವಾಗಿರುವದು

† 'ಕೈವಲ್ಯಂ' ಎಂಬ ಮಾತು ಭಾಷ್ಯದಲ್ಲಿ ಬೇಕಿರುವದಿಲ್ಲ.

ಎಂದರೆ ಪಡೆಯಬೇಕಾದ ಪರ(ಬ್ರಹ್ಮ)ವನ್ನೇ ಎಂದರ್ಥ, ಅದನ್ನು– ಪಡೆಯುತ್ತಾನೆ, ಸಂಸಾರದ ಎಲ್ಲಾ ಬಂಧನಗಳಿಂದಲೂ ಬಿಡುಗಡೆಹೊಂದುತ್ತಾನೆ. (ಈ) ಜ್ಞಾನಿಯು: ಆ ಎಲ್ಲೆಲ್ಲಿಯೂ ಹಬ್ಬಿಕೊಂಡಿರುವ ಬ್ರಹ್ಮವಾದ ವಿಷ್ಣುವಿನ ಎಂದರೆ **ವಾಸುದೇವ**ನೆಂಬ ಪರಮಾತ್ಮನ, ಪರಮಪದವನ್ನು ಎಂದರೆ ಹೆಚ್ಚಿನದಾದ ಸ್ಥಾನವನ್ನು– ತತ್ತ್ವವನ್ನು ಎಂದರ್ಥ *– ಹೊಂದುತ್ತಾನೆ.

## ಆತ್ಮನು ಎಲ್ಲಕ್ಕೂ ಸೂಕ್ಷ್ಮನು

**ಇಂದ್ರಿಯಗಳಿಗಿಂತ ಅರ್ಥಗಳು ಹೆಚ್ಚಿನವು; ಅರ್ಥಗಳಿಗಿಂತ ಮನಸ್ಸು ಹೆಚ್ಚಿನದು ; ಮನಸ್ಸಿಗಿಂತ ಬುದ್ಧಿ ಹೆಚ್ಚು ; ಬುದ್ಧಿಗಿಂತ ಮಹಾನ್ ಎಂಬ ಆತ್ಮನು ಹೆಚ್ಚು. ॥ ೧೦ ॥**

**ಮಹತ್ತಿಗಿಂತ ಅವ್ಯಕ್ತವು ಹೆಚ್ಚು, ಅವ್ಯಕ್ತಕ್ಕಿಂತ ಪುರುಷನು ಹೆಚ್ಚು. ಪುರುಷನಿಗಿಂತ ಮುಂದೆ ಏನೂ ಇಲ್ಲ; ಅವನೇ ಕೊನೆ, ಅವನೇ ಕೊನೆಯ ಗತಿ. ॥ ೧೧ ॥**

ಈಗ ಸ್ಥೂಲವಾಗಿರುವ ಇಂದ್ರಿಯಗಳೇ ಮೊದಲಾದವುಗಳು ಒಂದಕ್ಕಿಂತ (ಒಂದು) ಸೂಕ್ಷ್ಮವಾಗಿರುವವೆಂದು ಕ್ರಮಕ್ರಮವಾಗಿ (ಸೂಕ್ಷ್ಮವಸ್ತುಗಳನ್ನು) ತಿಳಿಸುವದರ ಮೂಲಕ, ಯಾವ ಸ್ಥಾನವನ್ನು (ನಾವು) ಪಡೆಯಬೇಕಾಗಿರುವದೋ ಅದು ನಮ್ಮ ಒಳಗಿನ ಆತ್ಮವೇ ಎಂದು ತಿಳಿಸಬೇಕೆಂದು ಇದನ್ನು ಪ್ರಾರಂಭಿಸಿರುತ್ತದೆ

ಇಂದ್ರಿಯಗಳು ಸ್ಥೂಲವಾಗಿರುವವಷ್ಟೆ; ತಮ್ಮನ್ನು ಬೆಳಗಿಸಲೆಂದು ಇವುಗಳನ್ನು ಯಾವ ಅರ್ಥಗಳು ಹುಟ್ಟಿಸಿರುವವೋ,† [ಆರಬ್ಧಾನಿ] ಆ ಅರ್ಥಗಳು‡ ಈ ತಮ್ಮ ಕಾರ್ಯಗಳಾದ ಇಂದ್ರಿಯಗಳಿಗಿಂತ ಹೆಚ್ಚಿನವು ಎಂದರೆ

* ಪರಮಾತ್ಮನಿಗೆ ಬೇರೊಂದು ಗೊತ್ತಾದ ಸ್ಥಾನವಿಲ್ಲವಾದ್ದರಿಂದ ಪರಮಾತ್ಮಸ್ಥಾನವನ್ನು ಪಡೆಯುವದು ಎಂದರೆ ತತ್ತ್ವವನ್ನು ತಿಳಿದುಕೊಳ್ಳುವದೇ, ವಾಸುದೇವನೆಂಬ ಹೆಸರಿನಿಂದ ಭಗವದ್ಗೀತೆ ಮುಂತಾದ ಕಡೆಯಲ್ಲಿ ವರ್ಣಿಸಿರುವದೂ ಈ ತತ್ತ್ವವೆ– ಎಂದರ್ಥ ಈ ವಿಷಯವನ್ನು ಗೀತಾರ್ಥಸರ್ವಸ್ವದಲ್ಲಿ ವಿಸ್ತಾರವಾಗಿ ವಿಚಾರಮಾಡಿರುತ್ತದೆ.

† ಆರಬ್ಧ, ಆರಂಭಕ- ಎಂಬ ಮಾತುಗಳನ್ನು ಕಾರ್ಯಕಾರಣ ಎಂಬ ಅರ್ಥದಲ್ಲಿ ಭಾಷ್ಯಕಾರರು ಉಪಯೋಗಿಸುವದು ಹೆಚ್ಚು ವೈಶೇಷಿಕರು ಹೇಳುವ ಆರಂಭವಾದವನ್ನು ಒಪ್ಪಿರುತ್ತಾರೆಂದು ಭ್ರಮಿಸಬಾರದು ; ಏಕೆಂದರೆ ಈ ವಾದವನ್ನು ಸೂತ್ರಭಾಷ್ಯದಲ್ಲಿ ಖಂಡಿಸಿರುತ್ತದೆ.

‡ ಶಬ್ದ, ಸ್ಪರ್ಶ, ರೂಪ, ರಸ, ಗಂಧ- ಇವುಗಳು

(ಇದಕ್ಕಿಂತ) ಸೂಕ್ಷ್ಮವಾಗಿಯೂ* (ಇದಕ್ಕಿಂತ) ದೊಡ್ಡವಾಗಿಯೂ† (ಇದಕ್ಕಿಂತ) ಒಳಗಿನ ಆತ್ಮವಾಗಿಯೂ‡ ಇರುವವು. ಆ ಅರ್ಥಗಳಿಂತಲೂ ಮನಸ್ಸು ಎಂದರೆ ಮನಸ್ಸಿನ ಕಾರಣವಾದ ಮನಸ್ಸೆಂಬ ಹೆಸರಿನ ಭೂತಸೂಕ್ಷ್ಮವು ಹೆಚ್ಚಿನದು, (ಅವುಗಳಿಗಿಂತ) ಸೂಕ್ಷ್ಮವಾಗಿಯೂ (ಹೆಚ್ಚು) ದೊಡ್ಡದಾಗಿಯೂ, (ಇನ್ನೂ) ಒಳಗಿನ ಆತ್ಮವಾಗಿಯೂ ಇರುವದು; ಏಕೆಂದರೆ ಇದು ಸಂಕಲ್ಪ, ವಿಕಲ್ಪ- ಮುಂತಾದವುಗಳಿಗೆ ಕಾರಣವಾಗಿರುವದು. (ಈ) ಮನಸ್ಸಿಗಿಂತಲೂ ನಿಶ್ಚಯವೇ ಮುಂತಾದದ್ದಕ್ಕೆ ಕಾರಣವಾಗಿರುವ ಬುದ್ಧಿಯೆಂದು ಕರೆಯಲ್ಪಡುವ ಭೂತಸೂಕ್ಷ್ಮವು ಹೆಚ್ಚಿನದು, ಇನ್ನೂ ಸೂಕ್ಷ್ಮವಾಗಿ ಇನ್ನೂ ದೊಡ್ಡದಾಗಿ, ಇನ್ನೂ ಒಳಗಿನ ಆತ್ಮವಾಗಿಯೂ ಇರುವದು. ಬುದ್ಧಿಗಿಂತ 'ಮಹಾನ್ ಆತ್ಮವು' ಹೆಚ್ಚಿನದು. ಎಲ್ಲಾ ಪ್ರಾಣಿಗಳ ಬುದ್ಧಿಗೂ ಒಳಗಿನ ಆತ್ಮವಾಗಿರುವದರಿಂದ ಆತ್ಮವು; ಎಲ್ಲಕ್ಕೂ ದೊಡ್ಡದಾಗಿರುವದರಿಂದ 'ಮಹಾನ್' (ಎನ್ನಿಸಿಕೊಂಡಿದೆ). ಅವ್ಯಕ್ತದಿಂದ ಮೊದಲು ಹುಟ್ಟಿದ **ಹಿರಣ್ಯಗರ್ಭ**ನೆಂಬ ಜ್ಞಾನಾಜ್ಞಾನಸ್ವರೂಪನಾಗಿರುವ § ತತ್ತ್ವವು ಎಲ್ಲಕ್ಕೂ ದೊಡ್ಡದಾಗಿರುವದರಿಂದ

---

* ಅರ್ಥಗಳು ಇಂದ್ರಿಯಗಳಿಗಿಂತ ಸೂಕ್ಷ್ಮವೆಂಬುದೂ ಒಳಗಿರುವ ಆತ್ಮವೆಂಬದೂ ಹೇಗೆ ಹೊಂದುವದು?— ಎಂಬ ಪ್ರಶ್ನೆ ಹುಟ್ಟುವದಷ್ಟೆ; ಇದಕ್ಕೆ ಸಮಾಧಾನವು ಭಾಷ್ಯದಲ್ಲಿ ಎಲ್ಲಿಯೂ ಕಂಡುಬರುವದಿಲ್ಲ. ಬೃಹದಾರಣ್ಯಕಭಾಷ್ಯದಲ್ಲಿ ವಿಷಯಗಳು ಇಂದ್ರಿಯಗಳನ್ನು ಅಧೀನಪಡಿಸಿಕೊಂಡಿರುವದರಿಂದ ಹೆಚ್ಚಿನವೆಂದು ಹೇಳಿದೆಯಾದರೂ ಸೂಕ್ಷ್ಮತ್ವವೆಲ್ಲಿಯದು, ಒಳಗಿನ ಆತ್ಮವೆಂಬುದು ಹೇಗೆ— ಎಂಬುದಕ್ಕೆ ಸಮಾಧಾನವು ಅಲ್ಲಿ ದೊರೆಯುವದಿಲ್ಲ. ಶರೀರವನ್ನೇ ಆತ್ಮವೆಂದು ಸಾಮಾನ್ಯರು ತಿಳಿದಿದಾರಷ್ಟೆ, ಇದಕ್ಕೆ ಇಂದ್ರಿಯಗಳು ಉಪಕರಣಗಳೆಂದು ಮಾತ್ರ ಅವರು ಭಾವಿಸಿರುವದರಿಂದ ಅವರ ದೃಷ್ಟಿಯಿಂದ ಶರೀರವೇ ಇಂದ್ರಿಯಗಳಿಗಿಂತ ಒಳಗಿನದಾಯಿತು. ಅದನ್ನಾಶ್ರಯಿಸಿಯೇ ಇಂದ್ರಿಯಗಳು ಕೆಲಸಮಾಡುವದರಿಂದ ಅವೇ ಸೂಕ್ಷ್ಮವಾದವು ಎಂದು ಒಂದರ್ಥವನ್ನು ಮಾಡಿಕೊಳ್ಳಬಹುದಾಗಿದೆ. ಅಥವಾ ಈ ಭಾಷ್ಯದಲ್ಲಿ ಭೂತಸೂಕ್ಷ್ಮವನ್ನೇ ಗ್ರಹಿಸುತ್ತಾ ಹೋಗಿರುವದರಿಂದ ಅರ್ಥವೆಂದರೆ ಅರ್ಥಶಬ್ದವಾಚ್ಯವಾದ ಸೂಕ್ಷ್ಮಭೂತಗಳು ಎಂದು ಅರ್ಥಮಾಡಿದರೆ ಅವು ಇಂದ್ರಿಯಕ್ಕಿಂತ ಸೂಕ್ಷ್ಮವಾಗುವವು; ಅವೇ ಸ್ಥೂಲಭೂತವಾಗಿ ಶರೀರವಾಗುವವು. ಈ ದೃಷ್ಟಿಯಿಂದ ಶರೀರವನ್ನು ಲಕ್ಷಣೆಯಿಂದ ಪ್ರತ್ಯಗಾತ್ಮನೆಂದು ಕರೆದಿದೆ ಎಂದಾದರೂ ಭಾವಿಸಬಹುದು

† ಅರ್ಥಗಳು ತಮ್ಮ ರೂಪದಿಂದಲೂ ತಮ್ಮ ಕಾರ್ಯವಾದ ಇಂದ್ರಿಯರೂಪದಿಂದಲೂ ಇರುವದರಿಂದ ಹೆಚ್ಚು ವ್ಯಾಪಕವಾದವು.

‡ 'ಪ್ರತ್ಯಗಾತ್ಮಭೂತಾಃ' ಎಂದರೆ ಹೆಚ್ಚು ಸ್ಥಿರವಾಗಿರುವವು ಎಂದರ್ಥವೆಂದು ವ್ಯಾಖ್ಯಾನಕಾರರು ಹೇಳುತ್ತಾರೆ; ಆದರೆ ಇದಕ್ಕೆ ಭಾಷ್ಯದ ಆಧಾರವಿಲ್ಲ.

§ ಜ್ಞಾನಶಕ್ತಿಕ್ರಿಯಾಶಕ್ತಿಗಳಿಂದ ಕೂಡಿರುವದರಿಂದ ಇದು ಜ್ಞಾನರೂಪವಾಗಿಯೂ ಜಡರೂಪವಾಗಿಯೂ ಇರುವದು.

'ಮಹಾನ್ ಆತ್ಮ' ಎನ್ನಿಸಿಕೊಂಡಿದೆ. (ಇದು)- ಬುದ್ಧಿಗಿಂತ ಹೆಚ್ಚು ಎನಿಸಿಕೊಳ್ಳುವದು. ॥ ೧೦ ॥

(ಈ) ಮಹತ್ತಿಗಿಂತಲೂ ಸೂಕ್ಷ್ಮವಾಗಿ, ಇನ್ನೂ ಒಳಗಿನ ಆತ್ಮವಾಗಿ ಎಲ್ಲಕ್ಕೂ ದೊಡ್ಡದಾಗಿ ಇರುವದು **ಅವ್ಯಕ್ತವು,** ಎಂದರೆ ಎಲ್ಲಾ ಜಗತ್ತಿಗೂ ಬೀಜವಾಗಿರುವ ಅವ್ಯಾಕೃತವಾದ ನಾಮರೂಪಗಳ ತತ್ತ್ವವು. (ಇದು) ಎಲ್ಲಾ ಕಾರ್ಯಕಾರಣಶಕ್ತಿಗಳ ಒಟ್ಟಾಗಿರುವದು, ಇದಕ್ಕೆ ಅವ್ಯಕ್ತ, ಅವ್ಯಾಕೃತ, ಆಕಾಶ- ಮುಂತಾದ* ಹೆಸರುಗಳಿರುವವು; (ಇದು) ಆಲದ ಬೀಜದಲ್ಲಿ ಆಲದ ಮರದ **ಶಕ್ತಿ**ಯಿರುವಂತೆ † ಪರಮಾತ್ಮನಲ್ಲಿ ಹಾಸುಹೊಕ್ಕಾಗಿ‡ ಆಶ್ರಯಿಸಿಕೊಂಡಿರುವದು. ಈ ಅವ್ಯಕ್ತಕ್ಕಿಂತ (ಆತ್ಮನು) ಹೆಚ್ಚಿನವನಾಗಿರುವನು, ಎಂದರೆ ಕಾರಣಗಳಿಗೆಲ್ಲ ಕಾರಣವಾಗಿರುವದರಿಂದ ಮತ್ತು ಎಲ್ಲಕ್ಕೂ ಒಳಗಿರುವ ಆತ್ಮನಾಗಿರುವದರಿಂದ ಇನ್ನೂ ಸೂಕ್ಷ್ಮವಾಗಿರುವನು, ಇನ್ನೂ ದೊಡ್ಡವನಾಗಿರುವನು ; ಆದ್ದರಿಂದ ಇವನು **ಪುರುಷನು** ಎನ್ನಿಸಿಕೊಂಡಿರುವನು ; ಏಕೆಂದರೆ ಇವನು ಎಲ್ಲವನ್ನೂ ತುಂಬಿಕೊಂಡಿರುತ್ತಾನೆ.

ಈ (ಪುರುಷನಿಗಿಂತ) ಹೆಚ್ಚಿನದು ಮತ್ತೊಂದು ಇದ್ದೀತೆಂಬ ಶಂಕೆಯನ್ನು ಪರಿಹಾರಮಾಡುವದಕ್ಕೆ ಪುರುಷನಿಗಿಂತ ಮುಂದೆ ಏನೂ ಇಲ್ಲನೆಂದು ಹೇಳುತ್ತಾರೆ. ಚೈತನ್ಯವೊಂದರ ಗಟ್ಟಿಯಾಗಿರುವ ಈ ಪುರುಷನಿಗಿಂತ ಮುಂದೆ ಯಾವ ವಸ್ತುವೂ ಇಲ್ಲದಿರುವದರಿಂದ ಈ ಸೂಕ್ಷ್ಮವಾಗಿರುವಿಕೆ, ದೊಡ್ಡದಾಗಿರುವಿಕೆ, ಒಳಗಿನ ಆತ್ಮವಾಗಿರುವಿಕೆ- ಇವುಗಳಿಗೆಲ್ಲ ಈ (ಆತ್ಮನೇ) ಕೊನೆ ಎಂದರೆ ಇಂದ್ರಿಯಗಳಿಂದ ಮೊದಲುಮಾಡಿಕೊಂಡು ಬಂದರೆ ಸೂಕ್ಷ್ಮತ್ವವೇ ಮುಂತಾದವು (ಇನ್ನು ಹೆಚ್ಚಿನದಿಲ್ಲವಾಗಿ) ಇಲ್ಲಿಯೇ ನಿಲ್ಲುವವು. ಆದ್ದರಿಂದಲೇ ಈ (ಆತ್ಮನೇ) ನಾನಾ ವಿಧವಾದ ಗತಿಗಳುಳ್ಳ ಸಂಸಾರಿಗಳೆಂಬ ನಡೆಯುವವರಿಗೆಲ್ಲ ಕೊನೆಯ ಗತಿ, (ಅವರು) ಕೊನೆಗೆ ಮುಟ್ಟಬೇಕಾದ ಮಜಲು. "ಯಾವದನ್ನು ಪಡೆದು

---

* ಬೀಜ, ಮಾಯೆ- ಎಂಬಿವೂ ಇದರ ಹೆಸರುಗಳು. ಇದರ ವಿಷಯದಲ್ಲಿ ಬ್ರ॥ ಸೂ॥ (೧-೪-೩)ವನ್ನು ನೋಡಿ.

† ಪರಮಾತ್ಮನಲ್ಲಿ ನಿಜವಾಗಿ ಒಂದು ಶಕ್ತಿಯು ಇರುವದೆಂದು ಶಾಕ್ತರು ಹೇಳುತ್ತಿರುವರು ಪರಮಾತ್ಮಸ್ವರೂಪಕ್ಕಿಂತ ಭಿನ್ನವಾಗಿ ಅಂಥ ಶಕ್ತಿಯು ಯಾವದೂ ಇರುವದಿಲ್ಲ. ಅವ್ಯಕ್ತವೂ ಆತ್ಮನಲ್ಲಿ ತಪ್ಪುತಿಳಿವಿನಿಂದ ಆರೋಪಿಸಿರುವಾಗಿಯೆ ಇರುವದೆಂದು ತಿಳಿಯಬೇಕು.

‡ ಬೃಹದಾರಣ್ಯಕ(೩-೬-೧)ಶ್ರುತಿಯ ಸೂಚನೆ ನಿಜವಾಗಿ ನೋಡಿದರೆ ಇದೂ ಆತ್ಮನೆ. ಆದರೆ ಬೇರೆ ಎಂದು ಅಜ್ಞಾನಿಗಳು ಕಲ್ಪಿಸಿಕೊಂಡಿರುವರು ಬ॥ ಸೂ॥(೨-೧-೧೪)ವನ್ನು ನೋಡಿ.

ಹಿಂತಿರುಗುವದಿಲ್ಲವೋ (ಅದೇ ನನ್ನ ಹೆಚ್ಚಿನ ಸ್ಥಾನವು)" (ಗೀ॥) ಎಂಬ ಸ್ಮೃತಿಯೂ ಇದನ್ನೇ* ಹೇಳುವದು. ॥ ೧೧ ॥

(ಆಕ್ಷೇಪ) ಹೋಗುವದೆಂದ ಮೇಲೆ ಹಿಂತಿರುಗಿ ಬರಲೂ ಬೇಕು; (ಹೀಗಿರುವಲ್ಲಿ) "ಆದರಿಂದ ಆವನು ಮತ್ತೆ ಹುಟ್ಟುವದಿಲ್ಲ" ಎಂದು (ಬೇರೆ ಮಂತ್ರದಲ್ಲಿ) ಹೇಳಿದ್ದು ಹೇಗೆ (ಸರಿ)?

(ಪರಿಹಾರ) ಇದರಲ್ಲೇನೂ ತಪ್ಪಿಲ್ಲ; (ಏಕೆಂದರೆ) ಎಲ್ಲರಿಗೂ ಒಳಗಿರುವ ಆತ್ಮನೇ ಆಗಿರುವದರಿಂದ (ಆತ್ಮನನ್ನು) ತಿಳಿಯುವದನ್ನೇ† ಗತಿಯೆಂದು ಉಪಚಾರಕ್ಕೆ ಕರೆದಿರುತ್ತದೆ. (ಆತ್ಮನು ಎಲ್ಲರಿಗೂ) ಒಳಗಿರುವ ಆತ್ಮನೆಂಬುದು ಹೇಗೆಂಬದನ್ನು ಇಂದ್ರಿಯ, ಮನಸ್ಸು, ಬುದ್ಧಿ- ಇವುಗಳೆಲ್ಲಕ್ಕೂ ಹೆಚ್ಚಿನವನೆಂದು ತಿಳಿಸಿ ತೋರಿಸಿಕೊಟ್ಟಿದ್ದಾಗಿದೆ. ಯಾವನು ಹೋಗಬೇಕಾಗಿರುವದೋ ಅವನು ಹೋಗದೆ (ಪಡೆಯದೆ) ಇರುವ ತನ್ನೊಳಗೆ ಇಲ್ಲದ, ತನ್ನ ಸ್ವರೂಪವಲ್ಲದ ವಸ್ತುವನ್ನು ಕುರಿತು ಹೋಗುವನೇ ಹೊರತು ಇದಕ್ಕೆ ವಿರುದ್ಧವಾಗಿ (ತನ್ನ ಸ್ವರೂಪವಾಗಿಯೇ ನಿತ್ಯಪ್ರಾಪ್ತವಾಗಿಯೇ ಇರುವದನ್ನು ಪಡೆಯುವದಕ್ಕೆ) ಹೋಗುವದಿಲ್ಲ, "ದಾರಿಯನ್ನು ನಡೆಯದೆಯೇ ದಾರಿಗಳನ್ನು ದಾಟುವರು" ಎಂಬ ಶ್ರುತಿಯೂ ‡ ಈ ವಿಷಯವನ್ನು ತಿಳಿಸುತ್ತದೆ.

ಆದ್ದರಿಂದಲೇ (ಆತ್ಮನು) ಎಲ್ಲರಿಗೂ ಒಳಗಿನ ಆತ್ಮನೆಂಬುದನ್ನು (ಈ ಮುಂದಿನ ಮಂತ್ರವು) ತೋರಿಸುತ್ತದೆ:—

**ಎಲ್ಲಾ ಭೂತಗಳಲ್ಲಿಯೂ ಅಡಗಿರುವ ಈ ಆತ್ಮನು ಬೆಳಗುವದಿಲ್ಲ; ಆದರೆ ಸೂಕ್ಷ್ಮದರ್ಶಿಗಳಾದವರಿಂದ ಮೊನೆಯಾದ ಸೂಕ್ಷ್ಮಬುದ್ಧಿಯಿಂದ ನೋಡಲ್ಪಡುತ್ತಿರುವನು. ॥ ೧೨ ॥**

ಈ ಪುರುಷನು ಬ್ರಹ್ಮಾದಿಯಾಗಿ ಸ್ತಂಬದವರೆಗಿನ§ ಎಲ್ಲಾ ಪ್ರಾಣಿಗಳಲ್ಲಿಯೂ ಅಡಗಿರುವನು; ನೋಡುವದು, ಕೇಳುವದು- ಮುಂತಾದ ಕೆಲಸಗಳನ್ನು ಮಾಡುತ್ತ, ಮುಸುಕಿಟ್ಟುಕೊಂಡು **ಅವಿದ್ಯಾಮಾಯೆ**ಯಿಂದ ಮರೆ

* ಆತ್ಮನನ್ನುವೇ ಎಲ್ಲಕ್ಕೂ ಹೆಚ್ಚಿನವೆಂಬುದನ್ನೆ. ಇಲ್ಲಿ ಇಂದ್ರಿಯಾದಿಗಳಿಗಿಂತ ವಿಷಯಾದಿಗಳು ಹೆಚ್ಚಿನವು ಎಂದು ಹೇಳುವದರಲ್ಲಿ ತಾತ್ಪರ್ಯವಿಲ್ಲವೆಂದೂ ಆತ್ಮಸ್ವರೂಪನಿರ್ಧಾರಣೆಯೇ ಮುಖ್ಯವೆಂದೂ ಬ್ರಹ್ಮಸೂತ್ರ(೩-೩-೧೪)ದಲ್ಲಿ ನಿರ್ಣಯಿಸಿದೆ.

† ಅವಗತಿ (ಅರಿವು) ಎಂಬದನ್ನು ಗತಿ (ಪಡೆವುದು) ಎಂದು ಉಪಚಾರಕ್ಕಾಗಿ ಕರೆದಿರುತ್ತದೆ ಎಂದು ಭಾವ. ಗತಿ ಎಂಬ ಅರ್ಥವುಳ್ಳ ಧಾತುಗಳಿಗೆ ಜ್ಞಾನವೆಂಬರ್ಥವೂ ಸಂಸ್ಕೃತದಲ್ಲಿ ಉಂಟು. ಆದ್ದರಿಂದ ಆತ್ಮನ ಬಳಿಗೆ ಹೋಗುವದೆಂದರೂ ಆತ್ಮನನ್ನು ಅರಿಯುವದೆಂದರೂ ಒಂದೆ.

‡ ಈ ಶ್ರುತಿಯು ಯಾವದೋ ಗೊತ್ತಿಲ್ಲ. ಮುಂಡಕ(೩-೨-೫)ಭಾಷ್ಯದಲ್ಲಿಯೂ ಇದೆ.

§ ಹುಲ್ಲಿನಂಥ ಸ್ಥಾವರಪ್ರಾಣಿಯವರೆಗಿನ.

ಯಾಗಿರುವನು; ಆದ್ದರಿಂದಲೇ 'ನನ್ನ ಆತ್ಮನು' ಎಂದು ಯಾರಿಗೂ ತೋರಿಕೊಳ್ಳದೆ ಇರುವನು. ಆಹಾ! ಅತಿಗಂಭೀರವಾದ ತಿಳಿಯಲಸದಳವಾದ ವಿಚಿತ್ರವಾದ ಮಾಯೆಯಿದು! ಈ ಪ್ರಾಣಿಗಳೆಲ್ಲ ನಿಜವಾಗಿ ಪರಮಾರ್ಥವಾದ ತತ್ತ್ವವೇ ಆಗಿದ್ದರೂ ಹೀಗೆಂದು ತಿಳಿಸಿಕೊಟ್ಟರೂ 'ನಾನು ಪರಮಾತ್ಮನು' ಎಂದು ಗ್ರಹಿಸದೆ ಇರುವರಲ್ಲ! ಗಡಿಗೆ ಮುಂತಾದವುಗಳಂತೆ (ಬೇರೆಯಾಗಿ) ತಮಗೆ ಕಾಣುತ್ತಿದ್ದರೂ ತಾವಲ್ಲದ ದೇಹ, ಇಂದ್ರಿಯ- ಮುಂತಾದವುಗಳ ಗುಂಪನ್ನು- ಯಾರೂ ಹೇಳಿಕೊಡದಿದ್ದರೂ- ತಾವೆಂದು ತಿಳಿದುಕೊಂಡು 'ನಾನು ಇಂಥವನ ಮಗನು' ಎಂದು ಗ್ರಹಿಸಿಕೊಳ್ಳುತ್ತಿರುವರಲ್ಲ! ನಿಜವಾಗಿಯೂ (ಈ) ಜನವೆಲ್ಲ **ಪರಮಾತ್ಮನ ಮಾಯೆ**ಯಿಂದಲೇ * ಮತ್ತೆ ಮತ್ತೆ ಮೋಹಿತರಾಗಿ (ಸಂಸಾರದಲ್ಲಿ) ತೊಳಲುತ್ತಿರುವರು (ಎನ್ನಬೇಕು). ಆದ್ದರಿಂದಲೇ "ಯೋಗಮಾಯೆಯಿಂದ ಮುಸುಕಿಟ್ಟುಕೊಂಡಿರುವ ನಾನು ಯಾರಿಗೂ ತೋರಿಕೊಳ್ಳದೆ ಇರುವೆನು" (ಗೀ) ಎಂದು ಸ್ಮೃತಿಯೂ ಹೇಳುತ್ತಿರುವದು.

(ಆಕ್ಷೇಪ) "ತಿಳಿದುಕೊಂಡ ಧೀರನು ಶೋಕಿಸದೆ ಇರುವನು" (೨-೨೨) ಎಂದೂ ಹೇಳಿ "(ಇವನು ಯಾರಿಗೂ) ಬೆಳಗುವದಿಲ್ಲ"- ಎಂದು (ಈಗ) ಹೇಳಿದ್ದು (ಒಂದಕ್ಕೊಂದು) ವಿರುದ್ಧವಲ್ಲವೆ?

(ಪರಿಹಾರ) ಹಾಗಲ್ಲ. ಬುದ್ಧಿಸಂಸ್ಕಾರವಿಲ್ಲದವರಿಗೆ ತಿಳಿಯುವದಿಲ್ಲವಾದ್ದರಿಂದ ಬೆಳಗುವದಿಲ್ಲವೆಂದು ಹೇಳಿರುತ್ತದೆ; ಆದರೆ ಸಂಸ್ಕಾರವನ್ನು ಹೊಂದಿ ಮೊನೆಯಾಗಿರುವ ಎಂದರೆ- ಮೊನೆಯಾದಂತೆ ಏಕಾಗ್ರತೆಯನ್ನು ಹೊಂದಿರುವ- ಸೂಕ್ಷ್ಮವಾದ (ಆತ್ಮ)ವಸ್ತುವನ್ನು ಪರೀಕ್ಷಿಸುವದರಲ್ಲಿಯೇ ಆಸಕ್ತಿಯುಳ್ಳ, ಸೂಕ್ಷ್ಮವಾದ ಬುದ್ಧಿಗೆ ತೋರಿಯೇ ತೋರುತ್ತದೆ. ಯಾರಿಗೆ ತೋರುತ್ತದೆ? ಎಂದರೆ ಸೂಕ್ಷ್ಮದರ್ಶಿಗಳಿಗೆ; "ಇಂದ್ರಿಯಗಳಿಗಿಂತ ಅರ್ಥಗಳು ಹೆಚ್ಚಿನವು" (೧-೩-೧೦) ಎಂದು ಮೊದಲಾಗಿ ಹೇಳಿದ ರೀತಿಯಿಂದ ಒಂದಕ್ಕಿಂತ ಒಂದು ಸೂಕ್ಷ್ಮವಾಗಿರುವ ವಸ್ತುಗಳನ್ನು ನೋಡಿ ಅತ್ಯಂತಸೂಕ್ಷ್ಮವಾಗಿರುವ ವಸ್ತುಗಳನ್ನು ಕಂಡುಕೊಳ್ಳುವ ಸ್ವಭಾವವುಳ್ಳವರೇ ಸೂಕ್ಷ್ಮದರ್ಶಿಗಳು; ಅಂಥ ಸೂಕ್ಷ್ಮದರ್ಶಿಗಳಾದ ಪಂಡಿತರಿಗೆ (ತೋರುತ್ತದೆ) ಎಂದಭಿಪ್ರಾಯ.

---

* ಅವಿದ್ಯೆ, ಮಾಯೆ- ಎಂದು ಕರೆಯಲ್ಪಡುವ ಒಂದಾನೊಂದು ಶಕ್ತಿಯು ಇರುವದೆಂಬುದಕ್ಕೆ ಈ ಭಾಷ್ಯವನ್ನು ಕೆಲವರು ಪ್ರಮಾಣವಾಗಿ ಉಪಯೋಗಿಸುತ್ತಾರೆ; ಆದರೆ ಹೊರದೃಷ್ಟಿಯುಳ್ಳವರಿಗೆ ಆತ್ಮಸ್ವರೂಪವು ಗೊತ್ತಾಗುವದಿಲ್ಲವೆಂಬುದೇ ಈ ಪ್ರಕರಣದ ಅರ್ಥವೆಂಬುದು ಸ್ಪಷ್ಟವು.

## ಆತ್ಮನನ್ನು ತಿಳಿಯುವದಕ್ಕೆ ಬೇಕಾದ ಸೂಕ್ಷ್ಮಬುದ್ಧಿ

**ತಿಳಿದಾತನು ವಾಕ್ಕನ್ನು ಮನಸ್ಸಿನಲ್ಲಿ ನಿಲ್ಲಿಸಬೇಕು; ಅದನ್ನು ಜ್ಞಾನವೆಂಬ ಆತ್ಮನಲ್ಲಿ ನಿಲ್ಲಿಸಬೇಕು; ಜ್ಞಾನವನ್ನು ಮಹಾನ್ ಎಂಬ ಆತ್ಮನಲ್ಲಿ ನಿಲ್ಲಿಸಬೇಕು; ಆ ಆತ್ಮನನ್ನು ಶಾಂತಾತ್ಮನಲ್ಲಿ ನಿಲ್ಲಿಸಬೇಕು.**

ಈಗ ಅದನ್ನು ತಿಳಿಯುವದಕ್ಕೆ ಸಾಧನವನ್ನು ಹೇಳುತ್ತಾನೆ. ತಿಳಿದ ವಿವೇಕಿಯು ನಿಲ್ಲಿಸಿಕೊಳ್ಳಬೇಕು, ಉಪಸಂಹಾರಮಾಡಿಕೊಳ್ಳಬೇಕು ಎಂದರ್ಥ. ಏನನ್ನು? ವಾಕ್ಕನ್ನು ಎಂದರೆ ವಾಗಿಂದ್ರಿಯವನ್ನು ಎಂದರ್ಥ. ಇಲ್ಲಿ ವಾಕ್ಕು ಎಂಬುದು ಎಲ್ಲಾ ಇಂದ್ರಿಯಗಳನ್ನೂ ತಿಳಿಸುವದಕ್ಕೆ ಉಪಲಕ್ಷಣವಾಗಿ* ಬಂದಿರುತ್ತದೆ. ಎಲ್ಲಿ ನಿಲ್ಲಿಸಬೇಕು? ಎಂದರೆ ಮನಸ್ಸಿನಲ್ಲಿ. ಮೂಲದಲ್ಲಿ ('ಮನಸಿ' ಎಂಬುದಕ್ಕೆ ಬದಲು) 'ಮನಸೀ' ಎಂದು ದೀರ್ಘವಿರುವದು ವೈದಿಕಪ್ರಯೋಗ. ಆ ಮನಸ್ಸನ್ನು ಜ್ಞಾನವೆಂಬ ಆತ್ಮನಲ್ಲಿ ಎಂದರೆ ಪ್ರಕಾಶಸ್ವರೂಪವಾದ ಬುದ್ಧಿಯೆಂಬ ಆತ್ಮನಲ್ಲಿ ನಿಲ್ಲಿಸಿಕೊಳ್ಳಬೇಕು. ಬುದ್ಧಿಯು ಮನಸ್ಸೇ ಮುಂತಾದ ಕರಣಗಳನ್ನು ವ್ಯಾಪಿಸಿಕೊಂಡಿರುವದರಿಂದ ಅದು ಅವುಗಳಿಗೆ ಒಳಗಿನ ಆತ್ಮವು†. ಜ್ಞಾನವನ್ನು ಎಂದರೆ ಈ ಬುದ್ಧಿಯನ್ನು ಮಹತ್ತೆಂಬ ಆತ್ಮನಲ್ಲಿ ಎಂದರೆ ಮೊದಲು ಹುಟ್ಟಿದ ಆತ್ಮನಲ್ಲಿ ನಿಲ್ಲಿಸಿಕೊಳ್ಳಬೇಕು; ಮೊದಲು ಹುಟ್ಟಿದ **ಮಹತ್ತತ್ತ್ವ**ದಂತೆ ತನ್ನ ಬುದ್ಧಿಯನ್ನು ಸ್ವಚ್ಛವಾಗಿ ಮಾಡಿಕೊಳ್ಳಬೇಕು ಎಂದರ್ಥ. ಆ ಮಹತ್ತೆಂಬ ಆತ್ಮನನ್ನು ಶಾಂತಾತ್ಮನಲ್ಲಿ ಎಂದರೆ ಎಲ್ಲಾ ವಿಶೇಷಗಳೂ ಅಡಗಿರುವ ರೂಪವುಳ್ಳವನಾಗಿಯೂ ಮಾರ್ಪಾಡುಗಳೇನೂ ಇಲ್ಲದವನಾಗಿಯೂ ಎಲ್ಲಕ್ಕೂ ಒಳಗಿನವನಾಗಿಯೂ ಇರುವ ಬುದ್ಧಿಯ ಎಲ್ಲಾ ಪ್ರತ್ಯಯಗಳಿಗೂ ಸಾಕ್ಷಿಯಾದ ಮುಖ್ಯಾತ್ಮನಲ್ಲಿ‡ ನಿಲ್ಲಿಸಿಕೊಳ್ಳಬೇಕು.

---

* ಇಂದ್ರಿಯವೃತ್ತಿಗಳನ್ನೆಲ್ಲ ಮನಸ್ಸಿನಿಂದಲೇ ಬಿಗಿಹಿಡಿಯಬೇಕೆಂದು ತಾತ್ಪರ್ಯ

† ಆತ್ಮ ಎಂಬ ಮಾತನ್ನು ಇಲ್ಲಿ ವ್ಯವಹಾರದೃಷ್ಟಿಯಿಂದ ಉಪಯೋಗಿಸಿರುತ್ತದೆ. ವ್ಯವಹಾರದಲ್ಲಿ ಒಂದಲ್ಲದಿದ್ದರೆ ಒಂದು ಕಾಲದಲ್ಲಿ ಜನರು ದೇಹಾದಿಗಳನ್ನೇ ಆತ್ಮವೆಂದು ಭಾವಿಸಿ ವ್ಯವಹರಿಸುವರು. ಆ ದೃಷ್ಟಿಯಿಂದ ಅವು ಅವರಿಗೆ ಆತ್ಮವು. ಅಥವಾ ಯಾವದು ಯಾವದನ್ನು ವ್ಯಾಪಿಸಿಕೊಂಡಿರುವದೋ ಅದು ಅದರ ಆತ್ಮವು, ಉದಾಹರಣೆಗೆ ಮಣ್ಣು ಕಾರಣವಾಗಿ ಮಡಕೆಯೇ ಮುಂತಾದ ಕಾರ್ಯಗಳನ್ನು ವ್ಯಾಪಿಸಿಕೊಂಡಿರುವದರಿಂದ ಅವುಗಳಿಗೆಲ್ಲ ಮಣ್ಣು ಆತ್ಮವಾಗಬಹುದು. ಇದರಂತೆ ಮನಸ್ಸು ದೇಹೇಂದ್ರಿಯಗಳಿಗೂ, ಬುದ್ಧಿಯು ಮನಸ್ಸು ಮುಂತಾದದ್ದಕ್ಕೂ ಆತ್ಮವಾಗಿರುವದು.

‡ ಮಿಕ್ಕ ಆತ್ಮಗಳು ಆತ್ಮದಂತೆ ತೋರುವವೇ ಹೊರತು ನಿಜವಾಗಿ ಆತ್ಮವಲ್ಲ, ಆದ್ದರಿಂದ ಅವು ಮಿಥ್ಯಾತ್ಮ, ಸಾಕ್ಷಿಯು ನಮ್ಮ ನಿಜವಾದ ಆತ್ಮವಾದ್ದರಿಂದ ಮುಖ್ಯಾತ್ಮ.

**ಏಳಿರಿ, ಎಚ್ಚರವಾಗಿರಿ, ಶ್ರೇಷ್ಠರನ್ನು ಸೇರಿ ತಿಳಿದುಕೊಳ್ಳಿರಿ; ಈ ಮಾರ್ಗವು ಹರಿತವಾದ ಚೂರಿಯ ಅಲುಗಿನಂತೆ ದಾಟಲಶಕ್ಯವಾದದ್ದು, ನಡೆಯಲಶಕ್ಯವಾದದ್ದು ಎಂದು ತಿಳಿದವರು ಹೇಳುವರು. ॥ ೧೪ ॥**

ಹೀಗೆ ಮಿಥ್ಯಾಜ್ಞಾನದಿಂದ ಹಬ್ಬಿರುವ ಕ್ರಿಯೆ, ಕಾರಕ, ಫಲ– ಇವುಗಳ ರೂಪವಾದ ನಾಮರೂಪಕರ್ಮಗಳೆಂಬ ಮೂರನ್ನೂ ತಮ್ಮ ಆತ್ಮದ ನಿಜವಾದ ಸ್ವರೂಪವನ್ನು ಅರಿತುಕೊಂಡು– ಬಿಸಿಲು, ಕಿರಣ, ಹಗ್ಗ, ಆಕಾಶ ಎಂದು ಸ್ವರೂಪವನ್ನು ಅರಿತುಕೊಂಡು ಬಿಸಿಲ್ಗುದುರೆಯ ನೀರು, ಹಗ್ಗದ ಹಾವು, ಆಕಾಶದ ಕಶ್ಮಲ ಇವುಗಳನ್ನು ಲಯಮಾಡುವಂತೆ– ಎಲ್ಲವನ್ನೂ ಪುರುಷನೆಂಬ ಆತ್ಮನಲ್ಲಿ ಲಯಮಾಡಿಕೊಂಡು* ತನ್ನಲ್ಲಿ ತಾನಿದ್ದುಕೊಂಡು ಮನಸ್ಸಿನಲ್ಲಿ ತೀರ ಶಾಂತಿಯನ್ನು ಹೊಂದಿದರೆ ಕೃತಕೃತ್ಯನಾಗುತ್ತಾನೆ.

ಹೀಗಿರುವದರಿಂದ **ಅನಾದಿಯಾದ**† **ಅವಿದ್ಯೆಯಿಂದ** ನಿದ್ರೆಮಾಡುತ್ತಿರುವ ಪ್ರಾಣಿಗಳಿರ, ಆತ್ಮನನ್ನು ಕಾಣುವದಕ್ಕಾಗಿ ಏಳಿರಿ, ಆತ್ಮಜ್ಞಾನದ ಕಡೆಗೆ ತಿರುಗಿರಿ; ಎಚ್ಚರಗೊಳ್ಳಿರಿ, ಭಯಂಕರವಾದ ಎಲ್ಲಾ ಅನರ್ಥಗಳಿಗೂ ಬೀಜವಾಗಿರುವ‡ ಅಜ್ಞಾನವೆಂಬ ನಿದ್ರೆಯನ್ನು ನಾಶಮಾಡಿಕೊಳ್ಳಿರಿ. ಹೇಗೆ? ಎಂದರೆ, ಶ್ರೇಷ್ಠರಾದ ಆ (ಆತ್ಮನನ್ನು) ಬಲ್ಲ ಹೆಚ್ಚಿನ ಆಚಾರ್ಯರ ಬಳಿಗೆ ಹೋಗಿ ಅವರು ಹೇಳಿಕೊಡುವಂತೆ 'ಎಲ್ಲಕ್ಕೂ ಒಳಗಿರುವ ಆತ್ಮನೇ ನಾನು' ಎಂದು ತಿಳಿದುಕೊಳ್ಳಿರಿ, ನಿಶ್ಚಯಿಸಿಕೊಳ್ಳಿರಿ, ಉಪೇಕ್ಷೆಮಾಡಲೇ ಬಾರದು. ಹೀಗೆಂದು ಶ್ರುತಿಯು ದಯೆಯಿಂದ ತಾಯಿಯ ಹಾಗೆ (ನಮಗೆ) ತಿಳಿಸುತ್ತಿರುವದು; ಏಕೆಂದರೆ ತಿಳಿಯಬೇಕಾಗಿರುವ ಆತ್ಮನು ಬಲುಸೂಕ್ಷ್ಮವಾದ ಬುದ್ಧಿಗೆ ಮಾತ್ರ ಗೋಚರನಾಗುವನು.

ಏತರ ಹಾಗೆ ಬುದ್ಧಿಯು ಸೂಕ್ಷ್ಮವಾಗಿರಬೇಕು? ಎಂದರೆ, ಹೇಳುತ್ತಾನೆ. ಚೂರಿಯ ಅಲುಗು ಮಸೆದು ಹರಿತವಾಗಿದ್ದರೆ ಅದರ ಮೇಲೆ ಕಾಲುಗಳನ್ನಿಟ್ಟು

* ಲಯಮಾಡುವದು ಒಂದಾನೊಂದು ಉಪಾಸನಾವಿಶೇಷವಲ್ಲ, ಆಯಾ ರೂಪದಲ್ಲಿ ಅರಿತುಕೊಳ್ಳುವ ಜ್ಞಾನವೇ

† ಅವಿದ್ಯೆಯು 'ಅನಾದಿ' ಎಂದದ್ದರಿಂದ "ಜೀವರುಗಳನ್ನು ಆಶ್ರಯಿಸಿದ್ದಲ್ಲ, ಬಹುಕಾಲದಿಂದ ಇದ್ದುಕೊಂಡಿರುವದು- ಎಂದು ಹೇಳಿದಂತಾಯಿತು"– ಎಂದು ಈಗಿನ ಕೆಲವರು ಅಭಿಪ್ರಾಯಪಡುವರು. ಇದು ಸರಿಯಲ್ಲ. ಬಹು ಜನ್ಮಗಳಿಂದಲೂ ಆತ್ಮನನ್ನು ಅರಿಯದೆ ಇದೇವೆಂಬುದೇ ಇಲ್ಲಿ ಭಾಷ್ಯದ ತಾತ್ಪರ್ಯವು.

‡ ತತ್ತ್ವವನ್ನು ತಿಳಿದುಕೊಳ್ಳದೆ ಇರುವದೆಂಬ ನಿದ್ರೆಯೇ ತಪ್ಪಾಗಿ ತಿಳಿದುಕೊಳ್ಳುವದೆಂಬ ಅನರ್ಥಕ್ಕೆ ಕಾರಣವಾಗಿರುವದು. ಕಾರಿಕೆ(೧–೧೩)ಯನ್ನು ನೋಡಿ

ನಡೆಯುವದು ಬಲುಕಷ್ಟವಾಗಿರುವದು ; ಅದರಂತೆ ನಡೆಯಲಸಾಧ್ಯವಾದದ್ದು,— ಈ ತತ್ತ್ವಜ್ಞಾನವೆಂಬ ಮಾರ್ಗವನ್ನು ಸಂಪಾದಿಸುವದು ಕಷ್ಟ- ಎಂದು ನಿಜವನ್ನು ತಿಳಿದ ಜ್ಞಾನಿಗಳು ಹೇಳುವರು. ಜ್ಞೇಯವಾದ ಆತ್ಮವು ಬಲುಸೂಕ್ಷ್ಮವಾಗಿರುವದರಿಂದ ಅದರ ವಿಷಯವಾದ ಜ್ಞಾನದ ದಾರಿಯನ್ನು * ಪಡೆಯುವದು ಬಲು ಕಷ್ಟವೆಂದು ಹೇಳುವರು ಎಂದು ಅಭಿಪ್ರಾಯ. || ೧೪ ||

ಹಾಗಾದರೆ ತಿಳಿಯಬೇಕಾದ (ಈ ಆತ್ಮನು) ಬಲುಸೂಕ್ಷ್ಮನೆಂಬುದು ಹೇಗೆ? ಎಂದರೆ ಹೇಳುತ್ತೇನೆ. ಈ ಪೃಥಿವಿಯು ಶಬ್ದ, ಸ್ಪರ್ಶ, ರೂಪ, ರಸ, ಗಂಧ- ಇವುಗಳೆಲ್ಲ ಸೇರಿ ಎಲ್ಲಾ ಇಂದ್ರಿಯಗಳಿಗೂ ವಿಷಯವಾಗಿರುವದರಿಂದ ಸ್ಥೂಲವಾಗಿದೆಯಷ್ಟೆ; ಶರೀರವೂ ಹೀಗೆಯೇ (ಸ್ಥೂಲವಾದದ್ದು). ಗಂಧ ಮುಂತಾದ ಒಂದೊಂದು ಗುಣವು ಕಡಿಮೆಯಾದ ಹಾಗೆಲ್ಲಾ ಅಪ್ಪು ಮುಂತಾಗಿ ಆಕಾಶದ ವರೆಗೂ ಇರುವ (ವಸ್ತುಗಳು) ಒಂದಕ್ಕಿಂತ ಒಂದು ಹೆಚ್ಚು ಸೂಕ್ಷ್ಮವಾಗಿಯೂ ಹೆಚ್ಚು ವ್ಯಾಪಕವಾಗಿಯೂ ಹೆಚ್ಚು ಶುದ್ಧವಾಗಿಯೂ ಹೆಚ್ಚು ನಿತ್ಯವಾಗಿಯೂ ಇರುವದು ಕಂಡಿರುತ್ತದೆ. ಗಂಧವು ಮೊದಲಾಗಿ ಶಬ್ದದವರೆಗಿನ ಸ್ಥೂಲವಾಗಿರುವ ವಿಕಾರಗಳು (ಒಂದೂ) ಯಾವ ಆತ್ಮನಲ್ಲಿಲ್ಲವೋ ಅವನು ಎಲ್ಲಕ್ಕೂ ಹೆಚ್ಚಾಗಿ ಇನ್ನಿಲ್ಲದಷ್ಟು ಸೂಕ್ಷ್ಮನು ಎಂದು ಮುಂತಾಗಿ ಹೇಳತಕ್ಕದ್ದೇನಿದೆ?— ಎಂದು (ಈ ಮುಂದಿನ) ಶ್ರುತಿಯು ತೋರಿಸುವದು:—

**ಶಬ್ದವಿಲ್ಲದ, ಸ್ಪರ್ಶವಿಲ್ಲದ, ರೂಪವಿಲ್ಲದ, ಅವ್ಯಯವಾದ, ಮತ್ತು ರಸವಿಲ್ಲದ, ನಿತ್ಯವಾದ, ಗಂಧವಿಲ್ಲದ, ಅನಾದಿಯಾಗಿರುವ, ಅನಂತವಾಗಿರುವ, ಮಹತ್ತಿಗೂ ಬೇರೆಯದಾದ, ನಿಶ್ಚಲವಾದ ಯಾವ (ಆತ್ಮತತ್ತ್ವವುಂಟೋ) ಅದನ್ನು ತಿಳಿದುಕೊಂಡರೆ ಮೃತ್ಯುಮುಖದಿಂದ ಬಿಡುಗಡೆಯಾಗುವನು. || ೧೫ ||**

"ಶಬ್ದವಿಲ್ಲದ, ಸ್ಪರ್ಶವಿಲ್ಲದ, ರೂಪವಿಲ್ಲದ, ಅವ್ಯಯವಾದ, ಮತ್ತು ರಸವಿಲ್ಲದ, ನಿತ್ಯವಾದ, ಗಂಧವಿಲ್ಲದ" ಎಂಬುದರ (ಅಭಿಪ್ರಾಯವನ್ನು ಮೇಲೆ ಅವತರಣಿಕೆಯಲ್ಲಿ) ವಿವರಿಸಿರುತ್ತದೆ. (ಈ) ಬ್ರಹ್ಮವು ಅವ್ಯಯವು; ಏಕೆಂದರೆ ಶಬ್ದವೇ ಮುಂತಾದದ್ದಿರುವದು ಯಾವದೋ ಅದು ನವೆಯುತ್ತದೆ; ಇದರಲ್ಲಿ ಶಬ್ದವೇ ಮುಂತಾದದ್ದು ಒಂದೂ ಇಲ್ಲದ್ದರಿಂದ ಅವ್ಯಯವು, ವ್ಯಯವಾಗುವದಿಲ್ಲ, ನವೆಯುವದಿಲ್ಲ. ಆದ್ದರಿಂದಲೇ ಇದು ನಿತ್ಯವಾದದ್ದು. ಏಕೆಂದರೆ ಯಾವುದು ವ್ಯಯವಾಗುವದೋ ಅದು ಅನಿತ್ಯವು. ಇದು ವ್ಯಯವಾಗುವದಿಲ್ಲ, ಆದ್ದರಿಂದ ನಿತ್ಯ.

---

* 'ದಾರಿ' ಎಂದದ್ದರಿಂದ ಎಲ್ಲಿಗೋ ಹೋಗಿ ಬ್ರಹ್ಮವನ್ನು ಪಡೆಯಬೇಕೆಂದು ತಿಳಿಯಬಾರದು; ಜ್ಞಾನವೆಂಬ ಉಪಾಯವನ್ನೇ ದಾರಿಯೆಂದು ಕರೆದಿರುತ್ತದೆ— ಎಂದು ಭಾವ.

ಈ ಕಾರಣದಿಂದಲೂ ನಿತ್ಯವಾದದ್ದು: ಏಕೆಂದರೆ ಅದು ಅನಾದಿ; ಇದಕ್ಕೆ ಆದಿ ಎಂದರೆ (ಮುತ್ತೊಂದು) ಕಾರಣವು ಇಲ್ಲದ್ದರಿಂದ ಇದು ಅನಾದಿ(ಯೆನಿಸುವದು) ಯಾವದು ಆದಿಯುಳ್ಳದ್ದೋ ಅದು ಕಾರ್ಯವಾಗಿರುವದರಿಂದ ತನ್ನ ಕಾರಣದಲ್ಲಿ ಅದು ಲಯವಾಗುವದು; ಉದಾಹರಣೆಗೆ ಪೃಥಿವಿ ಮುಂತಾದವು (ಕಾರ್ಯವಾಗಿರುವದರಿಂದ ತಮ್ಮ ಕಾರಣದಲ್ಲಿ* ಲಯವಾಗುತ್ತವೆ). ಆದರೆ ಈ (ಬ್ರಹ್ಮವು) ಎಲ್ಲಕ್ಕೂ ಕಾರಣವಾಗಿರುವದರಿಂದ† ಕಾರ್ಯವಲ್ಲ. ಕಾರ್ಯವಲ್ಲದ್ದರಿಂದ ನಿತ್ಯವಾಗಿರುವದು, ಇದು ಲಯವಾಗುವದಕ್ಕೆ ಇದಕ್ಕೆ ಬೇರೊಂದು ಕಾರಣವಿಲ್ಲ. ಮತ್ತು ಇದು ಅನಂತವು, ಇದಕ್ಕೆ ಅಂತವಿಲ್ಲ, ಎಂದರೆ ಬೇರೆ ಕಾರ್ಯವಿಲ್ಲ. ಬಾಳೆ ಮುಂತಾದದ್ದು ಹಣ್ಣು ಮುಂತಾದ ಕಾರ್ಯವನ್ನು ಉಂಟುಮಾಡಿದ ಮೇಲೆ (ನಾಶವಾಗುವದರಿಂದ) ಅನಿತ್ಯವಾಗಿರುವದು ಕಂಡಿದೆಯಷ್ಟೆ; ಆದರೆ ಬ್ರಹ್ಮಕ್ಕೆ ಹಾಗೂ ಅಂತವಿಲ್ಲ,‡ ಆದ್ದರಿಂದಲೂ ಇದು ನಿತ್ಯವಾಗಿದೆ. ಇದು ಮಹತ್ತಿಗೂ ಬೇರೆ, ಎಂದರೆ ಬುದ್ಧಿ§ ಎಂಬ ಹೆಸರಿನ ಮಹತ್ತಿಗಿಂತಲೂ ಬೇರೆಯಾಗಿದೆ; ಏಕೆಂದರೆ ನಿತ್ಯವಾದ ಜ್ಞಾನದ ಸ್ವರೂಪವಾಗಿದೆ. ಬ್ರಹ್ಮವು ಎಲ್ಲಾ ಭೂತಗಳಿಗೂ ಆತ್ಮವಾಗಿರುವದರಿಂದ ಇದು ಎಲ್ಲಕ್ಕೂ ಸಾಕ್ಷಿಯಾಗಿರುತ್ತದೆ.|| "ಈ ಆತ್ಮನು ಎಲ್ಲಾ ಪ್ರಾಣಿಗಳಲ್ಲಿಯೂ (ಅಡಗಿರುವನು)" ಎಂದು ಹಿಂದೆಯೇ (೧೨ನೆಯ ಮಂತ್ರದಲ್ಲಿ) ಹೇಳಿರುತ್ತದೆ; ಆದ್ದರಿಂದ (ಎಲ್ಲಾ ಪ್ರಾಣಿಗಳಿಗೂ ಇದು ಆತ್ಮವಾಗಿರುವದು.) ಮತ್ತು ಈ ಬ್ರಹ್ಮವು ನಿಶ್ಚಲವಾಗಿರುವದು, ಎಂದರೆ ಕೂಟಸ್ಥನಿತ್ಯವಾಗಿರುವದೇ ** ಹೊರತು ಪೃಥಿವಿ ಮುಂತಾದವುಗಳ ಹಾಗೆ ಒಂದಕ್ಕೆ ಹೋಲಿಸಿದರೆ ನಿತ್ಯವಾಗಿರುವದಲ್ಲ.

---

* ಪೃಥಿವಿ ಅಪ್ಪಿನಲ್ಲಿ, ಅಪ್ಪು ವಾಯುವಿನಲ್ಲಿ— ಇತ್ಯಾದಿ.

† ಮಣ್ಣು ಮುಂತಾದದ್ದು ಮಡಕೆಯೇ ಮುಂತಾದವುಗಳಿಗೆ ಕಾರಣವಾಗಿರುವಂತೆ ಬ್ರಹ್ಮವು ಶಬ್ದಾದಿಗಳಿಗೆ ಕಾರಣವಾಗಿಲ್ಲ; ನಿಜವಾಗಿ ಶಬ್ದಾದಿಗಳು ಬ್ರಹ್ಮಕ್ಕಿಂತ ಬೇರೆಯಾಗಿ ಇಲ್ಲವೇ ಇಲ್ಲ.

‡ ಬ್ರಹ್ಮವು ಶಬ್ದವೇ ಮುಂತಾದ ಕಾರ್ಯವಾಗಿ ಪರಿಣಮಿಸಿದರೆ ಬ್ರಹ್ಮವೇ ಇಲ್ಲದಂತಾಗಿ ಬಿಡಬಹುದು, ಆದರೆ ಬ್ರಹ್ಮವು ಬ್ರಹ್ಮವೇ ಆಗಿದ್ದು ಕಾರ್ಯದಂತೆ ತೋರುತ್ತಿರುವದರಿಂದ ಇದಕ್ಕೆ ನಾಶವಿಲ್ಲ.

§ ಇದು ಸಮಷ್ಟಿಬುದ್ಧಿ, ಬಿಡಿಬಿಡಿಯಾದ ಬುದ್ಧಿಗಳ ಒಟ್ಟು.

|| ಬುದ್ಧಿಯು ಬೇರ್ಪಡುತ್ತಲೇ ಇರುವದು ನಮ್ಮ ನಮ್ಮ ಅನುಭವದಲ್ಲಿ ಇದೆ. ಒಂದೊಂದು ಕಾಲದಲ್ಲಿ ಒಂದೊಂದು ಬುದ್ಧಿ ಇರುವದು, ಇದನ್ನೆಲ್ಲ ನೋಡುವ ಆತ್ಮವು ಒಂದೇ ಸ್ವರೂಪದಲ್ಲಿರುವದು.

** ಮಾರ್ಪಾಡುಗಳಿಲ್ಲದೆ ನಿತ್ಯವಾಗಿರುವದಕ್ಕೆ ಕೂಟಸ್ಥನಿತ್ಯವೆನ್ನುವನು. ಪೃಥಿವಿ ಮುಂತಾದವು ನಿತ್ಯವೆಂದು ಕೆಲವರು ಹೇಳುವರು; ಆದರೆ ಅವಕ್ಕೆ ಮಾರ್ಪಾಡುಗಳಿರುವವು, ಆದ್ದರಿಂದ ಅವು ಪರಿಣಾಮಿನಿತ್ಯವೆನಿಸಿವೆ.

ಹೀಗಿರುವ ಈ ಬ್ರಹ್ಮಾತ್ಮವನ್ನು* ತಿಳಿದುಕೊಂಡರೆ, ಅದೇ ತನ್ನ ಆತ್ಮವೆಂದು ಅರಿತರೆ, ಮೃತ್ಯುವಿನ ಬಾಯಿಯಿಂದ, ಎಂದರೆ ಅವಿದ್ಯೆ, ಕಾಮ, ಕರ್ಮ-ಎಂಬ ಮರಣದ ವಿಷಯದಿಂದ ಬಿಡುಗಡೆಯಾಗುವನು, ತಪ್ಪಿಸಿಕೊಳ್ಳುತ್ತಾನೆ.

**ಮೃತ್ಯುವು ಹೇಳಿದ (ಈ) ಸನಾತನವಾದ ನಾಚಿಕೇತೋಪಾಖ್ಯಾನವನ್ನು ಹೇಳಿದ ಮತ್ತು ಕೇಳಿದ ಪಂಡಿತನು ಬ್ರಹ್ಮಲೋಕದಲ್ಲಿ ಪೂಜ್ಯನಾಗುವನು. || ೧೬ ||**

ಪ್ರಾರಂಭಮಾಡಿರುವ ವಿಜ್ಞಾನವನ್ನು ಹೊಗಳುವದಕ್ಕಾಗಿ ಶ್ರುತಿಯು ಹೀಗೆಂದು ಹೇಳಿದೆ. ನಾಚಿಕೇತೋಪಾಖ್ಯಾನವು ಎಂದರೆ ನಚಿಕೇತನು ಪಡೆದದ್ದು ಮೃತ್ಯು ಹೇಳಿದ ಮೂರು ವಲ್ಲಿಗಳ ರೂಪದಲ್ಲಿರುವ ಈ ಉಪಾಖ್ಯಾನವು ಸನಾತನವಾದದ್ದು, ವೇದದಲ್ಲಿರುವದಾದ್ದರಿಂದ ಬಹುಪುರಾತನವಾದದ್ದು. ಇದನ್ನು ಬ್ರಾಹ್ಮಣರಿಗೆ† ಹೇಳಿದವನೂ ಆಚಾರ್ಯರಿಂದ‡ ಕೇಳಿದ ಪಂಡಿತನೂ **ಬ್ರಹ್ಮಲೋಕ**ದಲ್ಲಿ ಎಂದರೆ ಬ್ರಹ್ಮ§ ಎಂಬ ಲೋಕದಲ್ಲಿ ಪೂಜ್ಯನಾಗುವನು|| ಎಂದರೆ ಆತ್ಮನಾಗಿ ಉಪಾಸ್ಯನಾಗುವನು.

**ಯಾವನು ಪ್ರಯತನಾಗಿ ಈ ಪರಮಗುಹ್ಯವನ್ನು ಬ್ರಹ್ಮಸಭೆಯಲ್ಲಿ ಶ್ರವಣಮಾಡಿಸುತ್ತಾನೋ ಅಥವಾ ಶ್ರಾದ್ಧಕಾಲದಲ್ಲಿ (ಭೋಜನಮಾಡುತ್ತಿರುವವರಿಗೆ ಶ್ರವಣಮಾಡಿಸುತ್ತಾನೋ) ಅದು ಅನಂತವಾಗುವದು, ಅನಂತವಾಗುವದು. || ೧೭ ||**

ಯಾವನೇ ಆಗಲಿ ಪ್ರಯತನಾಗಿ ಎಂದರೆ ಶುಚಿಯಾಗಿ ಈ ಪರಮಗುಹ್ಯವನ್ನು ಹೆಚ್ಚಿನ ರಹಸ್ಯವಾದ ಈ ಗ್ರಂಥವನ್ನು, ಗ್ರಂಥರೂಪದಿಂದಲೂ ಅರ್ಥ

* ಮೇಲೆ ವರ್ಣಿಸಿರುವ ಬ್ರಹ್ಮವೇ ನಮ್ಮ ಆತ್ಮ, ಆದ್ದರಿಂದ ಇದನ್ನು ಬ್ರಹ್ಮಾತ್ಮವನ್ನುವರು. ನಾವು ವ್ಯವಹಾರದಲ್ಲಿ ತಿಳಿದುಕೊಂಡಿರುವ ಆತ್ಮವು ಜೀವಾತ್ಮ, ಅದು ನಮ್ಮ ನಿಜವಾದ ಸ್ವರೂಪವಲ್ಲ.

† ಬ್ರಾಹ್ಮಣರಿಗೇ ವೇದದ ಮೂಲಕ ಶ್ರವಣಮಾಡುವ ಮುಖ್ಯವಾದ ಅಧಿಕಾರವಿರುವದು.

‡ ಆಚಾರ್ಯರಿಂದ ಶ್ರವಣಮಾಡಿದರೇ ಫಲವಾದೀತೇ ಹೊರತು ತಾನೇ ಶಾಸ್ತ್ರದಲ್ಲಿ ಓದಿಕೊಂಡ ಮಾತ್ರದಿಂದ ಬ್ರಹ್ಮಸ್ವರೂಪವು ಗೊತ್ತಾಗುವ ಹಾಗಿಲ್ಲ.

§ ಬ್ರಹ್ಮಲೋಕಕ್ಕೆ ಹೋಗಿ ಫಲವನ್ನು ಹೊಂದುತ್ತಾನೆಂದು ಅರ್ಥವಲ್ಲ, ಕರ್ಮಗಳಿಗೂ ಉಪಾಸನೆಗಳಿಗೂ ಒಂದೊಂದು ಲೋಕವೇ ಫಲವಾಗುವ ಹಾಗೆ ಜ್ಞಾನಕ್ಕೂ ಒಂದು ಬೇರೆ ಲೋಕವು ಫಲವಲ್ಲ. ಏಕೆಂದರೆ 'ಬ್ರಹ್ಮವೇ ಇವರಿಗೆ ಲೋಕ' ಎಂದು ಶ್ರುತಿ ಹೇಳುತ್ತದೆ- ಎಂದು ಭಾವ.

|| ಬ್ರಹ್ಮವು ಎಲ್ಲರಿಗೂ ಉಪಾಸ್ಯವಷ್ಟೆ; ಬ್ರಹ್ಮವೇ ತನ್ನ ಸ್ವರೂಪವಾದರೆ ತಾನೇ ಉಪಾಸನಾದಂತಾಗುವದು.

ರೂಪದಿಂದಲೂ ಬ್ರಹ್ಮಸಭೆಯಲ್ಲಿ ಎಂದರೆ ಬ್ರಾಹ್ಮಣರ ಸಭೆಯಲ್ಲಿಯಾಗಲಿ ಶ್ರಾದ್ಧದಲ್ಲಿ (ಬ್ರಾಹ್ಮಣರು) ಭೋಜನಮಾಡುತ್ತಿರುವಾಗಲಾಗಲಿ ಶ್ರವಣಮಾಡಿಸಿದರೆ (ಅವನು ಮಾಡಿದ) ಆ (ಕಾರ್ಯವೂ) ಆ ಶ್ರಾದ್ಧವೂ ಅನಂತವಾಗುವದು ಎಂದರೆ ಅನಂತವಾದ ಫಲವನ್ನು* ಕೊಡುವದಾಗುವದು. (ಅನಂತವಾಗುವದು ಎಂಬುದನ್ನು) ಎರಡು ಸಲ ಹೇಳಿದ್ದು ಅಧ್ಯಾಯವು ಮುಗಿಯಿತೆಂಬುದನ್ನು ತಿಳಿಸುವದಕ್ಕೆ.

---

# ಎರಡನೆಯ ಅಧ್ಯಾಯ–ಒಂದನೆಯ ವಲ್ಲಿ

## ಹೊರಗಿನ ವಿಷಯಗಳ ಕಡೆ ಇರುವ ದೃಷ್ಟಿಯೇ ಆತ್ಮದೃಷ್ಟಿಗೆ ಅಡ್ಡಿ

'ಈ ಆತ್ಮನು ಸರ್ವಭೂತಗಳಲ್ಲಿಯೂ ಗೂಢನಾಗಿರುವದರಿಂದ (ಸಾಮಾನ್ಯರಿಗೆ) ತೋರುವದಿಲ್ಲ, ಆದರೆ ಚುರುಕಾದ ಬುದ್ಧಿಗೆ ಗೋಚರನಾಗುತ್ತಾನೆ'– ಎಂದು ಹಿಂದೆ (೧–೩–೧೨) ಹೇಳಿದೆಯಷ್ಟೆ. ಈ ಚುರುಕಾದ ಬುದ್ಧಿಯುಂಟಾಗುವದಕ್ಕೆ ಏನು ಅಡ್ಡಿಯಾಗಿ, ಈ ಬುದ್ಧಿಯಿಲ್ಲದ್ದರಿಂದ (ಜನರಿಗೆ) ಆತ್ಮನು ಕಾಣದೆ ಇರುವನು? ಎಂದು ಕೇಳಬಹುದು. ಆದ್ದರಿಂದ ಈ (ಆತ್ಮನ)ನ್ನು ಕಾಣದೆ ಇರುವದಕ್ಕೆ ಕಾರಣವನ್ನು ತಿಳಿಸುವದಕ್ಕಾಗಿ ಈ ವಲ್ಲಿಯನ್ನು ಆರಂಭಿಸಿರುತ್ತದೆ. ಏಕೆಂದರೆ ಶ್ರೇಯಸ್ಸಿಗೆ ಅಡ್ಡಿಯಾದ ಕಾರಣವನ್ನು ತಿಳಿದಿದ್ದರೆ ಅದನ್ನು ಹೋಗಲಾಡಿಸುವದಕ್ಕೆ ಪ್ರಯತ್ನವನ್ನು ಮಾಡಬಹುದೇ ಹೊರತು ತಿಳಿಯದೆ ಆಗುವದಿಲ್ಲ.

**ಸ್ವಯಂಭುವು ಹೊರಕ್ಕೆ ಹೋಗುವಂತೆ ಇಂದ್ರಿಯಗಳನ್ನು ಹಾಳುಮಾಡಿರುವನು; ಆದ್ದರಿಂದ (ಮನುಷ್ಯನು) ಹೊರಗೆ ನೋಡುತ್ತಾನೆಯೇ ಹೊರತು ಅಂತರಾತ್ಮನನ್ನು ನೋಡುವದಿಲ್ಲ. ಯಾವನೋ ಒಬ್ಬ ಧೀರನು ಅಮೃತತ್ವವನ್ನು ಬಯಸಿದವನಾಗಿ ಚಕ್ಷುಸ್ಸನ್ನು ತಿರುಗಿಸಿಕೊಂಡು ಪ್ರತ್ಯಗಾತ್ಮನನ್ನು ನೋಡುತ್ತಾನೆ.** ॥ ೧ ॥

* ಬ್ರಾಹ್ಮಣರಿಗೆ ಹಾಕಿದ ಭೋಜನ, ಕೊಟ್ಟ ದಕ್ಷಿಣೆ, ಮಾಡಿದ ಕರ್ಮ– ಇವೆಲ್ಲಕ್ಕೂ ಹೆಚ್ಚಿನ ಬಲವನ್ನು ಕೊಡುವದು

'ಪರಾಞ್ಚಿ' ಎಂದರೆ ಹೊರಕ್ಕೆ ಹೋಗುವಂಥವು. 'ಖಾನಿ' ಎಂದರೆ ಆಕಾಶದ ಹೆಗ್ಗುರುತಿನಿಂದ* ತಿಳಿಯಬೇಕಾದ ಕಿವಿಯೇ ಮುಂತಾದ ಇಂದ್ರಿಯಗಳು; ಆ (ಇಂದ್ರಿಯಗಳು) ಶಬ್ದವೇ ಮುಂತಾದ ವಿಷಯಗಳನ್ನು ಬೆಳಗುವದಕ್ಕೆ ಹೊರಕ್ಕೇ ಹೊರಡುತ್ತಿರುವವು. ಈ ಸ್ವಭಾವವಾಗಿರುವಂತೆ ಇವುಗಳನ್ನು 'ವ್ಯತೃಣತ್' ಎಂದರೆ ಹಿಂಸೆಮಾಡಿರುತ್ತಾನೆ– ಹಾಳುಮಾಡಿರುತ್ತಾನೆ. ಯಾರು? ಎಂದರೆ **ಸ್ವಯಂಭು** ಯಾವಾಗಲೂ ತಾನೇ ಸ್ವತಂತ್ರನಾಗಿ ['ಸ್ವಯಂ'] ಇರುತ್ತಾನೆಯೇ ['ಭವತಿ'] ಹೊರತು ಪರತಂತ್ರನಾಗಿರುವದಿಲ್ಲವಾದ್ದರಿಂದ ಪರಮೇಶ್ವರನಿಗೆ (ಸ್ವಯಂಭು ಎಂದು ಹೆಸರು). ಆದ್ದರಿಂದ ಹೊರಗೆ– ಎಂದರೆ ಹೊರಗೆ ಇರುವಂಥವುಗಳಾಗಿ ಅನಾತ್ಮವಾಗಿರುವ– ಶಬ್ದವೇ ಮುಂತಾದವುಗಳನ್ನು, ನೋಡುವಾತನು ಕಾಣುವನೇ ಹೊರತು (ಅವುಗಳನ್ನೇ) ಅರಿಯುವನೇ ಹೊರತು ಅಂತರಾತ್ಮನನ್ನು ಎಂದರೆ ಒಳಗಿರುವ ಆತ್ಮನನ್ನು ಕಾಣುವದಿಲ್ಲ– ಎಂದರ್ಥ.

ಜನರದು ಇದೇ ಸ್ವಭಾವವಾಗಿರುತ್ತಿದ್ದರೂ, ನದಿಯ ಪ್ರವಾಹವನ್ನು ಹಿಂತಿರುಗಿಸುವ ಹಾಗೆ ಯಾವನೋ ಒಬ್ಬ ಧೀರನು ಎಂದರೆ ಬುದ್ಧಿವಂತನಾದ ವಿವೇಕಿಯು, ಪ್ರತ್ಯಗಾತ್ಮನನ್ನು ನೋಡುತ್ತಾನೆ ಒಳಗಿರುವ ಆತ್ಮನೇ ಪ್ರತ್ಯಗಾತ್ಮನು. ಒಳಗಿರುವ (ಆತ್ಮನಲ್ಲಿಯೇ) ಆತ್ಮ ಎಂಬ ಶಬ್ದವು ಲೋಕದಲ್ಲಿ ರೂಢವಾಗಿದೆಯೇ† ಹೊರತು ಮತ್ತೊಂದರಲ್ಲಿ(ರೂಢವಾಗಿ)ಲ್ಲ. ಆತ್ಮಶಬ್ದವು ವ್ಯುತ್ಪನ್ನಶಬ್ದವೆಂದು ಭಾವಿಸಿದರೂ ಆತ್ಮಶಬ್ದಕ್ಕೆ ಇದೇ ಅರ್ಥವಾಗುವುದು. ಏಕೆಂದರೆ "ಯಚ್ಚಾಪ್ನೋತಿ ಯದಾದತ್ತೇ ಯಚ್ಚಾತ್ತಿ ವಿಷಯಾನಿಹ । ಯಚ್ಚಾಸ್ಯ ಸನ್ತತೋ ಭಾವಸ್ತಸ್ಮಾದಾತ್ಮೇತಿ ಕೀರ್ತ್ಯತೇ ॥" (ಇಲ್ಲಿರುವ ವಿಷಯಗಳನ್ನು ಹೊಂದುವದರಿಂದಲೂ, ಅವುಗಳನ್ನು ತನ್ನೊಳಕ್ಕೆ ತೆಗೆದುಕೊಳ್ಳುತ್ತಿರುವದರಿಂದಲೂ ಅವೇಲೆ ಅವುಗಳನ್ನು ಉಣ್ಣುತ್ತಿರುವದರಿಂದಲೂ ತುಂಡಿಸದೆ ನಿರಂತರವಾಗಿರುವದರಿಂದಲೂ **ಆತ್ಮ**ನೆನಿಸಿಕೊಂಡಿರುತ್ತಾನೆ) ಎಂದು ಆತ್ಮಶಬ್ದದ ವ್ಯುತ್ಪತ್ತಿಯು ಸ್ಮೃತಿಯಲ್ಲಿ‡ ಹೇಳಿರುತ್ತದೆ. ಇಂಥ ತನ್ನ ಸ್ವರೂಪ

* 'ಖ' ಎಂದರೆ ಆಕಾಶವು. 'ಬಿಲ್ಲುಗಾರರು' ಎಂಬಲ್ಲಿ ಬಾಣ ಮುಂತಾದವುಗಳನ್ನು ಹಿಡಿದಿರುವವರೆಂದು ಅರ್ಥಮಾಡಿಕೊಳ್ಳುವಂತೆ 'ಖ' ಎಂದರೆ ಆಕಾಶದಿಂದಾಗಿರುವ ಕಿವಿಯನ್ನೂ ಅದರ ಜತೆಯಲ್ಲಿರುವ ಇತರ ಇಂದ್ರಿಯಗಳನ್ನೂ ತೆಗೆದುಕೊಳ್ಳಬೇಕೆಂಬ ಭಾವ.

† ಯಾವ ಶಬ್ದಕ್ಕೆ ಯಾವದು ಮುಖ್ಯಾರ್ಥವೋ ಅದನ್ನು ಮೊದಲು ಗ್ರಹಿಸಬೇಕು ಎಂಬುದು ಸಾಮಾನ್ಯನಿಯಮ; ಆದ್ದರಿಂದ ಆತ್ಮವೆಂದರೆ ನಮ್ಮ ಒಳಗಿನ ಸ್ವರೂಪವೆಂದು ರೂಢಿಯಾಗಿರುವ ಅರ್ಥವನ್ನೇ ತೆಗೆದುಕೊಳ್ಳಬೇಕು

‡ ಇದು ಯಾವ ಸ್ಮೃತಿಯೋ ತಿಳಿಯದು.

ವಾದ ಪ್ರತ್ಯಗಾತ್ಮನನ್ನು * ನೋಡುತ್ತಾನೆ; ಐಕ್ಷತ್ ಎಂದರೆ ನೋಡಿದನು (ಎಂದರ್ಥವಾದರೂ) 'ನೋಡುತ್ತಾನೆ' ಎಂಬುದೇ ಇಲ್ಲಿ ಇಟ್ಟುಕೊಳ್ಳಬೇಕಾದ ಅರ್ಥ; ಏಕೆಂದರೆ ವೇದದಲ್ಲಿ ಕಾಲದ (ರೂಪಗಳು) ನಿಯಮವಾಗಿ ಬರುವದಿಲ್ಲ.

ಹೇಗೆ ನೋಡುತ್ತಾನೆ? ಎಂದರೆ ಹೇಳುತ್ತಾನೆ. 'ಚಕ್ಷುಸ್ಸನ್ನು ತಿರುಗಿಸಿಕೊಂಡು'; ಕಿವಿಯೇ ಮುಂತಾದ ಇಂದ್ರಿಯಸಮೂಹಕ್ಕೆ ಚಕ್ಷುಸ್ಸೆಂದು (ಇಲ್ಲಿ ಸಂಜ್ಞೆ). ಇದನ್ನು ಎಲ್ಲಾ ವಿಷಯಗಳಿಂದಲೂ ಹಿಂತಿರುಗಿಸಿಕೊಂಡು, ಈ ವಿಧವಾಗಿ ಸಂಸ್ಕಾರವನ್ನು ಹೊಂದಿ ಪ್ರತ್ಯಗಾತ್ಮನನ್ನು ನೋಡುತ್ತಾನೆ; ಏಕೆಂದರೆ ಹೊರಗಿನ ವಿಷಯಗಳನ್ನು ನೋಡುತ್ತಿರುವದೂ ಒಳಗಿನ ಆತ್ಮನನ್ನು ಕಾಣುವದೂ ಒಬ್ಬನಿಗೇ ಆಗುವದಿಲ್ಲ. ಹೀಗೆ ಬಹಳ ಕಷ್ಟದಿಂದ ಸ್ವಭಾವದ ನಡಗೆಯನ್ನು ತಡೆದುಕೊಂಡು ಏತಕ್ಕೆ ಧೀರನಾದವನು ಪ್ರತ್ಯಗಾತ್ಮನನ್ನು ನೋಡುತ್ತಾನೆ? ಎಂದರೆ ಹೇಳುತ್ತಾನೆ: ಅಮೃತತ್ವವನ್ನು ಬಯಸಿ. ಎಂದರೆ ಮರಣವಿಲ್ಲದ ಧರ್ಮವೆಂಬ ನಿತ್ಯವಾದ ತನ್ನ ಸ್ವಭಾವವೇ ತನಗೆ ಬೇಕೆಂದು ಬಯಸಿ, (ಹೀಗೆ ಆತ್ಮನನ್ನು ನೋಡುತ್ತಾನೆ) ಎಂದರ್ಥ

**ಹೊರಗಿನ ಕಾಮಗಳನ್ನು ಬಾಲಕರು ಅನುಸರಿಸುತ್ತಾರೆ; ಹರಡಿರುವ ಮೃತ್ಯುವಿನ ಪಾಶವನ್ನು ಅವರು ಪಡೆಯುತ್ತಾರೆ. ಇನ್ನು ಧೀರರಾದರೆ ಇಲ್ಲಿ ಅನಿತ್ಯವಾದವುಗಳಲ್ಲಿ ಅಮೃತತ್ವವನ್ನೇ ನಿತ್ಯವೆಂದು ತಿಳಿದುಕೊಂಡು (ಅನಿತ್ಯವಾದವುಗಳನ್ನು) ಬಯಸದೆ ಇರುವರು. || ೨ ||**

ಹೊರಗೆ ಇರುವ ಅನಾತ್ಮವಸ್ತುಗಳನ್ನೇ ಸ್ವಭಾವವಾಗಿ ನೋಡುವಂತೆ ಮಾಡುತ್ತಾ ಆತ್ಮನನ್ನು ಕಾಣುವದಕ್ಕೆ ಅಡ್ಡಿಯಾದ ಕಾರಣವಾಗಿ ಆತ್ಮದರ್ಶನಕ್ಕೆ

---

* ಆತ್ಮನು ಜೀವಾತ್ಮನೆಂದೂ ಪರಮಾತ್ಮನೆಂದೂ ಎರಡು ಬಗೆಯೆಂತಲೂ ಪರಮಾತ್ಮನು ಜೀವಾತ್ಮನಿಗಿಂತ ಬೇರೆಯೆಂತಲೂ ತಾರ್ಕಿಕರು ಅಭಿಪ್ರಾಯಪಡುವರು, ದ್ವೈತಿಗಳಾದ ಈಗಿನ ವೇದಾಂತಿಗಳೂ ಇದೇ ಅಭಿಪ್ರಾಯದವರಾಗಿರುವರು ಆತ್ಮ ಎಂಬ ಶಬ್ದವು ನಮ್ಮ ಸ್ವರೂಪಕ್ಕೆ ರೂಢವಾಗಿರುವ ಹೆಸರಾದ್ದರಿಂದ ನಮಗಿಂತ ಭಿನ್ನನಾಗಿರುವ ಈಶ್ವರನೆಂದು ಈ ಶಬ್ದಕ್ಕೆ ಅರ್ಥಮಾಡುವದು ಸರಿಯಲ್ಲ- ಎಂದು ಹಿಂದೆ ಹೇಳಿದ್ದಾಯಿತು ಈಗ ಅವಯವಾರ್ಥವನ್ನು ತೆಗೆದುಕೊಂಡರೂ ನಮ್ಮ ಆತ್ಮವೇ ಈ ಶಬ್ದಕ್ಕೆ ಅರ್ಥವಾಗುವದು ಎಂದು ತೋರಿಸುತ್ತಾರೆ. ವಿಷಯಗಳನ್ನು ಪಡೆಯುವದೆಂದರೆ ಅನ್ನ, ಪಾನ- ಮುಂತಾದವುಗಳನ್ನು ಇಂಥವೆಂದು ಅರಿಯುವದು, ತೆಗೆದುಕೊಳ್ಳುವದೆಂದರೆ ತನ್ನಧೀನಪಡಿಸಿಕೊಂಡಿರುವದು, ತಿನ್ನುವದೆಂದರೆ ಉಪಭೋಗಿಸುವದು- ಇದೆಲ್ಲವನ್ನೂ ನಾವೇ ಮಾಡುತ್ತಿದೇವೆ ಹೀಗಿದ್ದರೂ ನಮ್ಮ ಆತ್ಮನು ದೇಶಕಾಲವಸ್ತುಗಳಿಂದ ತುಂಡಾಗುವದಿಲ್ಲ.

ವಿರೋಧಿಯಾಗಿರುವ ಯಾವ **ಅವಿದ್ಯೆ**ಯುಂಟೋ,* ಮತ್ತು (ಅ) ಅವಿದ್ಯೆಯು ತೋರಿಸಿಕೊಡುವವುಗಳಾದ- ಕಾಣುವ ಮತ್ತು ಕಾಣದ†- ಹೊರಗಿನ ಭೋಗ ಗಳಲ್ಲಿರುವ ಯಾವ (ಬಯಕೆ)ಯುಂಟೋ ಈ ಅವಿದ್ಯೆ, ಬಯಕೆ- ಎಂಬೆರಡರಿಂದ ಆತ್ಮದರ್ಶನಕ್ಕೆ ಅಡ್ಡಿಯನ್ನು ಮಾಡಿಕೊಂಡಿರುವ ಬಾಲಕರು ಎಂದರೆ ಅಲ್ಪಬುದ್ಧಿ ಯುಳ್ಳ ಜನರು ಹೊರಗಿನ ಕಾಮಗಳನ್ನು ಎಂದರೆ ಕಾಮಿಸುವ ವಿಷಯಗಳನ್ನೇ ಅನುಸರಿಸುತ್ತಾರೆ, ಅವುಗಳನ್ನೇ ಹಿಂಬಾಲಿಸುತ್ತಾರೆ. ಈ ಕಾರಣದಿಂದ ಹರಡಿರುವ ಎಂದರೆ ವಿಸ್ತಾರವಾಗಿ ಎಲ್ಲೆಲ್ಲಿಯೂ ಹಬ್ಬಿರುವ, ಮೃತ್ಯುವಿನ ಪಾಶ ವನ್ನು ಎಂದರೆ ಅವಿದ್ಯೆ, ಕಾಮ, ಕರ್ಮ- ಎಂಬ ಗುಂಪಿನ‡ ಬಲೆಯನ್ನು–ಯಾವ ದರಿಂದ ಕಟ್ಟುಬೀಳುವರೋ ಆ ದೇಹೇಂದ್ರಿಯಗಳನ್ನು ಸೇರುವದು, ಅಗಲು ವದು§ ಎಂಬುದೇ ಪಾಶವು;- ಈ ಪಾಶವನ್ನು– ಪಡೆಯುತ್ತಾರೆ; ಯಾವಾಗಲೂ ಹುಟ್ಟುವದು, ಸಾಯುವದು, ಮುಪ್ಪು, ಬೇನೆ- ಮುಂತಾದ ಅನೇಕ ಅನರ್ಥ ಗಳು ಸಮೂಹವನ್ನು ಹೊಂದುತ್ತಾರೆ ಎಂದರ್ಥ

ಹೀಗಿದೆಯಷ್ಟೆ. ಆದಕಾರಣ|| ಧೀರರು ಎಂದರೆ ವಿವೇಕಿಗಳಾದವರು ತಮ್ಮ ಒಳಗಿನ ಆತ್ಮನ ಸ್ವರೂಪದಲ್ಲಿದ್ದುಕೊಂಡಿರುವದೆಂಬ ಅಮೃತತ್ವವೇ ನಿತ್ಯ ವೆಂದು ತಿಳಿದುಕೊಂಡು– ದೇವತೆಗಳ ಸ್ಥಾನವೇ** ಮುಂತಾದದ್ದು ಅನಿತ್ಯವು, ಪ್ರತ್ಯಗಾತ್ಮಸ್ವರೂಪದಲ್ಲಿರುವದೆಂಬ ಇದಾದರೋ 'ಕರ್ಮದಿಂದ ಬೆಳೆಯುವದೂ ಇಲ್ಲ. ಸಣ್ಣದಾಗುವದೂ ಇಲ್ಲ'ವಾದ್ದರಿಂದ†† ನಿತ್ಯವು. ಹೀಗೆ ಕೂಟಸ್ಥವಾಗಿ

* ಅನಾತ್ಮವಸ್ತು ಆತ್ಮನಿಗಿಂತ ಬೇರೆಯಾಗಿ ಇರುವದೆಂದು ಕಲ್ಪಿಸಿಕೊಳ್ಳುವದೇ ಅವಿ ದ್ಯೆಯು. ಅವಿದ್ಯೆಯೆಂಬ ಒಂದಾನೊಂದು ಶಕ್ತಿಯಿರುವದೆಂದು ಈಗಿನವರು ಹೇಳುವಂತೆ ಆಚಾ ರ್ಯರು ಎಲ್ಲಿಯೂ ಅಭಿಪ್ರಾಯಪಟ್ಟಿಲ್ಲ.

† ಕಾಣುವ= ಈ ಲೋಕದ, ಕಾಣದ= ಪರಲೋಕದ

‡ ಅವಿದ್ಯಾಕಾಮಕರ್ಮಗಳಿಂದ ಆತ್ಮನಿಗೆ ಸಂಸಾರದ ಮುಖವಾಗಿರುವದರಿಂದ ಇದೇ ಮೃತ್ಯು.

§ ದೇಹೇಂದ್ರಿಯಗಳೊಡಗೂಡುವದು, ಅವುಗಳನ್ನಗಲುವದು– ಎಂಬ ಜನ್ಮಮರಣಗಳುಂ ಟೆಂದು ಭಾವಿಸಿಕೊಳ್ಳುವದೇ ಮೃತ್ಯುವಿನ ಬಲೆಗೆ ಬೀಳುವದು.

|| ಇದು ಮೂಲದಲ್ಲಿರುವ 'ಅಥ' ಎಂಬ ಶಬ್ದದ ವ್ಯಾಖ್ಯಾನ

** ಆಭೂತಸಂಪ್ಲವಂ ಸ್ಥಾನಂ ಅಮೃತತ್ವಂ ಹಿ ಭಾಷ್ಯತೇ- (ಪ್ರಲಯಕಾಲವಾಗುವವರೆಗೆ ಇರುವದು ಅಮೃತವೆನಿಸಿಕೊಳ್ಳುವದು) ಎಂದು ಸ್ಮೃತಿಯುಂಟು ಆತ್ಮತತ್ತ್ವವು ಪ್ರಲಯದಲ್ಲಿಯೂ ಹೋಗುವದಿಲ್ಲವಾದ್ದರಿಂದ ದೇವತಾಸ್ಥಾನವೇ ಮುಂತಾದದ್ದಕ್ಕಿಂತಲೂ ಇದು ನಿಜವಾದ ಅಮೃತವು.

†† ಬೃಹದಾರಣ್ಯಕ(೪-೪-೨೩)ಶ್ರುತಿಯ ಸೂಚನೆ

ಅಲ್ಲಾಡದೆ* ಇರುವ ಈ ಅಮೃತತ್ವವೇ ನಿತ್ಯವೆಂಬುದನ್ನು ತಿಳಿದುಕೊಂಡು– ಅನಿತ್ಯವಾಗಿರುವ ಪದಾರ್ಥಗಳಲ್ಲಿ ಇದೇ ನಿತ್ಯವೆಂದು ನಿರ್ಧರಿಸಿಕೊಂಡು† ಬ್ರಾಹ್ಮಣರು ಈ ಅನರ್ಥವಾದ ಸಂಸಾರದಲ್ಲಿ ಯಾವದನ್ನೂ ಬಯಸದೆ ಇರುವರು; ಏಕೆಂದರೆ (ಬಯಕೆಯು) ಪ್ರತ್ಯಗಾತ್ಮನನ್ನು ಕಾಣುವದಕ್ಕೆ ಪ್ರತಿಕೂಲವಾಗಿರುತ್ತದೆ. (ಅವರು) ಮಕ್ಕಳು ಮರಿ, ಹಣ ಕಾಸು, ಲೋಕಗಳ ಭೋಗಗಳು– ಇವುಗಳ ಬಯಕೆಯನ್ನು‡ ಬಿಟ್ಟು ಹೋಗಿಯೇಬಿಡುತ್ತಾರೆ ಎಂದರ್ಥ.

## ಇಂದ್ರಿಯಜ್ಞಾನವೂ ನಿಜವಾಗಿ ಆತ್ಮನದೆ

**ಯಾವ ಇದರಿಂದಲೇ ರೂಪವನ್ನೂ ರಸವನ್ನೂ ಗಂಧವನ್ನೂ ಸ್ಪರ್ಶಗಳನ್ನೂ ಮೈಥುನಗಳನ್ನೂ– ಚೆನ್ನಾಗಿ ತಿಳಿಯುತ್ತಿರುವನೋ ಆ ಆತ್ಮಕ್ಕೆ ಇಲ್ಲಿ ಏನು ಉಳಿದಿರುವದು? ಇದೇ ಅದು. || ೩ ||**

ಯಾವ (ಆತ್ಮನನ್ನು) ಅರಿತಿರುವದರಿಂದ ಬ್ರಾಹ್ಮಣರು ಮತ್ತೊಂದನ್ನು ಬಯಸದೆ ಇರುವರೋ ಅದನ್ನು ಹೇಗೆ ಅರಿಯಬೇಕು? ಎಂಬುದನ್ನು ಈಗ ಹೇಳುತ್ತಾನೆ. ಜ್ಞಾನದ ಸ್ವರೂಪವೇ ಆಗಿರುವ ಯಾವ ಆತ್ಮನಿಂದ ರೂಪವನ್ನೂ ರುಚಿಯನ್ನೂ ವಾಸನೆಯನ್ನೂ ಸದ್ದುಗಳನ್ನೂ ಸ್ಪರ್ಶಗಳನ್ನೂ ಮೈಥುನದಿಂದ ಆಗುವ ಸುಖದ ಅರಿವುಗಳನ್ನೂ ವಿಸ್ಪಷ್ಟವಾಗಿ§ ಎಲ್ಲಾ ಜನರೂ ಅರಿತುಕೊಳ್ಳುವರೋ–

(ಆಕ್ಷೇಪ) 'ದೇಹವೇ ಮುಂತಾದದ್ದಕ್ಕಿಂತ ಬೇರೆಯಾಗಿರುವ ಆತ್ಮನಿಂದ ನಾನು ಅರಿಯುತ್ತಿದ್ದೇನೆ' ಎಂದು ಜನರಿಗೆ ಗೊತ್ತಿಲ್ಲವಲ್ಲ? 'ದೇಹಾದಿಗಳ ಗುಂಪೇ ಆಗಿರುವ ನಾನು ಅರಿಯುತ್ತಿದ್ದೇನೆ' ಎಂದೇ ಅಲ್ಲವೆ ಜನರೆಲ್ಲರೂ ತಿಳಿದುಕೊಂಡಿದ್ದಾರೆ?

(ಪರಿಹಾರ) ಇದು ಸರಿಯಲ್ಲ. ದೇಹವೇ ಮುಂತಾದವುಗಳ ಗುಂಪೂ ಶಬ್ದವೇ ಮುಂತಾದವುಗಳ ಸ್ವರೂಪವೇ ಆಗಿದೆಯಾದ್ದರಿಂದಲೂ ಅದೂ ಅರಿಯಲ್ಪ

* ಕೂಟಸ್ಥವೆಂದರೆ ಇದ್ದಲ್ಲಿದ್ದು ಪರಿಣಾಮವನ್ನು ಹೊಂದುವದಲ್ಲದ್ದು, ಅವಿಚಾಲಿ (ಅಲ್ಲಾಡದ್ದು) ಎಂದರೆ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗುವ ಚಲನೆಯಿಲ್ಲದ್ದು.

† 'ವಿನಶ್ಯತ್ಸ್ವವಿನಶ್ಯಂತಂ' (ಗೀ) 'ನಿತ್ಯೋಽನಿತ್ಯಾನಾಂ' (ಶ್ವೇ) ಎಂಬ ವಾಕ್ಯಗಳ ಸೂಚನೆ.

‡ ಬೃಹದಾರಣ್ಯಕ(೪-೪-೨೭)ದ ಸೂಚನೆ. ಏಷಣಾತ್ರಯವನ್ನು ಬಿಡುವದಕ್ಕೆ ಆತ್ಮನೇ ನಿತ್ಯನೆಂಬ ಜ್ಞಾನವು ಕಾರಣವಾಗುವದು- ಎಂದು ಭಾವ. 'ಪ್ರತ್ಯಗಾತ್ಮದರ್ಶನಪ್ರತಿಕೂಲತ್ವಾತ್' ಎಂಬುದನ್ನು ಮುಂದಿನ ವಾಕ್ಯಕ್ಕೂ ಅನ್ವಯಿಸಿಕೊಳ್ಳಬಹುದಾಗಿದೆ.

§ ಜ್ಞಾನದ ಫಲವಾದ ಅರಿವುಂಟಾಗುವದೇ ವಿಸ್ಪಷ್ಟವೆಂಬುದು.

ಡತಕ್ಕದ್ದೇ ಆಗಿರುವವರಿಂದಲೂ ಆ (ಗುಂಪು ಮತ್ತೊಂದನ್ನು) ಅರಿಯುವದು ಎಂಬುದು ಸರಿಯಲ್ಲ. ದೇಹಾದಿಗಳ ಗುಂಪು ರೂಪಾದಿಗಳ ಸ್ವರೂಪವೇ ಆಗಿದ್ದರೂ ರೂಪಾದಿಗಳನ್ನು ಅರಿಯುವದಾದರೆ ಹೊರಗಿನ ರೂಪಾದಿಗಳೂ ಒಂದು ಮತ್ತೊಂದನ್ನೂ* (ತಾನು ತಾನು) ತನ್ನ ತನ್ನ ರೂಪವನ್ನೂ ಅರಿತುಕೊಳ್ಳಬಹುದಾಗುವದು. ಆದರೆ (ನಿಜಸ್ಥಿತಿಯು) ಹೀಗಿಲ್ಲ; ಆದ್ದರಿಂದ ದೇಹಾದಿ ಸ್ವರೂಪವಾಗಿರುವ ರೂಪಾದಿಗಳನ್ನು ಈ ದೇಹಾದಿಗಳಿಗಿಂತ ಬೇರೆಯಾದ ಚೈತನ್ಯಸ್ವಭಾವವುಳ್ಳ ಆತ್ಮನಿಂದಲೇ ಜನರು ತಿಳಿದುಕೊಳ್ಳುತ್ತಿರುತ್ತಾರೆ (ಎಂದಾಯಿತು.) ಯಾವದರಿಂದ ಕಬ್ಬಿಣವು ಸುಡುತ್ತದೆಯೋ ಅದೇ ಬೆಂಕಿಯು† ಎಂಬಂತೆಯೇ (ಯಾವದರಿಂದ ಜನರು ಅರಿಯುತ್ತಾರೊ ಆ ಅರಿವಿನ ಸ್ವರೂಪವೇ ಆತ್ಮ ಎಂಬುದನ್ನೂ ತಿಳಿದುಕೊಳ್ಳಬೇಕು.)

(ಹೀಗೆ ಯಾವದರಿಂದ ಎಲ್ಲರೂ ಅರಿತುಕೊಳ್ಳುವರೋ ಅಂಥ) ಆತ್ಮನಿಗೆ ಅರಿಯದೆ ಇರುವದು ಇಲ್ಲಿ ಎಂದರೆ ಈ ಲೋಕದಲ್ಲಿ ಮತ್ತೇನು ಉಳಿದಿರುವದು? ಯಾವದೂ ಉಳಿದಿರುವದಿಲ್ಲ ಎಲ್ಲವೂ ಆತ್ಮನಿಂದ ಅರಿಯಲ್ಪಡುತ್ತಲೇ ಇರುತ್ತದೆ. ಯಾವ ಆತ್ಮನಿಗೆ ಅರಿಯುವದಕ್ಕೆ ಆಗದ್ದು ಯಾವದೂ ಉಳಿದಿಲ್ಲವೋ ಆ **ಸರ್ವಜ್ಞನೇ** ‡ ಆತ್ಮನು.

'ಇದೇ ಅದು'; ಎಂದರೆ ದೇವತೆಗಳೇ ಮುಂತಾದವರಿಗೂ ಸಂಶಯವಾಗಿರುವದಾಗಿಯೂ ಧರ್ಮ ಮುಂತಾದವುಗಳಿಂದ ಬೇರೆಯಾಗಿಯೂ ಇರುವ ತನಗಿಂತ ಮುಂದೆ ಇನ್ನಿಲ್ಲವಾದ ವಿಷ್ಣುವಿನ ಪರಮಪದವನ್ನು ಕುರಿತು ನಚಿಕೇತನು ಕೇಳಿದ್ದನಷ್ಟೆ, ಅದೇ § ಈಗ ತಿಳಿದದ್ದು – ಎಂದು ಅರ್ಥ.

**ಸ್ವಪ್ನಾಂತವನ್ನೂ ಜಾಗರಿತಾಂತವನ್ನೂ ಎರಡನ್ನೂ ಯಾವಾತನಿಂದ ಅರಿಯುತ್ತಾನೋ ದೊಡ್ಡವನಾದ ವಿಭುವಾದ (ಆ) ಆತ್ಮನನ್ನು ತಿಳಿದುಕೊಂಡ ಧೀರನು ಶೋಕಿಸದೆ ಇರುವನು. ॥ ೪ ॥**

---

* ಒಂದು ರೂಪವು ಮತ್ತೊಂದು ರೂಪವನ್ನು ನೋಡಬಹುದಲ್ಲ, ತನ್ನನ್ನೂ ಅರಿತುಕೊಳ್ಳಲೂ ಬಹುದಲ್ಲ – ಎಂದು ಭಾವ.

† ಬೆಂಕಿಯಲ್ಲಿ ಸ್ವಭಾವವಾಗಿ ಬಿಸಿಯಿದ್ದು ಕಬ್ಬಿಣದಲ್ಲಿ ತೋರುತ್ತದೆ. ಇದರಂತೆ ಸ್ವಭಾವವಾಗಿ ಆತ್ಮನಲ್ಲಿರುವ ಚೈತನ್ಯವು ಅನಾತ್ಮದಲ್ಲಿರುಮತೆ ಅಜ್ಞರಿಗೆ ತೋರುವದು ಇದು ಅನುಮಾನ ಪ್ರಮಾಣವನ್ನು ಹೇಳಿದ್ದಲ್ಲ, ಅನುಭವದ ವಿಷಯ. ಪೀಠಿಕೆಯನ್ನು ನೋಡಿ.

‡ ಇದು ಸ್ಮೃತಿಯಲ್ಲಿ ಹೇಳಿದ 'ಯಚ್ಚಾಪ್ನೋತಿ ಯದಾದತ್ತೇ' – ಎಂಬುದರ ಸೂಚನೆ.

§ ಆತ್ಮನ ಜ್ಞಾನಕ್ಕೆ ಎಲ್ಲವೂ ವಿಷಯವಾಗಿ ಅದರ ಅಧೀನವಾಗಿರುವದು. ಈ ಜ್ಞಾನಸ್ವರೂಪವಾದ ಆತ್ಮನೇ ನಚಿಕೇತನು ಕೇಳಿದ ಧರ್ಮಾಧರ್ಮಗಳನ್ನು ಮೀರಿರುವ ವಸ್ತು – ಎಂದು ಭಾವ. ಈ ಅಭಿಪ್ರಾಯವನ್ನು ಮುಂದಿನ ಮಂತ್ರದಲ್ಲಿಯೂ ತಿಳಿಸಿದೆ.

ಬಹಳ ಸೂಕ್ಷ್ಮವಾದದ್ದಾದ್ದರಿಂದ (ಆತ್ಮತತ್ತ್ವವು) ತಿಳಿಯುವದಕ್ಕೆ ಕಷ್ಟವಾದದ್ದು ಎಂಬ ಅಭಿಪ್ರಾಯದಿಂದ ಇದೇ ವಿಷಯವನ್ನೇ ಮತ್ತೆ ಮತ್ತೆ ಹೇಳುತ್ತಾನೆ. ಸ್ವಪ್ನಾಂತವನ್ನು ಎಂದರೆ ಸ್ವಪ್ನದ ಮಧ್ಯವನ್ನು; ಕನಸಿನಲ್ಲಿ ತಿಳಿಯಬೇಕಾದ್ದನ್ನೂ ಎಂದರ್ಥ. ಮತ್ತು ಜಾಗರಿತಾಂತವನ್ನು ಎಂದರೆ ಜಾಗರಿತಮಧ್ಯವನ್ನು; ಎಚ್ಚರದಲ್ಲಿ ತಿಳಿಯುವ ವಿಷಯವನ್ನು. ಈ ಕನಸು ಮತ್ತು ಎಚ್ಚರದಲ್ಲಿರುವ ಎರಡನ್ನೂ 'ಯಾವ ಆತ್ಮನಿಂದ*ಜನರು ನೋಡುತ್ತಾರೋ' ಎಂಬುದನ್ನೆಲ್ಲ ಹಿಂದಿನ ಮಂತ್ರದ ಭಾಷ್ಯದಂತೆ (ತಿಳಿಯಬೇಕು) ಆ ದೊಡ್ಡ† ವಿಭುವಾದ ಆತ್ಮನನ್ನು ತಿಳಿದುಕೊಂಡರೆ 'ನಾನೇ ಪರಮಾತ್ಮನು' ಎಂದು ನೇರಾಗಿ ಆತ್ಮರೂಪದಿಂದ ಅರಿತುಕೊಂಡರೆ (ಆ) ಜ್ಞಾನಿಯು ಶೋಕಿಸದೆ ಇರುವನು.

## ಆತ್ಮನೂ ಹಿರಣ್ಯಗರ್ಭನೂ ಅದ್ವಿತೀಯವಾದ ಬ್ರಹ್ಮವೆ

**ಯಾವನು ಈ ಜೇನುತುಪ್ಪವನ್ನು ತಿನ್ನುವ ಜೀವನನ್ನು, 'ಹತ್ತಿರವಾಗಿಯೇ ಇದ್ದು ಹಿಂದಿನ ಮತ್ತು ಮುಂದಿನ ಕಾಲದ ಒಡೆಯನಾಗಿರುವ ಆತ್ಮನೇ (ಇವನು)' ಎಂದು ಅರಿತುಕೊಳ್ಳುವನೋ (ಅವನು) ಆಮೇಲೆ (ತನ್ನನ್ನು) ಕಾಪಾಡಿಕೊಳ್ಳುವದಕ್ಕೆ ಇಚ್ಛಿಸುವದಿಲ್ಲ. ಇದೇ ಅದು.**

ಮತ್ತು ಯಾವನೇ ಆಗಲಿ ಈ ಜೇನುತುಪ್ಪವನ್ನು ತಿನ್ನುತ್ತಿರುವ ಎಂದರೆ ಕರ್ಮಗಳ ಫಲವನ್ನು‡ ಅನುಭವಿಸುತ್ತಿರುವನಾಗಿ ಪ್ರಾಣವೇ§ ಮುಂತಾದವುಗಳನ್ನು ಧರಿಸಿರುವ ಜೀವನನ್ನು, 'ಹತ್ತಿರವಾಗಿಯೇ ಇದ್ದು ಹಿಂದಿನ ಮುಂದಿನ ಕಾಲಗಳ ಒಡೆಯನಾಗಿ, ಮೂರು ಕಾಲವನ್ನೂ|| ಆಳುವ ಆತ್ಮನೇ ಇವನು'—

* ಎಚ್ಚರಕನಸುಗಳ ವಿಷಯಗಳನ್ನು ಗೋಚರವಾಗಿ ಮಾಡಿಕೊಳ್ಳುವ ಅರಿವು ಜಡವಾದ ಅಂತಃಕರಣವಲ್ಲ; ಎರಡವಸ್ಥೆಗಳಲ್ಲಿಯೂ ಒಂದೆ ಅಂತಃಕರಣವಿರುವವೆಂಬುದೂ ಭ್ರಾಂತಿಯೆ ಈ ಎರಡು ಅವಸ್ಥೆಗಳನ್ನು ಗೋಚರಪಡಿಸಿಕೊಳ್ಳುವ ಅರಿವು ನಿಜವಾಗಿ ಆತ್ಮಚೈತನ್ಯವೇ ಎಂದು ಭಾವ

† ಅವಸ್ಥೆಗಳಲ್ಲಿ ಕಾಣುವ ವಿಷಯಗಳು ಒಂದಕ್ಕೊಂದು ಕಟ್ಟುಬಿದ್ದು ಅಳತೆಗೆ ಸಿಕ್ಕಿರುವವು, ಮತ್ತು ಆಯಾ ಅವಸ್ಥೆಯನ್ನು ಮೀರಿರಲಾರವಾದ್ದರಿಂದ ಅವುಗಳು ಅಲ್ಪಪರಿಮಾಣದವುಗಳಾಗಿವೆ. ಆತ್ಮನು ಯಾವ ಅವಸ್ಥೆಗೂ ಕಟ್ಟುಬಿದ್ದಿಲ್ಲವಾದ್ದರಿಂದ ದೊಡ್ಡವನು, ಯಾವ ವಿಷಯವಾದರೂ ಆತ್ಮನಿಗೇ ಗೋಚರವಾಗಬೇಕಾದ್ದರಿಂದ ಅವನು ವ್ಯಾಪಿಯು.

‡ ಅಜ್ಞರಿಗೆ ಕರ್ಮಫಲವು ಜೇನಿನಂತೆ ಸವಿಯಾಗಿರುವದು. (ಮು ೩-೧-೧ ನೋಡಿ.) ಇದು 'ಯಚ್ಚಾತ್ತಿ ವಿಷಯಾನಿಹ' ಎಂಬ ಸ್ಮೃತಿಯ ಮೂಲಶ್ರುತಿ.

§ ಜೀವ್ ಎಂಬ ಧಾತುವಿಗೆ ಪ್ರಾಣವನ್ನು ಧರಿಸು ಎಂದರ್ಥ.

|| 'ಭೂತಭವಿಷ್ಯತ್ತುಗಳಿಗೆ ಒಡೆಯನು, ಎಂದದ್ದರಿಂದ ವರ್ತಮಾನಕ್ಕೂ ಒಡೆಯನೆಂದಂತೆಯೇ

ಎಂದು ಅರಿತುಕೊಳ್ಳುವನೋ (ಆತನು) ಆ ಅರಿವುಂಟಾದ ಮೇಲೆ ತನ್ನನ್ನು ಕಾಪಾಡಿಕೊಳ್ಳುವದಕ್ಕೆ ಇಚ್ಛಿಸುವದಿಲ್ಲ; ಏಕೆಂದರೆ (ಅವನು) ಅಭಯವನ್ನು ಹೊಂದಿರುತ್ತಾನೆ. ಎಲ್ಲಿಯವರೆಗೆ ತಾನು ಅನಿತ್ಯನೆಂದು ತಿಳಿದುಕೊಂಡು ಹೆದರಿಕೆಯಲ್ಲಿದ್ದುಕೊಂಡಿರುವನೋ ಅಲ್ಲಿಯವರೆಗೆ ತನ್ನನ್ನು ಕಾಪಾಡಿಕೊಳ್ಳುವದಕ್ಕೆ ಇಚ್ಛಿಸುತ್ತಾನೆ; ಯಾವಾಗಲಾದರೆ ನಿತ್ಯನಾಗಿರುವ ಎರಡನೆಯದಿಲ್ಲದ ಆತ್ಮನೇ ತಾನೆಂದು ಅರಿತುಕೊಳ್ಳುವನೋ ಆಗ ಯಾವನು * ಏನನ್ನು ಯಾವದರಿಂದ ಕಾಪಾಡಿಕೊಳ್ಳಬೇಕು ?

'ಇದೇ ಅದು' ಎಂಬ ವಾಕ್ಯವನ್ನು ಹಿಂದಿನ (ಮಂತ್ರ)ದಂತೆ (ವ್ಯಾಖ್ಯಾನ) ಮಾಡಿಕೊಳ್ಳಬೇಕು.

**ನೀರಿಗಿಂತ ಮೊದಲು ತಪಸ್ಸಿನಿಂದ ಹುಟ್ಟಿ, ಗುಹೆಯನ್ನು ಹೊಕ್ಕು ಭೂತಗಳೊಡನೆ ಇರುವಾತನನ್ನು ಯಾವಾತನು ಅರಿಯುತ್ತಾನೋ (ಆತನು) ಆ ಇದನ್ನೇ (ಅರಿಯುತ್ತಾನೆ). || ೬ ||**

ಯಾವ ಪ್ರತ್ಯಗಾತ್ಮನನ್ನು ಈಶ್ವರನೆಂದು ಹಿಂದೆ ತಿಳಿಸಿತೋ ಅವನೇ ಸರ್ವಾತ್ಮನು ಎಂದು ಈಗ ತೋರಿಸುತ್ತಾನೆ ಯಾವ ಮುಮುಕ್ಷುವಾಗಲಿ ಜ್ಞಾನದ † ಸ್ವರೂಪವಾದ ತಪಸ್ಸಿನಿಂದ ಎಂದರೆ ಬ್ರಹ್ಮದ (ತಪಸ್ಸಿ)ನಿಂದ ಎಂದರ್ಥ– ಆ ತಪಸ್ಸಿನಿಂದ ಮೊದಲು ಹುಟ್ಟಿ- ಯಾವದಕ್ಕಿಂತ ಮೊದಲು ಹುಟ್ಟಿ? ಎಂದರೆ ಹೇಳುತ್ತಾನೆ. ನೀರಿಗಿಂತ ಮೊದಲು, ಎಂದರೆ ನೀರೂ ಸೇರಿರುವ ಐದು ಭೂತಗಳಿಗಿಂತ‡ (ಮೊದಲು), ಒರಿಯ ನೀರಿಗಿಂತ ಮೊದಲು ಎಂದರ್ಥವಲ್ಲ. (ಹೀಗೆ ಭೂತಗಳಿಗಿಂತ ಮೊದಲು) ಹುಟ್ಟಿ ದೇವಾದಿಗಳ ಶರೀರಗಳನ್ನುಂಟು ಮಾಡಿ § ಎಲ್ಲಾ ಪ್ರಾಣಿಗಳ ಗುಹೆಯಾದ ಹೃದಯಾಕಾಶವನ್ನು ಹೊಕ್ಕು ಶಬ್ದವೇ ಮುಂತಾದ (ವಿಷಯ)ಗಳನ್ನು ಕಾಣುತ್ತಾ ಇರುವ **ಪ್ರಥಮಜನಾದ ಹಿರಣ್ಯಗರ್ಭ**ನನ್ನು ಕಾರ್ಯಕರಣರೂಪವಾದ || ಭೂತಗಳೊಡನೆ ಇರುವ

---

ಆಯಿತು. ಆತ್ಮನು ಕಾಲಕ್ಕೆ ಸಾಕ್ಷಿಯಾದ್ದರಿಂದ ಅವನಿಗೆ ಕಾಲದ ಕಟ್ಟು ಇರುವದಿಲ್ಲ, ಕಾಲವೆ ಅವನನ್ನು ಅವಲಂಬಿಸಿದೆ.

* ಬೃ|| ೨-೪-೧೪ ನೋಡಿ. † ಮುಂಡಕ(೧-೧-೯)ದ ಸೂಚನೆ. ಆದಿಯಿಂದ ಮಾತು ಬರೆದವರು ಕೈತಪ್ಪಿನಿಂದ ಬಿದ್ದಿರಬೇಕೆಂದು ತೋರುವದು.

‡ ನೀರು ಎಂಬುದು ಪಂಚಭೂತಗಳನ್ನು ಸೂಚಿಸುವ ಗುರುತಿನ ಮಾತು ಎಂದು ಭಾವ.

§ ಹಿರಣ್ಯಗರ್ಭನೇ ದೇವಾದಿಗಳನ್ನು ಸೃಷ್ಟಿಸುವನು.

|| ದೇಹೇಂದ್ರಿಯಾದಿಗಳ ರೂಪದಲ್ಲಿರುವ ಭೂತಗಳೊಡನೆ ಕೂಡಿರುವ ಜೀವನು ವಿಷಯಗಳನ್ನೂ ಅರಿಯುತ್ತಾನಷ್ಟೆ ; ಇವನ ಚೈತನ್ಯಕ್ಕೂ ಹಿರಣ್ಯಗರ್ಭಚೈತನ್ಯಕ್ಕೂ ಯಾವ ಭೇದವೂ ಇಲ್ಲ.

ನೆಂದು ಯಾವನು ಅರಿಯುತ್ತಾನೋ– (ಮೂಲದಲ್ಲಿ) 'ವ್ಯಪಶ್ಯತ' (ನೋಡಿದನು) ಎಂಬುದಕ್ಕೆ ನೋಡುತ್ತಾನೆ ಎಂದೇ ಅರ್ಥ. ಯಾವನು ಹೀಗೆ ನೋಡುತ್ತಾನೋ– ಅವನು ಈ ಪ್ರಕೃತವಾದ ಬ್ರಹ್ಮವನ್ನೆ * ಅರಿತವನಾಗುತ್ತಾನೆ.

**ದೇವತಾಮಯವಾದ ಯಾವ ಅದಿತಿಯು ಪ್ರಾಣ(ರೂಪ) ದಿಂದ ಹುಟ್ಟುವದೋ ಯಾವದು ಗುಹೆಯನ್ನು ಹೊಕ್ಕು ಇರುವದೋ ಭೂತಗಳೊಡನೆ ಹುಟ್ಟಿರುವದೋ ಇದೇ ಅದು. || ೭ ||**

ಮತ್ತು ಪ್ರಾಣರೂಪದಿಂದ ಎಂದರೆ ಹಿರಣ್ಯಗರ್ಭರೂಪದಿಂದ ಎಲ್ಲಾ ದೇವತೆಗಳ † ಸ್ವರೂಪವೂ ಆಗಿರುವದಾಗಿಯೂ ಶಬ್ದಾದಿವಿಷಯಗಳನ್ನು ಅನುಭವಿಸುವದರಿಂದ 'ಅದಿತಿ' ಎನಿಸಿರುವದಾಗಿಯೂ ಇರುವ ಯಾವದು ಪರಬ್ರಹ್ಮದಿಂದ ಹುಟ್ಟುವದೋ, ಹಿಂದೆ (೬ನೆಯ ಮಂತ್ರದಲ್ಲಿ) ಹೇಳಿದಂತೆ ಗುಹೆಯನ್ನು ಹೊಕ್ಕು ಇರುವದೋ–ಆ ಅದಿತಿಗೇ ವಿಶೇಷಣವನ್ನು ಕೊಡುತ್ತಾರೆ– ಯಾವದು ಭೂತಗಳೊಡಗೂಡಿ ಹುಟ್ಟಿರುವದೋ ‡ (ಅದು ಇದೇ.) §

**ಯಾವ ಜಾತವೇದನು ಗರ್ಭಿಣಿಯರಿಂದ ಗರ್ಭವು ಹೇಗೋ ಹಾಗೆ ಅರಣಿಗಳೆರಡರಲ್ಲಿಯೂ ಇದ್ದುಕೊಂಡು ಚೆನ್ನಾಗಿ ಧರಿಸಲ್ಪಟ್ಟಿರುವನೋ, (ಯಾವ) ಅಗ್ನಿಯು ದಿನದಿನವೂ ಎಚ್ಚರವಾಗಿರುವ ಹವಿಷ್ಮಂತರಾದ ಮನುಷ್ಯರುಗಳಿಂದ ಸ್ತೋತ್ರಮಾಡಲ್ಪಡುವನೋ ಇದೇ ಅದು.**

---

ಇವನ ಬುದ್ಧಿಯು ಹಿರಣ್ಯಗರ್ಭನ ಬುದ್ಧಿಯ ಅಂಶವಾಗಿದೆ ಎಲ್ಲವೂ ಜ್ಞಾನಸ್ವರೂಪವಾದ ಬ್ರಹ್ಮದಿಂದ ಹುಟ್ಟಿದೆಯಾದ್ದರಿಂದ ಬ್ರಹ್ಮವೇ

* ಬ್ರಹ್ಮಕ್ಕಿಂತ ಭಿನ್ನವಾಗಿ ಯಾವದನ್ನೂ ನೋಡುವದಿಲ್ಲವಾದ್ದರಿಂದ ಅವನು ಬ್ರಹ್ಮವನ್ನೆ ನೋಡುತ್ತಾನೆ ಇಲ್ಲಿ ವ್ಯಾಖ್ಯಾನಕಾರರು ಕೊಟ್ಟಿರುವ ಚಿನ್ನದ ಕಾರ್ಯದ ದೃಷ್ಟಾಂತವನ್ನು ವಿವರ್ತವಾದಕ್ಕೇ ಹೊಂದಿಸಿಕೊಳ್ಳಬೇಕು

† 'ಕಾರ್ಯಕರಣರೂಪವಾದ ಭೂತಗಳಲ್ಲಿ' ಎಂದು ಹಿಂದಿನ ಮಂತ್ರದಲ್ಲಿ ಹೇಳಿದ ಭಾಷ್ಯವು ಈ ಮಂತ್ರದ ಅರ್ಥವನ್ನು ಸೇರಿಸಿಕೊಂಡಿದೆ ಹಿಂದೆ ಶರೀರವೆಂಬ ಕಾರ್ಯರೂಪವಾದ ಭೂತಗಳಲ್ಲಿರುವದು ಆತ್ಮವೆಂದು ಹೇಳಿತ್ತು, ಇಲ್ಲಿ ಕರಣರೂಪವಾದ ಎಲ್ಲಾ ಭೂತಗಳಲ್ಲಿಯೂ ಆತ್ಮವೇ ಇರುವದೆಂದು ಹೇಳಿದೆ.

‡ 'ತೋಡಿ ಗುಂಡಿಯನ್ನು ಮಾಡಿದನು' ಎಂಬಲ್ಲಿ ಗುಂಡಿಯನ್ನು ಮಾಡಿದ್ದೆಂಬುದು ಹೇಗೆ ಉಪಚಾರದ ಮಾತೋ ಹಾಗೆ ಬ್ರಹ್ಮವು ಹುಟ್ಟಿತೆಂಬುದೂ ಉಪಚಾರದ ಮಾತು ಒಂದೇ ಬ್ರಹ್ಮವೇ ಅಜ್ಞರಿಗೆ ಹಿರಣ್ಯಗರ್ಭನಾಗಿಯೂ, ಜೀವರುಗಳಾಗಿಯೂ ತೋರುತ್ತಿರುವದು- ಎಂಬುದೇ ಪರಮಾರ್ಥ.

§ ಏತದ್ವೈ ತತ್- ಎಂಬ ಮಾತಿನ ಭಾಷ್ಯವು ಕೈಬಿಟ್ಟುಹೋಗಿದೆ; ಇದು ಬರೆದವರ ಕೈತಪ್ಪಾಗಿರಬಹುದು. 'ಇದೇ ಪ್ರಕೃತವಾದ' ಬ್ರಹ್ಮವು- ಎಂಬುದೇ ಅದರ ಅರ್ಥವು.

ಇದೂ ಅಲ್ಲದೆ ಯಜ್ಞದಲ್ಲಿ ಮೇಲಿನ ಅರಣಿ, ಕೆಳಗಿನ ಅರಣಿ– ಇವೆರಡರಲ್ಲಿಯೂ ಇದ್ದು ಆಮೇಲೆ ಎಲ್ಲಾ ಹವಿಸ್ಸುಗಳನ್ನೂ ಭೋಗಿಸುವ ಯಾವ ಜಾತವೇದನು ಎಂದರೆ ಅಗ್ನಿಯು (ಈ ಅರಣಿಗಳಿಂದ) ಚೆನ್ನಾಗಿ ಧರಿಸಲ್ಪಟ್ಟಿರುವನೋ ಮತ್ತು ತಮ್ಮ ಆತ್ಮದಲ್ಲಿ ಯೋಗಿಗಳಿಂದಲೂ (ಧರಿಸಲ್ಪಟ್ಟಿರುವನೋ)– ಈ ಲೋಕದಲ್ಲಿ ಗರ್ಭಿಣಿಯರಿಂದ ಸರಿಯಾದ ಅನ್ನಪಾನಗಳನ್ನು ತೆಗೆದುಕೊಳ್ಳುವದೇ ಮುಂತಾದ ರೀತಿಯಲ್ಲಿ ಹೇಗೆ ಗರ್ಭವು ಚೆನ್ನಾಗಿ ಪೋಷಿಸಲ್ಪಡುತ್ತದೆಯೋ ಹಾಗೆಯೇ ಋತ್ವಿಕ್ಕರುಗಳಿಂದಲೂ ಯೋಗಿಗಳಿಂದಲೂ (ಯಾವ ಅಗ್ನಿಯು) ಚೆನ್ನಾಗಿ ಪೋಷಿಸಲ್ಪಟ್ಟಿರುವನೋ ಎಂದಭಿಪ್ರಾಯ. ಮತ್ತು ಯಾವ ಅಗ್ನಿಯು ಎಚ್ಚರವಾಗಿ ಇರುವವರಾಗಿ ಎಂದರೆ ಅವಧಾನ ತಪ್ಪದೆ ಇರುವವರಾಗಿ ಆಜ್ಯವೇ ಮುಂತಾದ ಹವಿಸ್ಸುಗಳಿಂದಲೂ ಬಿಡದೆ ಮಾಡುವ ಧ್ಯಾನದಿಂದಲೂ ಕೂಡಿರುವ ಮನುಷ್ಯರಿಂದ ಎಂದರೆ ಕರ್ಮಿಗಳಿಂದಲೂ ಯೋಗಿಗಳಿಂದಲೂ *, ಯಜ್ಞದಲ್ಲಿಯೂ ಹೃದಯದಲ್ಲಿಯೂ ದಿನದಿನವೂ ಹೊಗಳಿಸಿಕೊಳ್ಳುತ್ತಲೂ ನಮಸ್ಕರಿಸಿಕೊಳ್ಳುತ್ತಲೂ ಇರುವನೋ ಅದು (ಅಂದರೆ ಅವನು) ಇದೇ, ಪ್ರಕೃತವಾದ ಬ್ರಹ್ಮವೆ.

**ಯಾವನಿಂದ ಸೂರ್ಯನು ಉದಯಿಸುವನೋ ಮತ್ತು ಯಾವನಲ್ಲಿ ಅಸ್ತವನ್ನು ಹೊಂದುವನೋ ಅವನನ್ನು ಎಲ್ಲಾ ದೇವತೆಗಳೂ ಸೇರಿರುವರು. ಅವನನ್ನು ಯಾರೂ ಮೀರಲರಿಯರು. ಇದೇ ಅದು.**

ಮತ್ತು ಯಾವ ಪ್ರಾಣನಿಂದ† ಸೂರ್ಯನು ಉದಯಿಸುವನೋ ಹೊರ ತೋರಿಕೊಳ್ಳುವನೋ ಯಾವ ಪ್ರಾಣನಲ್ಲಿಯೇ ಅಸ್ತವನ್ನು ಎಂದರೆ ಮುಳುಗುವಿಕೆಯನ್ನು ಪ್ರತಿದಿನವೂ ಹೊಂದುತ್ತಿರುವನೋ ಅಂಥ ಪ್ರಾಣನೆಂಬ ಆತ್ಮನನ್ನೇ ಅಗ್ನಿ ಮುಂತಾದ ಅಧಿದೈವದ ದೇವತೆಗಳೂ ಅಧ್ಯಾತ್ಮವಾದ‡ ವಾಕ್ಕು ಮುಂತಾದ

---

* ಮೂಲದಲ್ಲಿ ಯಜ್ಞವೊಂದನ್ನೇ ಕೊಟ್ಟಿದ್ದರೂ ಇದು ಉಪಲಕ್ಷಣವು; ಕರ್ಮೋಪಾಸನೆಗಳೆರಡರಲ್ಲಿಯೂ ಯಾವದನ್ನು ಜನರು ಸೇವಿಸುತ್ತಿರುವರೋ ಅದು ಬ್ರಹ್ಮವೇ ಎಂಬುದು ತಾತ್ಪರ್ಯ ಇದನ್ನು ತೋರಿಸುವದಕ್ಕೆ ಭಾಷ್ಯಕಾರರು ಯೋಗಿಗಳನ್ನೂ ಮಂತ್ರಕ್ಕೆ ಎಲ್ಲಾ ಕಡೆಯಲ್ಲಿಯೂ ಹೊಂದಿಸಿ ಹೇಳಿರುತ್ತಾರೆ

† ಹಿರಣ್ಯಗರ್ಭನಿಂದ

‡ ವಾಕ್ಕು, ಪಾಣಿ- ಮುಂತಾದ ಶರೀರದಲ್ಲಿರುವ ಇಂದ್ರಿಯಗಳಿಗೆ ಅಧ್ಯಾತ್ಮದೇವತೆಗಳೆಂದು ಹೆಸರು; ಈ ಇಂದ್ರಿಯಗಳ ಕೆಲಸವನ್ನು ನೆರವೇರಿಸುವ ಅಗ್ನಿಯೇ ಮುಂತಾದ ದೇವತೆಗಳಿಗೆ ಅಧಿದೈವದೇವತೆಗಳೆಂದು ಹೆಸರು.

ದೇವತೆಗಳೂ ಎಲ್ಲರೂ ಹಾರೇಕೋಲುಗಳು ಗುಂಬದಲ್ಲಿ * ಹೇಗೋ ಹಾಗೆ- ತಾವು ಇರುವ ಕಾಲದಲ್ಲಿ ಸೇರಿಕೊಂಡಿರುವರು. ಆ ಪ್ರಾಣನೂ ಬ್ರಹ್ಮವೇ. ಆದ್ದರಿಂದ ಈ ಬ್ರಹ್ಮವು ಸರ್ವಾತ್ಮಕವಾಗಿರುವದು. ಅದನ್ನು ಯಾರೂ ವಿಚಾರ ಲರಿಯರು, ಅದರ ಸ್ವರೂಪವನ್ನು † ವಿಚಾರಿ ಅದಕ್ಕಿಂತ ಬೇರೆಯ ಸ್ವರೂಪ ವನ್ನು ಯಾವದೂ ಪಡೆಯಲರಿಯದು. ಇದೇ ಅದು.

**ಇಲ್ಲಿ ಯಾವದಿರುವದೋ ಅದೇ ಅಲ್ಲಿ(ರುವದು), ಯಾವದು ಅಲ್ಲಿ(ರುವದೋ) ಅದೇ ಇಲ್ಲಿಯೂ ಅನುಸರಿಸಿರುವದು. ಇಲ್ಲಿ ಬೇರೆ ಬೇರೆಯಾಗಿದ್ದಂತೆ ಯಾವಾತನು ಕಾಣುವನೋ ಅವನು ಮೃತ್ಯುವಿ ನಿಂದ ಮೃತ್ಯುವನ್ನು ಪಡೆಯುವನು. || ೧೦ ||**

ಬ್ರಹ್ಮನು ಮೊದಲಾಗಿ ಸ್ಥಾವರ(ಪ್ರಾಣಿಗಳ)ವರೆಗೂ ಇದ್ದುಕೊಂಡು ಆಯಾ ಉಪಾಧಿಯಿಂದ ಕೂಡಿರುವದರಿಂದ 'ಬ್ರಹ್ಮವಲ್ಲದಂತೆ ತೋರಿಕೊಳ್ಳು ತ್ತಿರುವ ಸಂಸಾರಿಯು ಪರಬ್ರಹ್ಮಕ್ಕಿಂತ ಬೇರೆಯೇ (ಆಗಿರಬೇಕು)'— ಎಂದು ಯಾರಿಗಾದರೂ (ಶಂಕೆ ಬಂದೀತು. ಹಾಗೆ) ಬರದೆ ಇರುವದಕ್ಕಾಗಿ ಈ (ಮಾತನ್ನು) ಹೇಳಿದ್ದಾನೆ. ಇಲ್ಲಿ ಕಾರ್ಯಕರಣಗಳೆಂಬ ‡ ಉಪಾಧಿಯಿಂದ ಕೂಡಿಕೊಂಡು ಸಂಸಾರಧರ್ಮಗಳನ್ನುಳ್ಳ (ಜೀವ)ನಂತೆ ಅವಿವೇಕಿಗಳಿಗೆ ಯಾವದು ತೋರುತ್ತಿರು ವನೋ ಅದೇ ತನ್ನ ಸ್ವರೂಪದಲ್ಲಿದ್ದುಕೊಂಡು ಅಲ್ಲಿ ನಿತ್ಯಚೈತನ್ಯದ ಗಟ್ಟಿಯ ಸ್ವಭಾವದ್ದಾಗಿ ಯಾವ ಸಂಸಾರದ ಧರ್ಮವೂ ಇಲ್ಲದ ಬ್ರಹ್ಮ(ವಾಗಿರುವದು.) ಯಾವದು ಅಲ್ಲಿ ಎಂದರೆ ಆ ಆತ್ಮನಲ್ಲಿರುವದೋ ಅದೇ ಇಲ್ಲಿ ನಾಮರೂಪ ಗಳಿಂದಾದ ಕಾರ್ಯಕರಣಗಳೆಂಬ ಉಪಾಧಿಯನ್ನನುಸರಿಸಿ (ಬೇರೆ ಬೇರೆಯಾಗಿ) ತೋರುತ್ತಿರುವದೇ ಹೊರತು ಬೇರೆಯಲ್ಲ.

ಇದು ಹೀಗಿರುವದರಿಂದ ಉಪಾಧಿಯ ಸ್ವಭಾವದಿಂದಾದ ಭೇದದ ದೃಷ್ಟಿ ಎಂಬ **ಅವಿದ್ಯೆ**ಯಿಂದ ಭ್ರಾಂತನಾಗಿ ಯಾವಾತನು ಬೇರೆ ಬೇರೆಯಾಗಿರದ ಈ ಬ್ರಹ್ಮದಲ್ಲಿ 'ಪರಮಾತ್ಮನಿಗಿಂತ ನಾನು ಬೇರೆ, ನನಗಿಂತ ಪರಬ್ರಹ್ಮವೆಂಬುದು ಬೇರೆ ಇರುವದು' ಎಂದು ಬೇರೆಬೇರೆಯಾಗಿ ಭೇದವಾಗಿರುವಂತೆ ಕಾಣುವನೋ ಅವನು ಮೃತ್ಯುವಿನಿಂದ ಮೃತ್ಯುವನ್ನು ಹೊಂದುವನು, ನಾವಿನ ಮೇಲೆ

---

* ಪ್ರಶ್ನ ೨-೬ರ ಸೂಚನೆ

† ಇಲ್ಲಿ ಸುಷುಪ್ತಿಯಲ್ಲಿ ಆತ್ಮಸ್ವರೂಪವನ್ನೂ ಜಾಗ್ರತ್ಸ್ವಪ್ನಗಳಲ್ಲಿ ತತ್ಸಂಬಂಧವನ್ನೂ ಹೊಂದುತ್ತಾರೆ- ಎಂದು (ಗೋ||) ಟೀಕಾಕಾರರು ಕಲ್ಪಿಸಿರುತ್ತಾರೆ. ಈ ಭೇದಕ್ಕೆ ಆವಶ್ಯಕತೆ ಯೇನೂ ಕಾಣುವದಿಲ್ಲ; ಬ್ರಹ್ಮವನ್ನು ಬಿಟ್ಟು ಏನೂ ಇಲ್ಲ ಎಂಬುದು ಪ್ರಕೃತ.

‡ 'ಕಾರ್ಯಕರಣೋಪಾಧಿ' ಎಂಬ ಪಾಠವೇ ಉತ್ತಮವೆಂಬುದು ಭಾಷ್ಯದ ಬೇರೆ ಕಡೆ ಗಳನ್ನು ನೋಡಿದರೆ ಗೊತ್ತಾಗುವದು.

ಸಾವನ್ನು ಹೊಂದುತ್ತಾ ಮತ್ತೂ ಮತ್ತೂ ಹುಟ್ಟುಹೋಂದುಗಳೆಂಬ ಧರ್ಮವನ್ನು ಹೊಂದುತ್ತಿರುವನು. ಆದ್ದರಿಂದ ಹಾಗೆ ತಿಳಿಯಬಾರದು, 'ಒರಿಯು ವಿಜ್ಞಾನರೂಪವಾಗಿಯೇ ಇರುವದಾಗಿಯೂ ಕಡಿನಡೆಯುದ ಆಕಾಶದಂತೆ* ಎಲ್ಲೆಲ್ಲಿಯೂ ತುಂಬಿಕೊಂಡಿರುವದಾಗಿಯೂ ಇರುವ ಬ್ರಹ್ಮವೇ ಆಗಿರುವೆನು' ಎಂದು ತಿಳಿಯಬೇಕು- ಎಂಬುದು (ಈ) ವಾಕ್ಯದ (ಒಟ್ಟು) ಅರ್ಥವು

## ಬ್ರಹ್ಮದಲ್ಲಿ ಯಾವ ಭೇದವೂ ಇಲ್ಲ

**ಇದು ಮನಸ್ಸಿನಿಂದಲೇ ಪಡೆಯಲ್ಪಡತಕ್ಕದ್ದು, ಇಲ್ಲಿ ಸ್ವಲ್ಪವೂ ಭೇದವಿರುವದಿಲ್ಲ. ಯಾವನು ಇಲ್ಲಿ ಬೇರೆ ಬೇರೆಯಾಗಿದ್ದಂತೆ ಕಾಣುವನೋ ಅವನು ಮೃತ್ಯುವಿನಿಂದ ಮೃತ್ಯುವನ್ನು ಪಡೆಯುತ್ತಾನೆ. ॥೧೧॥**

(ಇದು) ಒಂದೇ ಎಂದು ಅರಿಯುವದಕ್ಕೆ ಮುಂಚೆ † ಆಚಾರ್ಯನು, ಶಾಸ್ತ್ರ- ಇವುಗಳಿಂದ ಸಂಸ್ಕಾರವನ್ನು ಹೊಂದಿದ ಮನಸ್ಸಿನಿಂದ ಈ ಏಕರೂಪವಾಗಿರುವ ಬ್ರಹ್ಮವು '(ನಮ್ಮ) ಆತ್ಮವೇ (ಬ್ರಹ್ಮವು) ಇದಕ್ಕಿಂತ ಬೇರೆ ಯಾವದೂ ಇಲ್ಲ'- ಎಂದು ಪಡೆಯಲ್ಪಡಬೇಕಾಗಿರುವದು. ಹಾಗೆ ಪಡೆದು - **ಅರಿತುಕೊಂಡ ಮೇಲೆ ಭೇದವನ್ನು ಕಲ್ಪಿಸುವ ಅವಿದ್ಯೆಯು ಹೋಗಿಬಿಡುವದರಿಂದ** ಈ ಬ್ರಹ್ಮದಲ್ಲಿ ಸ್ವಲ್ಪವೂ ಅಣುಮಾತ್ರವೂ ಭೇದವಿರುವದಿಲ್ಲ. ‡

ಆದರೆ ಯಾವನು ಅವಿದ್ಯೆಯೆಂಬ ಕಣ್ಣುಪರೆಯ ದೃಷ್ಟಿಯನ್ನು ಬಿಡದೆ ಭೇದವಿದ್ದಂತೆ ಕಾಣುವನೋ ಅವನು ಒಂದಿಷ್ಟು ಭೇದವನ್ನೂ ಕಲ್ಪಿಸಿಕೊಂಡರೂ (ಅಷ್ಟು ಮಾತ್ರದಿಂದ) ಸಾವಿನ ಮೇಲೆ ಸಾವನ್ನು ಹೊಂದುತ್ತಲೆ ಇರುವನು.

---

* ಆಕಾಶವು ಗಡಿಗೆ, ಮಡಕೆ, ಕುಡಿಕೆ, ಮನೆ- ಮುಂತಾದ ಉಪಾಧಿಗಳಿಂದ ಬೇರೆ ಬೇರೆಯಾಗಿ ತೋರುತ್ತಿದ್ದರೂ ತಾನು ಒಂದೇ ಅಖಂಡವಾಗಿರುವದು, ಅದರಂತೆ ಬ್ರಹ್ಮನಿಂದ ಸ್ತಂಬದವರೆಗಿನ ದೇಹೇಂದ್ರಿಯಗಳ ಉಪಾಧಿಯಿಂದ ಜೀವರು ಬೇರೆ ಬೇರೆ ಇರುವರೆಂದು ತೋರುತ್ತಿರುವದಾದರೂ ನಿಜವಾಗಿ ಉಪಾಧಿಗಳ ಸಂಬಂಧವಿಲ್ಲದ ಆತ್ಮನು ಬ್ರಹ್ಮವೇ ಆಗಿರುವನು ಏಕೆಂದರೆ ಆ ಉಪಾಧಿಗಳೂ ಅಜ್ಞಾನದಿಂದ ಕಲ್ಪಿತವಾಗಿರುತ್ತವೆ, ಆದ್ದರಿಂದ ಅವುಗಳಿಂದ ಬ್ರಹ್ಮಕ್ಕೆ ಯಾವ ಅಳತೆಯೂ ಗೊತ್ತಾಗಿರುವದಿಲ್ಲ.

† ಬ್ರಹ್ಮವನ್ನು ಅರಿಯಬೇಕು ಎಂಬ ವ್ಯವಹಾರದಿಂದ ಅರಿಯುವವನೊಬ್ಬ, ಅರಿಯಲ್ಪಡುವ ಪರಮಾತ್ಮನೊಬ್ಬ, ಅರಿವು ಬೇರೆ- ಎಂದು ಕಲ್ಪಿಸಬಾರದು ಎಂದು ಭಾವ.

‡ ಅರಿತ ಮೇಲೂ ಸ್ವಲ್ಪ ಅವಿದ್ಯೆಯು ಉಳಿದುಕೊಂಡಿರುವದು- ಎಂದು ಈಗಿನ ವೇದಾಂತಿಗಳು ಕೆಲವರು ಹೇಳುತ್ತಿರುವರು; ಇದು ಭಾಷ್ಯಸಮ್ಮತವಲ್ಲ.

**ಅಂಗುಷ್ಠಮಾತ್ರನಾದ ಪುರುಷನು ಆತ್ಮದ ಮಧ್ಯದಲ್ಲಿರುತ್ತಿರುವನು. ಭೂತಕ್ಕೂ ಭವಿಷ್ಯತ್ತಿಗೂ ಇವನು ಒಡೆಯನು-ಎಂದು ತಿಳಿದರೆ ಆಮೇಲೆ ಕಾಪಾಡಿಕೊಳ್ಳುವದಕ್ಕೆ ಇಚ್ಛಿಸುವದಿಲ್ಲ. ಇದೇ ಅದು. ||೧೨||**

ಮತ್ತೂ ಅದೇ ಪ್ರಕೃತವಾದ ಬ್ರಹ್ಮವನ್ನೇ ಹೇಳುತ್ತಾರೆ. ಅಂಗುಷ್ಠಮಾತ್ರನು* ಎಂದರೆ ಹೆಬ್ಬೆರಳಿನ ಗಾತ್ರದವನು. ಹೃದಯಕಮಲವು ಹೆಬ್ಬೆರಳಿನ ಪರಿಮಾಣವಾಗಿರುವದು; ಅದರ ಪೊಳ್ಳಿನಲ್ಲಿರುವ ಅಂತಃಕರಣವೆಂಬ ಉಪಾಧಿಯುಳ್ಳ ಆತ್ಮನು ಅಂಗುಷ್ಠಮಾತ್ರದವನು ಹೆಬ್ಬೆರಳಿನ ಪರಿಮಾಣದ ಬಿದಿರಿನ ಗಿಣ್ಣಿನ ಒಳಗಿರುವ ಆಕಾಶವು ಹೇಗೆ (ಅಷ್ಟೇ ಪರಿಮಾಣದ್ದೆಂದು ಭಾವಿಸಲ್ಪಡುವದೋ ಅದ)ರಂತೆಯೇ† (ಇದು) ಎಲ್ಲವನ್ನೂ ಈ ಆತ್ಮನು ತುಂಬಿಕೊಂಡಿರುವದರಿಂದ ಇವನು ಪುರುಷನೆನಿಸುವನು– (ಈ ಪುರುಷನು) ಆತ್ಮದ ಮಧ್ಯದಲ್ಲಿ ಎಂದರೆ ಶರೀರದ (ನಡುವೆ) ಇರುವನು.

'ಯಾವಾತನು ಈ ಆತ್ಮನನ್ನು ಹಿಂದಿನ ಮುಂದಿನ ಕಾಲಗಳ ಒಡೆಯನೆಂದು ತಿಳಿಯುವನೋ ಅವನು ಆಮೇಲೆ (ಕಾಪಾಡಿಕೊಳ್ಳುವದಕ್ಕೆ ಇಚ್ಛಿಸುವದಿಲ್ಲ)' ಎಂಬುದೇ ಮುಂತಾದ ವಾಕ್ಯದ ಅಭಿಪ್ರಾಯವನ್ನು ಹಿಂದಿನಂತೆಯೇ ‡ ಅರಿಯಬೇಕು.

**ಅಂಗುಷ್ಠಮಾತ್ರನಾದ ಪುರುಷನು ಹೊಗೆಯಿಲ್ಲದ ಜ್ಯೋತಿಯಂತೆ ಇರುವನು); ಭೂತಕ್ಕೂ ಭವಿಷ್ಯತ್ತಿಗೂ ಒಡೆಯನು. ಈಗಲೂ ಆತನೆ, ನಾಳೆಯೂ ಆತನೆ (ಇರುವನು). ಇದೇ ಅದು. || ೧೩ ||**

ಮತ್ತು ಅಂಗುಷ್ಠಮಾತ್ರನಾದ (ಈ) ಪುರುಷನು ಹೊಗೆಯಿಲ್ಲದ ಜ್ಯೋತಿಯಂತೆ (ಇರುವನು). (ಮೂಲದಲ್ಲಿ ಅಧೂಮಕಃ ಎಂದಿದೆಯಷ್ಟೆ ;) 'ಅಧೂಮಕಮ್' ಎಂದು ಇರಬೇಕು ; ಏಕೆಂದರೆ (ಇದು) ಜ್ಯೋತಿ ಎಂಬ (ನಪುಂಸಕ

---

* ಇಲ್ಲಿ ಅಂಗುಷ್ಠಮಾತ್ರನು ಎಂದು ಶ್ರುತಿ ಹೇಳಿದ್ದರೂ ನಿಜವಾಗಿ ಆತ್ಮನಿಗೆ ಗಾತ್ರವನ್ನು ಹೇಳುವದಕ್ಕೆ ಶ್ರುತಿಯು ಬಂದಿಲ್ಲ, ಆಕಾಶಕ್ಕೆ ಉಪಾಧಿಯಿಂದ ಅಳತೆಯಾಗಿರುವಂತೆ ಅಜ್ಞಾನ ಕಲ್ಪಿತವಾದ ಉಪಾಧಿಯಿಂದ ಆತ್ಮನಿಗೆ ಜನರು ಪರಿಮಾಣವನ್ನು ಆರೋಪಿಸುತ್ತಾರೆಂದು ಹೇಳುವದಕ್ಕೆ ಶ್ರುತಿ ಬಂದಿದೆ ನಿಜವಾಗಿ ಇದೇ ಆತ್ಮನೆ ತ್ರಿಕಾಲಕ್ಕೆ ಒಡೆಯನಾದ ಪರಮಾತ್ಮನು ಎನ್ನುವದು ವಾಕ್ಯಾರ್ಥ. ಇದು ಬ್ರಹ್ಮಸೂತ್ರ (೧–೩–೨೪)ದಲ್ಲಿ ನಿರ್ಣಯವಾಗಿದೆ

† ಉಪಾಧಿಯಿಂದ ಹೆಬ್ಬೆರಳಿನ ಗಾತ್ರದವನಾದರೂ ನಿಜವಾಗಿ ಸರ್ವವ್ಯಾಪಿಯಾಗಿ ಯಾವ ಅಳತೆಗೂ ಸಿಕ್ಕದವನೆಂದು ತಿಳಿಸುವದಕ್ಕಾಗಿ ಶ್ರುತಿಯಲ್ಲಿ ಪುರುಷನು ಎಂಬ ಮಾತು ಬಂದಿದೆಯೆಂದು ಭಾವ.

‡ ಭೂತಭವಿಷ್ಯತ್ತಿಗೆ ಒಡೆಯನು ಎಂಬುದನ್ನು (೫ನೆಯ ಮಂತ್ರದ ಭಾಷ್ಯದಂತೆ) 'ಇದೇ ಅದು' ಎಂಬ ವಾಕ್ಯವನ್ನು ೩ನೆಯ ಮಂತ್ರದ ಭಾಷ್ಯದಂತೆ ಅರ್ಥಮಾಡಿಕೊಳ್ಳಬೇಕಾಗುವದು– ಎಂದು ಭಾವ

ಲಿಂಗದ ಶಬ್ದಕ್ಕೆ) ವಿಶೇಷಣವಾಗಿರುತ್ತದೆ. ಯಾವ (ಆತ್ಮನು) ಈ ರೂಪದಲ್ಲಿ ಯೋಗಿಗಳಿಗೆ ಹೃದಯದಲ್ಲಿ ಕಾಣಿಸಿಕೊಳ್ಳುತ್ತಾನೋ, (ಆತನು) ಭೂತಭವಿಷ್ಯತ್ತಿಗೂ ಒಡೆಯನು; ಅವನೇ ಎಂದರೆ, ನಿತ್ಯನೂ ಮಾರ್ಪಾಡುಗಳಿಲ್ಲದವನೂ ಆದ ಆ (ಆತ್ಮನೇ) ಈಗ ಪ್ರಾಣಿಗಳಲ್ಲಿರುವವನು; ನಾಳೆಯೂ ಅವನೇ ಇರುವನೇ ಹೊರತು ಅವನಂಥವನು ಮತ್ತೊಬ್ಬನು ಹುಟ್ಟುವದಿಲ್ಲ*– ಎಂದರ್ಥ.

ಈ ಮಂತ್ರದಿಂದ (ಏನು ತಿಳಿಯಬೇಕೆಂದರೆ)— 'ಇವನು ಇರುವದಿಲ್ಲವೆಂದು ಕೆಲವರು ಹೇಳುತ್ತಾರೆ' (೧-೧-೨೦) ಎಂಬ ಪಕ್ಷವು ಯುಕ್ತಿಗೆ ಹೊಂದುವದೇ † ಇಲ್ಲವಾದಾಗ್ಯೂ ಅದನ್ನು ಶ್ರುತಿಯು ತನ್ನ ಮಾತಿನಿಂದಲೇ ತಿರಸ್ಕಾರಮಾಡಿರುತ್ತದೆ. ಇದರಂತೆಯೇ ಕ್ಷಣಭಂಗವಾದವೂ ‡ (ಯುಕ್ತಿಗೆ ವಿರುದ್ಧವಾಗಿದೆಯಾದರೂ ಶ್ರುತಿಯು ತಾನೇ ಅದನ್ನು ತಿರಸ್ಕರಿಸಿದೆ.)

## ಜ್ಞಾನಾಜ್ಞಾನಗಳಿಗೆ ಫಲ

**ದುರ್ಗದಲ್ಲಿ ಮಳೆ ಹೊಯ್ದ ನೀರು ಪರ್ವತಗಳಲ್ಲಿಯೇ ಹೇಗೆ ಹರಿದು ಹೋಗುತ್ತದೆಯೋ, ಇದರಂತೆ ಧರ್ಮಗಳನ್ನು ಬೇರೆಯೆಂದು ಕಾಣುವಾತನು ಅವರನ್ನೇ ಅನುಸರಿಸಿ ಓಡುತ್ತಿರುವನು. ॥ ೧೪ ॥**

---

* ಅನ್ಯಶ್ಚ ಎಂಬುದರ ಮುಂದೆ 'ನ' ಎಂಬ ಮಾತು ಬಿಟ್ಟಿರುವಂತೆ ತೋರುತ್ತದೆ 'ನಾನ್ಯಃ' ಎಂಬುದು ಚಾರ್ವಾಕಮತದ ಖಂಡನೆ, 'ತತ್ಸಮೋಽನ್ಯಶ್ಚ ನ ಜನಿಷ್ಯತೇ' ಎಂಬುದು ಕ್ಷಣಿಕವಾದದ ಖಂಡನೆ.

† ಮರಣಾನಂತರದಲ್ಲಿ ಮತ್ತೊಂದು ದೇಹವನ್ನು ಪಡೆಯತಕ್ಕ ಆತ್ಮನು ಇರುವದಿಲ್ಲವೆಂದು ಕೆಲವರು ಹೇಳುತ್ತಾರಷ್ಟೆ, ಈ ಚಾರ್ವಾಕರ ಮತ್ತು ಶೂನ್ಯವಾದಿಗಳ ವಾದವು ಯುಕ್ತಿಗೆ ವಿರುದ್ಧವಾದದ್ದು. ಇದನ್ನು ನಿರಾಕರಣೆಮಾಡಬೇಕಾದದ್ದೇ ಇಲ್ಲ ಏಕೆಂದರೆ ಮಾಡಿದ ಕರ್ಮಕ್ಕೆ ಫಲವಿಲ್ಲದೆ ಮಾಡದೆ ಇದ್ದದ್ದಕ್ಕೆ ಫಲ ಉಂಟಾಗುವುದೆಂಬ ದೋಷವು ಈ ಪಕ್ಷದಲ್ಲಿ ಉಂಟಾಗುತ್ತದೆ.

‡ ನಾನು ಎಂಬ ಅರಿವಿಗೆ ಅನುಸಾರವಾಗಿ ಸ್ಥಿರವಾದ ಆತ್ಮನನ್ನು ಇಟ್ಟುಕೊಳ್ಳಬೇಕಾದದ್ದೇನೂ ಇಲ್ಲ; ದೀಪದ ಉರಿಯಂತೆ ಹಿಂದೆ ಇದ್ದ ಅಹಂಪ್ರತ್ಯಯದ ಆಕಾರವಾಗಿ ಮುಂದೆಮುಂದೆ ಹೊಸದೊಂದು ಅಹಂಕಾರವು ಹುಟ್ಟುತ್ತಾ ಇರುವದು– ಎಂದು ಬೌದ್ಧರು ಹೇಳುವರು. ಈ ಪಕ್ಷದಲ್ಲಿ ಹಿಂದೆ ಅನುಭವಿಸಿದ್ದನ್ನು ಈಗ ನೆನೆಸಿಕೊಳ್ಳುವದು ಹೇಗೆಂಬುದನ್ನು ಸರಿಯಾಗಿ ವಿವರಿಸಿ ಹೇಳುವದಕ್ಕೆ ಆಗದೆ ಇರುವದು, ಮತ್ತು ಅಹಂಕಾರವು ಬೇರೆ ಹುಟ್ಟುವದೆಂಬುದಕ್ಕೆ ಸಾಕ್ಷಿ ಬೇಕಾಗುವದರಿಂದ ಸಾಕ್ಷಿಯ ನಾಶವನ್ನು ಕಲ್ಪಿಸುವದಕ್ಕೆ ಯುಕ್ತಿಯಿಲ್ಲ. ಆದ್ದರಿಂದ ಈ ಮತವೂ ಅಯುಕ್ತ ಎಂದು ಭಾವ.

ಬ್ರಹ್ಮದಲ್ಲಿ ಭೇದವನ್ನು ಕಾಣಬಾರದೆಂದು ಮತ್ತೂ ಹೇಳುತ್ತಾನೆ. ಹೇಗೆ ದುರ್ಗದಲ್ಲ ಎಂದರೆ ದುರ್ಗಮವಾದ ಎತ್ತರವಾದ ಸ್ಥಳದಲ್ಲಿ ಮಳೆಹೊಯ್ದ ನೀರು, ಪರ್ವತಗಳಲ್ಲಿ ಎಂದರೆ ಪರ್ವತಗಳುಳ್ಳ ತಗ್ಗಾದ ತಪ್ಪಲುಗಳಲ್ಲಿ ಹರಿದು ಹೋಗುತ್ತದೆಯೋ ಎಂದರೆ ಚದರಿ ನಾಶವಾಗುತ್ತದೆಯೋ, ಇದರಂತೆ **ಧರ್ಮರು ಗಳನ್ನು ಎಂದರೆ ಆತ್ಮರುಗಳನ್ನು** ಬೇರೆ ಬೇರೆ ಎಂದು ತಿಳಿದವನು ಎಂದರೆ ಪ್ರತಿ ಶರೀರಕ್ಕೂ ಬೇರೆ ಬೇರೆಯಾಗಿರುವರು ಎಂದು ತಿಳಿದವನು, ಶರೀರಭೇದ ವನ್ನು ಅನುಸರಿಸಿರುವ ಅವರನ್ನೇ ಹಿಂಬಾಲಿಸಿ ಓಡುತ್ತಿರುವನು, ಮತ್ತೂ ಮತ್ತೂ ಬೇರೆ ಬೇರೆ ಶರೀರವನ್ನೇ ಹೊಂದುತ್ತಿರುವನು ಎಂದರ್ಥ.

**ಹೇಗೆ ಶುದ್ಧವಾದ ನೀರು ಶುದ್ಧವಾದ (ನೀರಿನಲ್ಲಿ) ಹಾಕಿದರೆ ಅದ ರಂತೆಯೇ ಆಗುವದೋ, ಇದರಂತೆಯೇ ಎಲೈ ಗೌತಮನೆ, ತಿಳಿದಾತನ ಆತ್ಮನು ಆಗುವನು.** ‖ ೧೫ ‖

ಆದರೆ ಯಾವನು ಜ್ಞಾನಿಯಾಗಿ ಉಪಾಧಿಯಿಂದಾಗಿರುವ ಭೇದಜ್ಞಾನ ವನ್ನು ನಾಶಪಡಿಸಿಕೊಂಡು ಅತಿಶುದ್ಧವಾದ ಒರಿಯು ವಿಜ್ಞಾನದ ಗಟ್ಟಿಯೇ ಆಗಿರುವ ಎರಡನೆಯದಿಲ್ಲದ ಆತ್ಮನನ್ನು ಕಂಡು ಇರುವನೋ ಆ ಜ್ಞಾನಿಯಾದ ಮನನಶೀಲನಾದ ಮುನಿಯ ಆತ್ಮಸ್ವರೂಪವು ಹೇಗಿರುವದು ? ಎಂಬುದನ್ನು (ಈ ಮಂತ್ರದಲ್ಲಿ) ಹೇಳಿರುತ್ತದೆ

ಶುದ್ಧವಾದ ತಿಳಿನೀರನ್ನು ಶುದ್ಧವಾದ ತಿಳಿನೀರಿನಲ್ಲಿ ಹಾಕಿದರೆ ಹೇಗೆ ಒಂದೇ ರೂಪವಾಗಿರುವದೋ ಅದಕ್ಕಿಂತ ಬೇರೆಯಾಗಿರುವದಿಲ್ಲವೋ, ಅದರಂತೆಯೇ (ತಾನೂ) ಆಗಿಬಿಡುವದೋ, ಎಲೈ ಗೌತಮನೆ, ಏಕತ್ವವನ್ನು ಅರಿತು * ಮನನ ಮಾಡುತ್ತಿರುವ ಮುನಿಯ ಆತ್ಮನೂ ಇದರಂತೆಯೇ ಆಗಿರುವನು.

ಆದ್ದರಿಂದ ಕೆಟ್ಟತಾರ್ಕಿಕರ† ಭೇದದೃಷ್ಟಿಯನ್ನೂ ನಾಸ್ತಿಕರ ‡ ಕುದೃಷ್ಟಿ

---

* ನೀರಿನಲ್ಲಿ ನೀರನ್ನು ಹಾಕಿದಂತೆ ಪರಮಾತ್ಮನಲ್ಲಿ ಜೀವಾತ್ಮನನ್ನು ಹಾಕಿ ಮುಳುಗಿಸ ಬೇಕಾದದ್ದು ಇಲ್ಲ. ಈಗ ನಾವು ತಿಳಿದುಕೊಂಡಿರುವ ಸಂಸಾರಿರೂಪವು ಸುಳ್ಳೆಂತಲೂ ಇವನ ನಿಜವಾದ ರೂಪವು ಬ್ರಹ್ಮವೇ ಎಂತಲೂ ತಿಳಿದುಕೊಂಡರೆ ಅದೇ ಬ್ರಹ್ಮದಲ್ಲಿ ಸಾಯುಜ್ಯವನ್ನು ಹೊಂದಿದಂತೆ. ಭೇದವಿರುವದಿಲ್ಲವೆಂದು ತಿಳಿಸುವದಕ್ಕೆ ಮಟ್ಟಿಗೆ ದೃಷ್ಟಾಂತವನ್ನು ಅನ್ವಯಿಸಿ ಕೊಳ್ಳಬೇಕು.

† ನಮ್ಮ ಶರೀರಕ್ಕೆ ಒಬ್ಬ ಆತ್ಮನಿರುವಂತೆಯೇ ನೋಡುವ ಶರೀರಕ್ಕೆಲ್ಲ ಒಂದೊಂದು ಆತ್ಮವು ಇರಬೇಕೆಂದು ಊಹಿಸುವದು ಕೆಟ್ಟ ತರ್ಕವು ; ಏಕೆಂದರೆ ನಾವು ಶರೀರಕ್ಕೆ ಸಂಬಂಧಪಟ್ಟಿ ರುವೆವೆಂಬುದಕ್ಕೇ ಪ್ರಮಾಣವಿಲ್ಲ, ಕನಸಿನಲ್ಲಿ ಎಷ್ಟೋ ಶರೀರಗಳು ನಮಗೆ ಕಂಡರೂ ಅವುಗಳಿಗೆ ಬೇರೆ ಆತ್ಮರಿರುವರೆಂದು ನಾವು ಆಗ ನಂಬಿರುವೆವಾದರೂ ನಿಜವಾಗಿ ಅವುಗಳು ಶರೀರವೆಂದಾಗಲಿ ಅವುಗಳಿಗೆ ಬೇರೆ ಬೇರೆ ಆತ್ಮವಿರುವರೆಂದಾಗಲಿ ಯಾರೂ ಒಪ್ಪುವದಿಲ್ಲ.

‡ ಇಂದ್ರಿಯಗಳಿಗೆ ಗೋಚರವಾದದ್ದೇ ಸತ್ಯವು ಎಂದು ಚಾರ್ವಾಕರೆನ್ನುವರು. ಕ್ಷಣಿಕ

ಯನ್ನೂ ಬಿಟ್ಟು ಸಾವಿರ ತಾಯಿ ತಂದೆಗಳಿಗಿಂತಲೂ ಹೆಚ್ಚಾಗಿ ಸರ್ವರಿಗೆ ಹಿತವನ್ನು ಬಯಸುತ್ತಿರುವ ವೇದವು ಆತ್ಮನು ಒಬ್ಬನೇ (ಸತ್ಯವೆಂದು) ಉಪದೇಶಮಾಡುತ್ತಿರುವ ದರ್ಶನವನ್ನು ಶಾಂತಮನಸ್ಕರಾಗಿ ಸ್ವೀಕರಿಸಬೇಕು ಎಂದು ಅರ್ಥ.

——o——

# ಎರಡನೆಯ ಅಧ್ಯಾಯ—ಎರಡನೆಯ ವಲ್ಲಿ

ಬ್ರಹ್ಮವನ್ನು ತಿಳಿಯುವದು ಕಷ್ಟವಾದ್ದರಿಂದ ಬೇರೊಂದು ಪ್ರಕಾರದಿಂದ ಬ್ರಹ್ಮತತ್ತ್ವವನ್ನು ಮತ್ತೆ ಗೊತ್ತುಪಡಿಸಿಕೊಡಬೇಕೆಂದು (ಈ ವಲ್ಲಿಯನ್ನು) ಆರಂಭಿಸುತ್ತದೆ

## ಶರೀರದಲ್ಲಿರುವ ಆತ್ಮನ ನಿಜವಾದ ಸ್ವರೂಪವನ್ನು ಅರಿತರೆ ಮುಕ್ತಿ

**ಹನ್ನೊಂದು ಬಾಗಿಲಿನ ಈ ಪುರವು ಜನ್ಮವಿಲ್ಲದವನಾಗಿಯೂ ವಕ್ರವಲ್ಲದ ಚೇತಸ್ಸುಳ್ಳವನಾಗಿಯೂ ಇರುವಾತನದು. (ಆತನನ್ನು) ಅನುಷ್ಠಾನ ಮಾಡಿದರೆ ಶೋಕಿಸುವದಿಲ್ಲ; (ಮೊದಲೆ) ವಿಮುಕ್ತನಾಗಿ ವಿಮುಕ್ತನಾಗುವನು. ಇದೇ ಅದು. ॥ ೧ ॥**

ಬಾಗಿಲು ಕಾಯುವವರು, ಆನರ ಮೇಲಿನ ಧಣಿಗಳು, ಮುಂತಾದ † ಪುರಕ್ಕೆ ಬೇಕಾದ ಅನೇಕ ಉಪಕರಣಗಳು ಕೂಡಿರುವದು ಕಂಡುಬರುವದರಿಂದ ಈ ಶರೀರವು ಪುರದಂತೆ ಇರುವದು; ಆದ್ದರಿಂದ (ಇದನ್ನು) ಪುರವೆಂದು (ಕರೆದಿವೆ.) ಉಪಕರಣಗಳಿಂದೊಡಗೂಡಿದ ಪುರವು ತನ್ನೊಡನೆ ಸೇರಿಕೊಳ್ಳದೆ ಇರುವ

---

ಬುದ್ಧಿಯೇ ಆತ್ಮನೆಂದು ಬೌದ್ಧರೆನ್ನುವರು, ಯಾವದೂ ಸತ್ಯವಲ್ಲವೆಂದು ಶೂನ್ಯವಾದಿಗಳು ಎನ್ನುವರು ಇವರೆಲ್ಲ ಕುದೃಷ್ಟಿಗಳು, ಏಕೆಂದರೆ ಇವರು ತಮ್ಮ ಮತವನ್ನು ಸಾಧಿಸುವದಕ್ಕೆ ಬೇಕಾದ ನಿತ್ಯವಾದ ಅನುಭವಸ್ವರೂಪವಾಗಿರುವ ಆತ್ಮನು ತಾವೇ ಆಗಿದ್ದರೂ ಅದನ್ನು ಇಲ್ಲವೆನ್ನುತ್ತಿದ್ದಾರೆ

* ಆತ್ಮಾನುಭವವು ಬರದೆ ಇರುವದಕ್ಕೆ ಅಹಂಕಾರವೇ ಕಾರಣವು

†. ಮುಂತಾದ ಎಂದರೆ ಮಂತ್ರಿ, ಹೊಗಳುಭಟ್ಟರು— ಮುಂತಾದವರು, ಯಂತ್ರಗಳು, ಕೋಟೆ, ಕೊತ್ತಲು, ಮುಂತಾದದ್ದು ಇವುಗಳನ್ನು ಗ್ರಹಿಸಬೇಕು. (ಗೋ॥)

ಸ್ವತಂತ್ರನಾದ * ಸ್ವಾಮಿಗೋಸ್ಕರವಾಗಿರುವದೆಂಬುದು ಕಂಡೇ ಇದೆಯಷ್ಟೆ; ಅದರಂತೆ ಪುರದ ಹಾಗೆ ಅನೇಕ ಉಪಕರಣಗಳಿಂದ† ಕೂಡಿಕೊಂಡಿರುವ (ಈ) ಶರೀರವು ತನ್ನೊಡನೆ ಸೇರಿಕೊಳ್ಳದೆ ತನಗೆ ರಾಜನಂತಿರುವ ಒಬ್ಬ ಒಡೆಯನಿಗಾಗಿ ಇರಬೇಕಾಯಿತು.

ಅಂಥ ಈ ಶರೀರವೆಂಬ ಪುರವು ಹನ್ನೊಂದು ಬಾಗಿಲುಳ್ಳದ್ದು. ತಲೆಯಲ್ಲಿ ಏಳು, ಕೆಳಗಡೆಗೆ ಹೊಕ್ಕುಳೂ ಸೇರಿ ಮೂರು, ತಲೆಯ ಮೇಲೆ ಒಂದು—‡ ಹೀಗೆ ಇದಕ್ಕೆ ಹನ್ನೊಂದು ಬಾಗಿಲುಗಳಿರುವವು. ಹನ್ನೊಂದು ಬಾಗಿಲುಗಳುಳ್ಳ ಈ (ಶರೀರವು) ಯಾರ ಪುರವು? ಜನ್ಮವಿಲ್ಲದವನಾಗಿರುವ ಎಂದರೆ ಹುಟ್ಟು ಮುಂತಾದ ವಿಕಾರಗಳಿಲ್ಲದವನಾಗಿ (ದೃಷ್ಟಾಂತದ) ರಾಜನಂತೆ ಪುರದ ಧರ್ಮಗಳಿಗಿಂತ ಬೇರೆಯ ಸ್ವರೂಪನಾದ, ವಕ್ರನಲ್ಲದ ಚೇತಸ್ಸುಳ್ಳವನಾದ— ಕೊಂಕಿಲ್ಲದೆ ಸೂರ್ಯನ ಬೆಳಕಿನಂತೆ ಯಾವಾಗಲೂ ಒಂದೇ ರೂಪವಾಗಿ ಇರುವ **ಚೈತನ್ಯವೆಂಬ ಚೇತಸ್ಸುಳ್ಳವನಾದ್ದರಿಂದ** ಇವನಿಗೆ ಅವಕ್ರಚೇತಸ್ಸು ಎಂದು ಹೆಸರು. ಹೀಗೆ ವಕ್ರನಲ್ಲದ ಚೇತಸ್ಸುಳ್ಳ— ದೃಷ್ಟಾಂತದ ರಾಜನಂತಿರುವ ಬ್ರಹ್ಮನಿಗೆ (ಈ ಪುರವು ಸೇರಿದ್ದು. ಇದು ಯಾವಾತನ ಪುರವೊ ಆ ಪುರಸ್ವಾಮಿಯಾದ ಪರಮೇಶ್ವರನನ್ನು ಅನುಷ್ಠಾನ ಮಾಡಿ, ಎಂದರೆ ಧ್ಯಾನಮಾಡಿ; ಚೆನ್ನಾಗಿ ತಿಳಿದುಕೊಂಡು § ಧ್ಯಾನ

* ಆತ್ಮನನ್ನು ಅನುಮಾನಿಸುವದಕ್ಕೆ ಈ ಯುಕ್ತಿಯನ್ನು ಸಾಂಖ್ಯರು ಬಹಳವಾಗಿ ಉಪಯೋಗಿಸುವರು ಶರೀರದ ರಚನಾವಿಶೇಷವನ್ನು ನೋಡಿದರೆ ಒಂದಕ್ಕೊಂದು ಹೊಂದಿಕೊಂಡಿರುವ ಪಂಚಭೂತಗಳೇ ಕಾಣುವವು. ಈ ಹೊಂದಿಕೆಯ ಫಲವು ಇವುಗಳಲ್ಲಿ ಯಾವುದಾದರೊಂದಕ್ಕೆ ಎಂದು ಭಾವಿಸುವದಕ್ಕಿಲ್ಲವಾದ್ದರಿಂದ ಇವುಗಳಲ್ಲಿ ಹೊಂದಿಕೊಳ್ಳದೆ ಇವುಗಳನ್ನು ಅನುಭವಿಸುವ ಮತ್ತೊಬ್ಬನಿಗೋಸ್ಕರವಾಗಿರುವದು. ಆ ಮತ್ತೊಬ್ಬನೇ ಆತ್ಮನು

† ನೆತ್ತಿ-ಬಾಯಿ, ಹೊಕ್ಕಳು, ಕಣ್ಣು, ಕಿವಿ, ಮೂಗು, ಬಾಯಿ ಕೆಳಗಿನ ರಂಧ್ರಗಳು- ಇವು ದ್ವಾರಗಳು. ಆಯಾ ದ್ವಾರಗಳಿಗೆ ಇಂದ್ರಿಯಗಳು ದ್ವಾರಪಾಲಕರು ಹೊಕ್ಕಳಿಗೆ ಸಮಾನವೂ ನೆತ್ತಿಗೆ ಪ್ರಾಣವೂ ದ್ವಾರಪಾಲಕರು, ದಿಗ್ದೇವತೆಗಳು ವಾಯು ಮುಂತಾದವು ಮೇಲಿನ ಧಣಿಗಳು, ಮುಂತಾದವು ಎಂಬ ಮಾತಿನಿಂದ ದಾರ್ಷ್ಟಾಂತಿಕದಲ್ಲಿ ಚರ್ಮ, ಮಾಂಸ, ರಕ್ತ, ಮೇದಸ್ಸು, ಮಜ್ಜವ ಅಸ್ಥಿ, ನರಗಳು— ಎಂಬ ಕೋಟೆಯ ಸುತ್ತುಗಳನ್ನು ಮೂಲಾಧಾರದಿಂದ ಹಿಡಿದು ಆಜ್ಞಾಚಕ್ರದ ವರೆಗಿನ ಕೊತ್ತಲುಗಳೆಂಬ, ಕೀಲುಗಳೆಂಬ ಯಂತ್ರಗಳನ್ನು ಕೂದಲುಗಳೆಂಬ ಗೋಪುರ— ಇವುಗಳನ್ನೆಲ್ಲ ಗ್ರಹಿಸಬೇಕು (ಗೋ॥)    ‡ ಬ್ರಹ್ಮರಂಧ್ರ.

§ ತಿಳಿದುಕೊಳ್ಳಬೇಕೆಂಬ ಉದ್ದೇಶದಿಂದ ಧ್ಯಾನಮಾಡುವದು ಎಂದು (ಗೋ॥) ವ್ಯಾಖ್ಯಾನಕಾರರು ವಿವರಿಸಿರುತ್ತಾರೆ. ಇದು ಭಾಷ್ಯಕ್ಕೆ ಸ್ವಾಭಾವಿಕವಾದ ಅರ್ಥವಾಗುವದಿಲ್ಲ. ಅರಿತರೆ ಆತ್ಮನ ಹೊರತು ಮತ್ತೇನೂ ತೋರುವದಿಲ್ಲವಾದ್ದರಿಂದ ಜ್ಞಾನಿಯು ಆತ್ಮಚಿಂತನೆಯಲ್ಲಿಯೇ ಇರುವನು, ಅವನಿಗೆ ದುಃಖವೂ ಇರುವದಿಲ್ಲ— ಎಂಬುದು ಸರಳವಾದ ಅರ್ಥ.

ಮಾಡುವದೇ ಆತನ ಅನುಷ್ಠಾನವು. ಎಲ್ಲಾ ಬಯಕೆಗಳನ್ನು ಬಿಟ್ಟವನಾಗಿ ಸಮನಾಗಿ ಸರ್ವಭೂತಗಳಲ್ಲಿಯೂ* ಇರುವನೆಂದು ಅವನನ್ನು ಧ್ಯಾನಿಸಿದರೆ—ಶೋಕಿಸುವದಿಲ್ಲ. ಏಕೆಂದರೆ ಆತನ ಅರಿವಿನಿಂದ ಅಭಯವು ಸಿಕ್ಕುವದರಿಂದ ಶೋಕಕ್ಕೆ ಕಾರಣವಿರುವದಿಲ್ಲ ; ಇನ್ನು ಹೆದರಿಕೆಯನ್ನು ಕಾಣುವದೆಲ್ಲಿ ಬಂತು ? **ಅವಿದ್ಯೆಯಿಂದುಂಟಾಗಿರುವ ಕಾಮಕರ್ಮಗಳೆಂಬ ಬಂಧನಗಳಿಂದ ಇಲ್ಲಿಯೇ ಬಿಡುಗಡೆ ಹೊಂದುತ್ತಾನೆ,** ಹಾಗೆ ಬಿಡುಗಡೆ ಹೊಂದಿದವನಾಗಿ ವಿಮುಕ್ತನಾಗುತ್ತಾನೆ ಎಂದರೆ ಬಿಡುಗಡೆ ಹೊಂದುತ್ತಾನೆ, ಮತ್ತೆ ಶರೀರವನ್ನು ಧರಿಸುವದಿಲ್ಲ † ಎಂದರ್ಥ.

**(ಆತ್ಮನು) ಹಂಸನು, ಶುಚಿಸದನು ; ವಸು, ಅಂತರಿಕ್ಷಸದನು ; ಹೋತೃವು ವೇದಿಷದನು ; ಅತಿಥಿಯು, ದುರೋಣಸದನು ; ನೃಷದನು, ವರಸದನು, ಋತಸದನು, ವ್ಯೋಮಸದನು ; ಅಬ್ಜನು, ಗೋಜನು, ಋತಜನು, ಅದ್ರಿಜನು ; ಋತವು, ದೊಡ್ಡವನು. ॥ ೨ ॥**

ಆದರೆ ಈ ಆತ್ಮನು ಒಂದೇ ಶರೀರವೆಂಬ ಪುರದಲ್ಲಿರುವನಲ್ಲ, ಎಲ್ಲಾ ಪುರಗಳಲ್ಲಿಯೂ ಇರುವನು. ಹೇಗೆಂದರೆ (ಅವನು) ಹಂಸನು ಎಂದರೆ ಸಂಚರಿಸುವನಾಗಿ ಶುಚಿಯಾದ ಆಕಾಶದಲ್ಲಿ ಆದಿತ್ಯರೂಪದಿಂದ ಇರುವನು ವಸುವಾಗಿ ಎಂದರೆ ಎಲ್ಲರನ್ನೂ ಮುಚ್ಚಿಕೊಂಡಿರುವನಾಗಿ ವಾಯುವಿನ ರೂಪದಿಂದ ಅಂತರಿಕ್ಷದಲ್ಲಿರುವನು; ಆದ್ದರಿಂದ ಅಂತರಿಕ್ಷಸದನು. ಹೋತೃವಾಗಿ ಎಂದರೆ "ಅಗ್ನಿಯೇ ಹೋತೃವು" (ಶ್ರು) ಎಂಬ ಶ್ರುತಿ ಪ್ರಮಾಣದಿಂದ ಅಗ್ನಿಯ ರೂಪದಲ್ಲಿ ವೇದಿಯಾದ ಪೃಥಿವಿಯಲ್ಲಿರುವನು. ಆದ್ದರಿಂದ ವೇದಿಷದನು. "ಈ ವೇದಿಯು ಪೃಥಿವಿಯ ಹೆಚ್ಚಿನ ಸ್ವಭಾವವು" (ಶ್ರು) ಎಂಬ ಶ್ರುತಿಯಿರುವದರಿಂದ (ಪೃಥಿವಿಯನ್ನು ವೇದಿಯನ್ನಬಹುದು). ಅತಿಥಿಯಾಗಿ ಎಂದರೆ ಸೋಮನಾಗಿ ದುರೋಣದಲ್ಲಿ ಎಂದರೆ ಕಲಶದಲ್ಲಿ ಇರುವದರಿಂದ ದುರೋಣಸದನು ; ಅಥವಾ ಬ್ರಾಹ್ಮಣನಾದ ಅತಿಥಿಯ ರೂಪದಿಂದ ದುರೋಣಗಳಲ್ಲಿ ಎಂದರೆ ಮನೆಗಳಲ್ಲಿ ಇರುವದರಿಂದ ದುರೋಣಸದನು. ನರರಲ್ಲಿ ಎಂದರೆ ಮನುಷ್ಯರಲ್ಲಿ ಇರುವದರಿಂದ ನೃಷದನು ; ಶ್ರೇಷ್ಠರಾದ ದೇವತೆಗಳಲ್ಲಿ ಇರುವದರಿಂದ ವರಸದನು ; ಋತದಲ್ಲಿ ಎಂದರೆ ಸತ್ಯದಲ್ಲಿ ಅಥವಾ ಯಜ್ಞದಲ್ಲಿ ಇರುವದರಿಂದ ಋತಸದನು ; ವ್ಯೋಮದಲ್ಲಿ ಎಂದರೆ ಆಕಾಶದಲ್ಲಿ ಇರುವದರಿಂದ

---

* 'ಸಮಂ ಸರ್ವೇಷು ಭೂತೇಷು' ಎಂಬ ಗೀತಾವಾಕ್ಯದ ಸೂಚನೆ.

† ಬೇರೆ ಜನ್ಮಕ್ಕೆ ಕರ್ಮವು ಕಾರಣ; ಕಾಮಕರ್ಮಗಳು ಅವಿದ್ಯೆಯಿಂದ ಆಗಿರುವವಾದ್ದರಿಂದ ಅವಿದ್ಯೆಯು ಹೋಗಿರುವ ಜ್ಞಾನಿಗೆ ಜನ್ಮಾಂತರವೇ ಇಲ್ಲ. ಇದು ವಿದೇಹಮುಕ್ತಿಯೆಂಬ ಸ್ಥಿತಿಯ ವಿಷಯವಲ್ಲ. ಪೀಠಿಕೆಯನ್ನು ನೋಡಿ.

ವ್ಯೋಮಸದನು. ನೀರಿನಲ್ಲಿ ಶಂಖ, ಚಿಪ್ಪು, ಮೊಸಳೆ- ಮುಂತಾದ ರೂಪದಿಂದ ಹುಟ್ಟುವದರಿಂದ ಅಬ್ಜನು; ಗೋವಿನಲ್ಲಿ ಎಂದರೆ ಭೂಮಿಯಲ್ಲಿ* ಭತ್ತ, ಜವೆ- ಮುಂತಾದ ರೂಪದಿಂದ ಹುಟ್ಟುವದರಿಂದ ಗೋಜನು; ಯಜ್ಞದ ಅಂಗಗಳಾಗಿ ಹುಟ್ಟುವದರಿಂದ ಋತಜನು; ಪರ್ವತಗಳಿಂದ ನದಿ ಮುಂತಾದ ರೂಪದಿಂದ ಹುಟ್ಟುವದರಿಂದ ಅದ್ರಿಜನು. ಹೀಗೆ ಎಲ್ಲಾ ರೂಪಗಳಿಂದಲೂ ಇರುತ್ತಿದ್ದರೂ ಋತವು ಎಂದರೆ (ಯಾವಾಗಲೂ) ಸತ್ಯರೂಪವಾಗಿರುವವನು; ಸರ್ವಕ್ಕೂ ಕಾರಣವಾಗಿರುವದರಿಂದ ದೊಡ್ಡವನು.

ಈ ಮಂತ್ರವು ಆದಿತ್ಯನನ್ನೇ ಹೇಳುತ್ತದೆ ಎಂಬ ಪಕ್ಷದಲ್ಲಿಯೂ ಈ ಆದಿತ್ಯನೂ ಎಲ್ಲಕ್ಕೂ ಆತ್ಮನೆಂದು ಅಂಗೀಕರಿಸಿರುವದರಿಂದ **ಬ್ರಾಹ್ಮಣರೀತಿ**ಯಿಂದ† ವ್ಯಾಖ್ಯಾನಮಾಡಿದರೂ ವಿರೋಧವಿಲ್ಲ. ಎಲ್ಲವನ್ನೂ ವ್ಯಾಪಿಸಿಕೊಂಡಿರುವ ಈತನೊಬ್ಬನೇ ಜಗತ್ತಿಗೆಲ್ಲ ಆತ್ಮನು, ಆತ್ಮರು ಬೇರೆಬೇರೆಯಿಲ್ಲ ಎಂಬುದು (ಈ) ಮಂತ್ರದ (ಒಟ್ಟು) ಅರ್ಥವು.

## ಆತ್ಮನನ್ನು ಕಂಡುಹಿಡಿಯುವದಕ್ಕೆ ಹೆಗ್ಗುರುತುಗಳು

**ಪ್ರಾಣನನ್ನು ಮೇಲಕ್ಕೆ ಏರಿಸುವನು, ಅಪಾನವನ್ನು ಕೆಳಕ್ಕೆ ಹಾಕುವನು; ನಡುವಿನಲ್ಲಿರುವ ವಾಮನನನ್ನು ಎಲ್ಲಾ ದೇವತೆಗೂ ಉಪಾಸನೆ ಮಾಡುತ್ತಿರುವರು.** || ೩ ||

ಆತ್ಮನ ಸ್ವರೂಪವನ್ನು ಅರಿಯುವದಕ್ಕೆ ಗುರುತನ್ನು‡ [ಲಿಙ್ಗಂ] ಹೇಳುತ್ತಾನೆ. ಹೃದಯದಿಂದ ಮೇಲಕ್ಕೆ ಪ್ರಾಣವೆಂಬ ವೃತ್ತಿಯುಳ್ಳ ವಾಯುವನ್ನು

* ಗೋ ಎಂಬ ಮಾತಿಗೆ ಸ್ವರ್ಗ, ಬಾಣ, ಹಸು ಎತ್ತು, ಮಾತು, ಸಿಡಿಲು, ದಿಕ್ಕು, ಕಣ್ಣು, ಕಿರಣ, ಭೂಮಿ, ನೀರು- ಎಂದು ಅನೇಕ ಅರ್ಥಗಳುಂಟು ಇಲ್ಲಿ ಭೂಮಿ ಎಂದರ್ಥ.

† ಈ ವೇದದ ಬ್ರಾಹ್ಮಣದಲ್ಲಿ "ಅಸೌ ವಾ ಆದಿತ್ಯೋ ಹಂಸಃ ಶುಚಿಷತ್" ಎಂದು ಇದೇ ಮಂತ್ರವನ್ನು ಆದಿತ್ಯನ ಪರವಾಗಿ ವ್ಯಾಖ್ಯಾನಮಾಡಿರುತ್ತದೆ ಅಲ್ಲಿ 'ಸೂರ್ಯನೇ ಸ್ಥಾವರಜಂಗಮಗಳಿಗೂ ಆತ್ಮನು' ಎಂದು ಎಲ್ಲಕ್ಕೂ ಆದಿತ್ಯನು ಆತ್ಮನೆಂದು ಒಪ್ಪಿ ವ್ಯಾಖ್ಯಾನಮಾಡಿರುವದರಿಂದ ಆತ್ಮನು ಸರ್ವವ್ಯಾಪಿ ಎಂಬ ವ್ಯಾಖ್ಯಾನಕ್ಕೆ ಅಡ್ಡಿಯಿಲ್ಲ- ಎಂದು ಭಾವ

‡ ಹೊಗೆಯಿರುವದರಿಂದ ಇಲ್ಲಿ ಬೆಂಕಿಯಿರಬೇಕು- ಎಂದು ಊಹಿಸಿ ತಿಳಿಯುತ್ತಾರಷ್ಟೆ. ಇಲ್ಲಿ ಹೊಗೆಯೆಂಬ ಗುರುತನ್ನು ಲಿಂಗವೆಂದೂ ಬೆಂಕಿಯೆಂಬುದನ್ನು ಲಿಂಗಿ ಎಂದೂ ತರ್ಕಶಾಸ್ತ್ರದಲ್ಲಿ ವ್ಯವಹರಿಸುತ್ತಾರೆ. ಲಿಂಗವನ್ನು ತಿಳಿದರೆ ಲಿಂಗಿಯನ್ನು ನಿಶ್ಚಯಿಸಬಹುದು ಇದರಂತೆ ಆತ್ಮನಿಗೆ ಲಿಂಗವು ಯಾವದು?- ಎಂಬುದನ್ನು ತಿಳಿಸುತ್ತಾರೆ ಎಂದು ಭಾವ. ನಿಜವಾಗಿ ನೋಡಿದರೆ ಆತ್ಮನಿಗೆ ಯಾವ ಲಿಂಗವೂ ಇಲ್ಲ; ಆದರೂ ಅವನಲ್ಲಿ ಆರೋಪಿತವಾಗಿರುವ ಧರ್ಮಗಳನ್ನೇ ಅವನನ್ನು ತಿಳಿಯುವದಕ್ಕೆ ದ್ವಾರವಾಗಿರುವದರಿಂದ ಅವುಗಳನ್ನು ಇಲ್ಲಿ 'ಲಿಂಗ'ವೆಂದು ಕರೆದಿರುತ್ತದೆ.

ಏರಿಸುವವನು, ಮೇಲಕ್ಕೆ ಹೋಗುವಂತೆ ಮಾಡುವವನು; ಮತ್ತು ಅಪಾನವನ್ನು ಕೆಳಕ್ಕೆ ಹಾಕುವವನು. 'ಹೀಗಿರುವವನು ಯಾರೋ' ಎಂದು ಸೇರಿಸಿಕೊಳ್ಳಬೇಕು. ನಡುವಣ ಹೃದಯಪುಂಡರೀಕದ ಆಕಾಶದಲ್ಲಿ ಕೂತಿರುವ ಎಂದರೆ ಬುದ್ಧಿಯಲ್ಲಿ ತೋರುವ ಚೈತನ್ಯದ ಬೆಳಕುಳ್ಳ ಅಂಥ ವಾಮನನನ್ನು ಎಂದರೆ ಸೇವಿಸುವದಕ್ಕೆ ಯೋಗ್ಯನಾದ ಆತ್ಮನನ್ನು ಎಲ್ಲಾ ದೇವತೆಗಳೂ ಎಂದರೆ ಕಣ್ಣು ಮುಂತಾದ ಪ್ರಾಣಗಳೆಲ್ಲ ರೂಪವೇ ಮುಂತಾದ ಅರಿವನ್ನು ಕಾಣಿಕೆಯಾಗಿ* ತಂದು ಪ್ರಜೆಗಳು ರಾಜನನ್ನು (ಸೇವಿಸುವಂತೆ) ಉಪಾಸನೆಮಾಡುತ್ತಿರುವರು, ಎಂದರೆ ಅವನಿಗೋಸ್ಕರವಾಗಿಯೇ ಎಡಬಿಡದೆ ಕೆಲಸಮಾಡುತ್ತಿರುವರು ಎಂದರ್ಥ. ಯಾನಾತನಿಗಾಗಿ ಯಾರಿಂದ ಪ್ರೇರಿಸಲ್ಪಟ್ಟು† ಎಲ್ಲಾ ಪ್ರಾಣಕರಣಗಳ‡ ಕೆಲಸಗಳೂ ನಡೆಯುತ್ತಿರುವವೋ ಅವನು ಆ (ಆತ್ಮನು) ಇವುಗಳಿಂದ ಬೇರೆಯಾದ(ವನೆಂದು) ಸಿದ್ಧವಾಯಿತು– ಎಂಬುದು ಈ ವಾಕ್ಯದ (ಒಟ್ಟು) ಅರ್ಥವು.

**(ಮತ್ತು) ಶರೀರದಲ್ಲಿರುವ ಈ ದೇಹಿಯು ಸಡಿಲವಾಗಿ ದೇಹದಿಂದ ಬಿಡುಗಡೆಯಾಗುವಾಗ ಇಲ್ಲಿ ಏನು ಉಳಿಯುತ್ತದೆ? ಇದೇ ಅದು. ||೪||**

ಮತ್ತು ಈ ಶರೀರದಲ್ಲಿದ್ದು ಸಡಿಲವಾಗಿ ಬಿಟ್ಟುಹೋಗುತ್ತಿರುವ ಆತ್ಮನಾದ ಈ ದೇಹಿಯು– ದೇಹದಿಂದ ಬಿಟ್ಟು ಹೋಗುವಾಗ ಇಲ್ಲಿ ಏನು ಉಳಿಯುತ್ತದೆ? ಎಂದರೆ ಈ ಪ್ರಾಣಾದಿಗಳ ಸಮೂಹದಲ್ಲಿ (ಏನು ಉಳಿಯುತ್ತದೆ? ) ಈ ದೇಹದಲ್ಲಿ ಏನೂ ಉಳಿಯುವದಿಲ್ಲ (ಎಂದರ್ಥ). "(ದೇಹದಿಂದ ಬಿಟ್ಟುಹೋಗುವಾಗ" ಎಂಬ ಮಾತು) ಸಡಿಲವಾಗಿ ಎಂಬ ಮಾತಿಗೆ ಶ್ರುತಿಯು ತಾನೇ ವಿವರಣೆಯಾಗಿ ಹೇಳಿದ್ದು. ಪುರದ ಸ್ವಾಮಿಯು ಓಡಿಹೋದರೆ ಪುರದೊಳಗಿರುವವರು ಹೇಗೆ (ಬಲಗುಂದುವರೋ) ಹಾಗೆ ಯಾವ ಆತ್ಮನು ಹೋಗುವದನ್ನು ಕಂಡ ಮಾತ್ರದಿಂದ ಈ ಕಾರ್ಯಕರಣಗಳ ಗುಂಪು ಎಲ್ಲವೂ ಬಲಗುಂದಿ ಬಿದ್ದು ಹೋಗುವದೋ ನಾಶವೇ ಆಗುವದೋ, ಅಂಥ ಆತ್ಮನು ಬೇರೆ ಇದಾನೆಂದು ಆಯಿತು.

**ಯಾವ ಮನುಷ್ಯನೇ ಆಗಲಿ ಪ್ರಾಣದಿಂದಲೂ ಅಪಾನದಿಂದಲೂ ಜೀವಿಸಿರುವದಿಲ್ಲ. ಯಾವನಲ್ಲಿ ಇವೆರಡೂ ಆಶ್ರಯಿಸಿಕೊಂಡಿರುವವೋ ಅಂಥ ಇನ್ನೊಬ್ಬನಿಂದಲೇ ಬದುಕಿರುತ್ತಾರೆ. || ೫ ||**

* 'ದೇವತೆಗಳೆಲ್ಲ ಇವನಿಗೆ ಬಲಿಯನ್ನು ಒಪ್ಪಿಸುತ್ತಿರುವರು' ಎಂಬ ತೈತ್ತಿರೀಯದ (೧–೬) ಸೂಚನೆ

† ಕೇನೋಪನಿಷತ್ತಿನ (ಮಂ. ೧) ಸೂಚನೆ.

‡ 'ಉತ್ಕ್ರಾಮನ್ತಂ ಸ್ಥಿತಂ ವಾಪಿ' ಎಂಬ ಗೀತೆಯ ವಚನವನ್ನು ಸೂಚಿಸಿದ್ದಾರೆ.

ಪ್ರಾಣ, ಅಪಾನ- ಮುಂತಾದವು ಹೋಗುವದರಿಂದ ಈ ಶರೀರವು ಕೆಳಕ್ಕೆ ಬೀಳುವದೇ ಹೊರತು ಅದಕ್ಕಿಂತ ಬೇರೆಯಾದ ಆತ್ಮನು ಹೋಗುವದರಿಂದಲ್ಲ ; ಏಕೆಂದರೆ ಪ್ರಾಣಾದಿಗಳ ಬಲದಿಂದಲೇ ಮನುಷ್ಯನು ಜೀವಿಸಿರುತ್ತಾನೆ- ಎಂದು ಯಾರಾದರೂ ಅಭಿಪ್ರಾಯಪಡಬಹುದು. (ಆದರೆ) ಇದು ಸರಿಯಲ್ಲ; (ಏಕೆಂದರೆ) ಪ್ರಾಣದಿಂದಲಾಗಲಿ ಅಪಾನದಿಂದಲಾಗಲಿ ಕಣ್ಣು ಮುಂತಾದ ಇಂದ್ರಿಯದಿಂದ ಲಾಗಲಿ ದೇಹವುಳ್ಳ ಮನುಷ್ಯನು ಜೀವಿಸಿರುವದಿಲ್ಲ ; ಯಾರೂ (ಇವುಗಳಿಂದ) ಬದುಕಿರುವದಿಲ್ಲ. (ಒಂದಕ್ಕೊಂದು) ಸೇರಿ ಕೆಲಸಮಾಡುತ್ತಿರುವ ಇವುಗಳೆ ಲ್ಲವೂ ಮತ್ತೊಬ್ಬರಿಗಾಗಿ* ಇರುವವಾದ್ದರಿಂದ ಬದುಕಿರುವದಕ್ಕೆ ಇವೇ ಕಾರಣ ವೆಂಬುದು ಹೊಂದುವದಿಲ್ಲ. ಒಂದಕ್ಕೊಂದು ಸೇರಿಕೊಂಡು ಇರುವ ಮನೆಯೇ ಮುಂತಾದವು ಯಾವದೊಂದರೊಡನೆಯೂ ಕೂಡಿಕೊಳ್ಳದೆ ತನಗಾಗಿಯೇ ಇರುತ್ತಿರುವ ಬೇರೆಯೊಬ್ಬನ (ಇಚ್ಛೆಯಿಂದ) ಪ್ರೇರಿತವಾಗದೆ ತಾವೇ ಇರುವದು ಲೋಕದಲ್ಲಿ ಕಂಡುಬಂದಿಲ್ಲ. ಅದರಂತೆ ಪ್ರಾಣಾದಿಗಳೂ ಒಂದಕ್ಕೊಂದು ಸೇರಿರುವದರಿಂದ (ಮತ್ತೊಬ್ಬನಿಂದ ಪ್ರೇರಿತವಾಗಿ ಅವನಿಗಾಗಿಯೇ) ಇರಬೇಕೇ (ಹೊರತು ತನಗಾಗಿ ತಾವು ಇದ್ದುಕೊಂಡಿರಲಾರವು). ಆದ್ದರಿಂದ ಒಂದು ಕ್ಕೊಂದು ಸೇರಿಕೊಂಡಿರುವ ಪ್ರಾಣ ಮುಂತಾದವುಗಳಿಗಿಂತ ಬೇರೆಯಾದ ಮತ್ತೊಬ್ಬನಿಂದಲೇ ಎಲ್ಲರೂ ಕೂಡಿಸಲ್ಪಟ್ಟು ಬದುಕಿರುತ್ತಾರೆ, ಪ್ರಾಣವನ್ನೂ ಧರಿಸಿರುತ್ತಾರೆ

ಕೂಡಿಕೊಂಡಿರುವ ವಸ್ತುಗಳಿಗಿಂತ ಬೇರೆಯಾದ ಯಾವ ಆತ್ಮನು ಬೇರೆ ಯಾಗಿ ಇದ್ದರೆ ಅವನಲ್ಲಿ ಈ ಪ್ರಾಣಾಪಾನಗಳೂ ಕಣ್ಣು ಮುಂತಾದ ಇಂದ್ರಿಯ ಗಳಿಂದ ಕೂಡಿಕೊಂಡು ಆಶ್ರಯಿಸಿರಬಹುದೋ, ಯಾವದರೊಡನೆಯೂ ಕೂಡಿ ಕೊಳ್ಳದ ಯಾವ (ಆತ್ಮನಿ)ಗೋಸ್ಕರ ಪ್ರಾಣಾಪಾನಾಗಳೇ ಮುಂತಾದವು ತಮ್ಮ ತಮ್ಮ ಕೆಲಸವನ್ನು ಒಂದಕ್ಕೊಂದು ಸೇರಿ ಮಾಡುತ್ತಿರುವವೋ, ಅಂಥ (ಆತ್ಮನು ಇವಕ್ಕಿಂತ) ಬೇರೆ (ಇರಬೇಕು) ಎಂದು ಸಿದ್ಧವಾಯಿತೆಂದು ಅಭಿಪ್ರಾಯ.

## ಬ್ರಹ್ಮಾತ್ಮೈಕತ್ವ

**ಎಲೈ ಗೌತಮನೆ, ಈ ಗುಹ್ಯವಾದ ಸನಾತನಬ್ರಹ್ಮವನ್ನು ಹೇಳು ತ್ತೇನೆ; ಮರಣವನ್ನು ಹೊಂದಿ ಆತ್ಮನು ಹೇಗೆ ಆಗುತ್ತಾನೋ (ಅದನ್ನೂ ಹೇಳುತ್ತೇನೆ). ॥ ೬ ॥**

ಅಯ್ಯ ಗೌತಮ, ಈಗ ಮತ್ತೆ ನಿನಗೆ ಈ ರಹಸ್ಯವಾದ ಸನಾತನಬ್ರಹ್ಮವನ್ನು ಎಂದರೆ ಬಹುಕಾಲದಿಂದಿರುವ ಬ್ರಹ್ಮವನ್ನು ತಿಳಿಸುವೆನು (ಕೇಳು). ಇದನ್ನು ಅರಿ

* ೭೯ ಪುಟ * ನೆಯ ಟಿಪ್ಪಣಿಯನ್ನು ನೋಡಿ.

ತರೆ ಎಲ್ಲಾ ಸಂಸಾರವೂ ಪರಿಹಾರವಾಗುತ್ತದೆ. ಮತ್ತು ಇದನ್ನು ಅರಿಯದಿದ್ದರೆ ಮರಣವನ್ನು ಹೊಂದಿದ ಮೇಲೆ ಆತ್ಮನು ಹೇಗೆ ಆಗುತ್ತಾನೋ ಎಂದರೆ (ಹೇಗೆ ಹೇಗೆ) ಸಂಸಾರದಲ್ಲಿ ತೊಳಲುತ್ತಾನೋ ಅದನ್ನು ಕೇಳು.

**ಕೆಲವರು ದೇಹಿಗಳು ಶರೀರಕ್ಕಾಗಿ ಯೋನಿಯನ್ನು ಸೇರುವರು; ಮತ್ತೆ ಕೆಲವರು ಸ್ಥಾಣುವನ್ನು ಹೊಂದುವರು. ಕರ್ಮಕ್ಕನುಸಾರವಾಗಿಯೂ ಜ್ಞಾನಕ್ಕನುಸಾರವಾಗಿಯೂ (ಆಯಾ ಜನ್ಮವಾಗುವದು.)|| ೭ ||**

ಕೆಲವರು ದೇಹಿಗಳು, ಅಜ್ಞಾನಿಗಳಾದ* ಮೂಢರು, ಶರೀರವನ್ನು ಧರಿಸುವದಕ್ಕಾಗಿ ಶುಕ್ರದ ಬೀಜದೊಡನೆ ಯೋನಿಯನ್ನು ಸೇರುವರು, ಎಂದರೆ ಯೋನಿಯ ದ್ವಾರವನ್ನು ಹೊಗುತ್ತಾರೆ. ಅತ್ಯಂತ ಅಧಮರಾದ ಇನ್ನೂ ಕೆಲವರು **ಸ್ಥಾಣುವನ್ನು** ಎಂದರೆ ವೃಕ್ಷವೇ ಮೊದಲಾದ ಸ್ಥಾವರಜನ್ಮವನ್ನು ಸತ್ತ ಮೇಲೆ ಹೊಂದುತ್ತಾರೆ. ಕರ್ಮಕ್ಕನುಸಾರವಾಗಿ ಎಂದರೆ ಯಾವನು ಈ ಜನ್ಮದಲ್ಲಿ ಎಂಥ ಕರ್ಮವನ್ನು ಮಾಡಿರುತ್ತಾನೋ ಅದರಂತೆ ಅದಕ್ಕೆ ವಶನಾಗಿಯೂ ಎಂದರ್ಥ; ಮತ್ತು ಜ್ಞಾನಕ್ಕನುಸಾರವಾಗಿ ಎಂದರೆ ಎಂಥ ತಿಳಿವಳಿಕೆಯನ್ನು ಇಲ್ಲಿ ಸಂಪಾದಿಸಿರುವರೋ ಅದಕ್ಕೆ ಅನುರೂಪವಾಗಿಯೂ† ಶರೀರವನ್ನು ಹೊಂದುವರು ಎಂದರ್ಥ "ಪ್ರಜ್ಞೆಗನುಸಾರವಾಗಿಯೇ ಜನ್ಮಾದಿಗಳಾಗುವವು" (ಐ||೮||) ಎಂಬ ಶ್ರುತಿಯೂ ಇದನ್ನೇ ಹೇಳುವದು.

**(ಇವರು) ನಿದ್ರಿಸುತ್ತಿರುವಾಗ ಬೇರೆ ಬೇರೆ ಕಾಮವನ್ನು ನಿರ್ಮಿಸುತ್ತಾ ಯಾವ ಈ ಪುರುಷನು ಎಚ್ಚರದಿಂದಿರುವನೋ ಅದೇ ಶುಕ್ರವಾದದ್ದು; ಅದು ಬ್ರಹ್ಮವು. ಅದೇ ಅಮೃತವೆನಿಸುತ್ತದೆ. ಅದರಲ್ಲಿ ಲೋಕಗಳೆಲ್ಲ ಆಶ್ರಯಿಸಿರುವವು. ಅದನ್ನು ಯಾರೂ ಮೀರಲಾರರು. ಇದೇ ಅದು. || ೮ ||**

ಗುಹ್ಯವಾದ ಬ್ರಹ್ಮವನ್ನು ಹೇಳುತ್ತೇನೆಂದು ಮೊದಲು ಹೇಳಿದ್ದನಷ್ಟೆ, ಈಗ ಅದನ್ನು ಹೇಳುತ್ತಾನೆ. ಪ್ರಾಣವೇ ಮುಂತಾದವು ನಿದ್ರಿಸುತ್ತಿರುವಾಗ ಯಾವ ಪುರುಷನು ಎಚ್ಚರದಿಂದಿರುವನೋ ನಿದ್ರಿಸದೆ ಇರುವನೋ-ಹೇಗೆ (ಎಚ್ಚರವಾಗಿರುವನು? ಎಂದರೆ)– ಬೇರೆ ಬೇರೆ ಕಾಮವನ್ನು ಎಂದರೆ ತನಗೆ ಬೇಕಾಗುವ ಹೆಂಗಸರು ಮುಂತಾದ ಆಯಾ ಪದಾರ್ಥಗಳನ್ನು ಅವಿದ್ಯೆಯಿಂದ ನಿರ್ಮಿಸಿಕೊಳ್ಳುತ್ತಾ ಉಂಟುಮಾಡಿಕೊಳ್ಳುತ್ತಾ ಎಚ್ಚರವಾಗಿರುವನೋ ಅವನೇ‡ ಶುಕ್ರ

---

* ಪರಮಾರ್ಥದೃಷ್ಟಿಯಿಂದ ನೋಡಿದರೆ ಯಾರಿಗೂ ಶರೀರವಿಲ್ಲ; ಮೂಢರಿಗೆ ಇದು ತಿಳಿಯದು.

† ಮರಣಕಾಲದ ಭಾವನೆಗೆ ಅನುಸಾರವಾಗಿ.

‡ ಕನಸಿನಲ್ಲಿ ತೋರುವ ಮಿಥ್ಯಾವಸ್ತುಗಳೆಲ್ಲಕ್ಕೂ ಸಾಕ್ಷಿಯಾಗಿ ಆತ್ಮನು, ತನ್ನಂತೆ ನಿಜವಾಗಿರುವ ಎರಡನೆಯ ವಸ್ತುವೇ ಇಲ್ಲದೆ ತಾನೇ ತಾನಾಗಿರುವನೆಂಬುದು ಎಲ್ಲರ ಅನುಭವದಲ್ಲಿಯೂ ಇದೆ.

ವಾದ ಎಂದರೆ ಶುಭ್ರವಾಗಿರುವ, ಶುದ್ಧವಾದ ಬ್ರಹ್ಮವು, ಗುಹ್ಯವಾದ ಬ್ರಹ್ಮವೆಂಬುದು ಮತ್ತೆ ಬೇರೆಯಲ್ಲ. ಶಾಸ್ತ್ರಗಳಲ್ಲೆಲ್ಲ ಅದೇ ಅಮೃತವು ಎಂದರೆ ನಾಶವಿಲ್ಲದ್ದು ಎಂದು ಹೇಳಲ್ಪಡುತ್ತದೆ.

ಮತ್ತು ಪೃಥಿವಿ ಮುಂತಾದ ಲೋಕಗಳೆಲ್ಲ ಆ ಬ್ರಹ್ಮವನ್ನೇ ಆಶ್ರಯಿಸಿರುವವು; ಏಕೆಂದರೆ ಅದು ಎಲ್ಲಾ ಲೋಕಗಳಿಗೂ ಕಾರಣವಾಗಿರುವದು. ಅದನ್ನು ಯಾವದೂ ಮೀರಲಾರದು– ಮುಂತಾದ ವಾಕ್ಯಕ್ಕೆ ಹಿಂದಿನಂತೆಯೇ* (ಅರ್ಥ ಮಾಡಿಕೊಳ್ಳಬೇಕು).

ಆತ್ಮನು ಒಬ್ಬನೇ ಎಂಬ ಜ್ಞಾನವು ಪ್ರಮಾಣಕ್ಕೆ ಹೊಂದುಗಡೆಯಾಗಿದ್ದರೂ ಇನ್ನೂ ಸರಿಯಾದ ಬುದ್ಧಿಯುಂಟಾಗದೆ ಇರುವ ಬ್ರಾಹ್ಮಣರಿಗೆ ಅನೇಕ ತಾರ್ಕಿಕರ ಕುಬುದ್ಧಿಯಿಂದ ಅಂತಃಕರಣವು ಕದಡಿಹೋಗಿರುವದರಿಂದ ಎಷ್ಟು ಸಲ ಹೇಳಿದರೂ ಮನಸ್ಸಿಗೆ ಹಿಡಿಯದೆ ಇರುವದು. ಆದ್ದರಿಂದ ಇದನ್ನು ತಿಳಿಸುವದಕ್ಕಾಗಿ ಶ್ರುತಿಯು ತುಂಬ ಆದರದಿಂದ (ದೃಷ್ಟಾಂತಗಳನ್ನು) ಮತ್ತೆ ಮತ್ತೆ (ಕೊಟ್ಟು) ಹೇಳುತ್ತದೆ ಹೇಗೆಂದರೆ:—

**ಬೆಂಕಿಯು ಹೇಗೆ (ಈ) ಭುವನವನ್ನು ಹೊಕ್ಕು ರೂಪರೂಪಕ್ಕೂ ಬೇರೆ ಬೇರೆ ರೂಪವಾಗಿರುವದೋ ಹಾಗೆ ಎಲ್ಲಾ ಭೂತಗಳಿಗೂ ಅನ್ತರಾತ್ಮನಾದ ಒಬ್ಬ (ಆತ್ಮನೇ) ರೂಪರೂಪಕ್ಕೂ ಬೇರೆ ಬೇರೆ ರೂಪವಾಗಿರುವನು, ಹೊರಗೂ ಇರುವನು. || ೯ ||**

ಬೆಂಕಿಯು ಬೆಳಕಿನ ರೂಪದಲ್ಲಿ ಒಂದೇ ಆಗಿದ್ದರೂ ಈ ಭುವನವನ್ನು– ಇದರಲ್ಲಿ ಪ್ರಾಣಿಗಳು ಉಂಟಾಗುವದರಿಂದ ಈ ಲೋಕಕ್ಕೆ ಭುವನವೆಂದು ಹೆಸರು. ಈ ಲೋಕವನ್ನು–ಹೊಕ್ಕು ರೂಪರೂಪಕ್ಕೂ ಎಂದರೆ ತಾನು ಸುಡುವ ಕಟ್ಟಿಗೆಯೇ ಮುಂತಾದ ಬೇರೆ ಬೇರೆ ವಸ್ತುವಿಗೂ ಎಂದರ್ಥ. (ಒಂದೊಂದಕ್ಕೂ) ಬೇರೆ ಬೇರೆ, ರೂಪವಾಗಿ, ಸುಡತಕ್ಕದ್ದು ಬೇರೆ ಬೇರೆಯಾಗಿರುವದರಿಂದ (ತಾನೂ) ಹೇಗೆ ಬಹುವಿಧವಾಗಿ ಆಗಿರುವದೋ, ಅದರಂತೆ † ಎಲ್ಲಾ ಪ್ರಾಣಿಗಳ ಅಂತರಾತ್ಮನಾದ ಎಂದರೆ ಎಲ್ಲಾ ಪ್ರಾಣಿಗಳ ಒಳಗೇ ಇರುವ ಒಬ್ಬನೇ ಆತ್ಮನು ಬಲು ಸೂಕ್ಷ್ಮವಾಗಿರುವದರಿಂದ ಕಟ್ಟಿಗೆ ಮುಂತಾದವುಗಳಲ್ಲಿ ಅಗ್ನಿಯು ಹೊಕ್ಕಿರುವ ಹಾಗೆ ಎಲ್ಲಾ ದೇಹಗಳನ್ನು ಹೊಕ್ಕಿರುವದರಿಂದ ಬೇರೆ ಬೇರೆ

---

* ಹಿಂದಿನ ವಲ್ಲಿಯ ೯ನೆಯ ಮಂತ್ರದಂತೆ.

† ಕಟ್ಟಿಗೆಯು ಉದ್ದವಿಕ್ಕಿರುವದರಿಂದ ಅದನ್ನು ಸುಡುವ ಬೆಂಕಿಯೂ ಉದ್ದವಾಗಿರುವಂತೆ ತೋರುವದು; ಇದ್ದಲು ದಪ್ಪವಾಗಿರುವದರಿಂದ ಬೆಂಕಿಯೂ ದಪ್ಪನಾಗಿರುವಂತೆ ತೋರುವದು, ಕರಟವು ಟೊಳ್ಳಾಗಿರುವದರಿಂದ ಬೆಂಕಿಯೂ ಟೊಳ್ಳಾಗಿರುವಂತೆ ತೋರುವದು; ಇದರಂತೆ.

ರೂಪವಾಗಿರುವನು; ಮತ್ತು ವಿಕಾರವಾಗದೆ ಇರುವ ಆಕಾಶದಂತಿರುವ ತನ್ನ ರೂಪದಿಂದ ಹೊರಗೂ* ಇರುತ್ತಾನೆ.

**ವಾಯುವು ಹೇಗೆ (ಈ) ಭುವನವನ್ನು ಹೊಕ್ಕು ರೂಪರೂಪಕ್ಕೂ ಬೇರೆ ಬೇರೆ ರೂಪವಾಗಿರುವದೋ ಹಾಗೆ ಎಲ್ಲಾ ಭೂತಗಳ ಅಂತರಾತ್ಮನಾದ ಒಬ್ಬ ಆತ್ಮನೇ ರೂಪರೂಪಕ್ಕೂ ಬೇರೆ ಬೇರೆ ರೂಪವಾಗಿರುವನು, ಹೊರಗೂ ಇರುವನು. ॥ ೧೦ ॥**

ಮತ್ತೂ ಒಂದು ದೃಷ್ಟಾಂತ: ಹೇಗೆ ವಾಯುವು ಪ್ರಾಣರೂಪದಿಂದ ದೇಹಗಳಲ್ಲಿ ಹೊಕ್ಕು ರೂಪರೂಪಕ್ಕೂ ಬೇರೆ ರೂಪವಾಗಿರುವದೋ ಹಾಗೆ- (ಎಂಬುದೇ) ಮುಂತಾದದ್ದು (ಹಿಂದಿನ ಮಂತ್ರಕ್ಕೂ ಇದಕ್ಕೂ) ಸಮವಾಗಿರುವದು

**ಸೂರ್ಯನು ಎಲ್ಲ ಜನರಿಗೂ ಕಣ್ಣಾಗಿದ್ದರೂ ಹೇಗೆ ಕಣ್ಣಿನ ಮತ್ತು ಆದರಂತೆ ಹೊರಗಿನ ದೋಷಗಳು ತನಗೆ ಹತ್ತದಂತಿರುವನೋ ಎಲ್ಲಾ ಭೂತಗಳಿಗೂ ಅಂತರಾತ್ಮನಾದ ಒಬ್ಬನೆ (ಆತ್ಮನು) ಜನರ ದುಃಖವು (ತನಗೆ) ಹತ್ತದಂತೆ ಹೊರಗೆ ಇರುವನು. ॥ ೧೧ ॥**

ಒಬ್ಬನೇ ಎಲ್ಲರಿಗೂ ಆತ್ಮನಾದರೆ ಸಂಸಾರದ ದುಃಖವನ್ನು ಅನುಭವಿಸುವದೆಂಬುದು ಪರಮಾತ್ಮನಿಗೇ† ಉಂಟಾಗುವದು. (ಎಂದು ಯಾರಾದರೂ ಯೋಚಿಸಬಹುದು, ಆದ್ದರಿಂದ ಈ ಮಂತ್ರವನ್ನು ಹೇಳಿರುತ್ತದೆ ಹೇಗೆ ಬೆಳಕನ್ನು ಕೊಟ್ಟು ಜನರ ಕಣ್ಣಿಗೆ ಸಹಾಯವಾಡುತ್ತಿರುವ ಸೂರ್ಯನು ಮಲ, ಮೂತ್ರ- ಮುಂತಾದ ಅಶುಚಿಯಾದ ಪದಾರ್ಥಗಳನ್ನು ತೋರಿಸುವದರಿಂದ ಅದನ್ನು ಕಾಣುವ ಜನರಿಗೆಲ್ಲ ಕಣ್ಣಾಗಿರುವನಾದರೂ ಅಶುಚಿ ಮುಂತಾದವುಗಳನ್ನು ನೋಡಿದ್ದರಿಂದ ಉಂಟಾಗಬಹುವಾದ ಕಣ್ಣಿನ ದೋಷಗಳು ಎಂದರೆ ಒಳಗಾಗುವ ಪಾಪದೋಷಗಳೂ‡ ಮತ್ತು ಹೊರಗೆ ಅಶುಚಿ ಮುಂತಾದ ಪದಾರ್ಥಗಳ ಸಂಬಂಧದಿಂದಾಗುವ ದೋಷಗಳೂ ತನಗ ಹತ್ತದಂತೆ ಇರು

---

* ಉಪಾಧಿಯಿಂದ ಬೇರೆಬೇರೆಯಾಗಿ ತೋರುವ ಕಲ್ಪಿತರೂಪವೇ ಅಲ್ಲದೆ ಪರಮಾರ್ಥವಾದ ತನ್ನ ರೂಪಿನಿಂದಲೂ ಇರುತ್ತಾನೆ. ಆ ರೂಪಕ್ಕೆ ಉಪಾಧಿಯಿಂದ ಯಾವ ವಿಕಾರವೂ ಆಗುವದಿಲ್ಲ.

† ಪರಮಾತ್ಮನು ಎಲ್ಲರಿಗೂ ಒಬ್ಬನೇ ಆದರೂ ಅವನಿಗೆ ಸುಖದುಃಖಗಳ ಗೋಜು ಇಲ್ಲವೆಂಬುದನ್ನು ಬ್ರಹ್ಮಸೂತ್ರ(೧-೨-೮)ದಲ್ಲಿ ನಿರ್ಣಯಿಸಿರುತ್ತದೆ

‡ ಇಲ್ಲಿ ಪಾಪವೆಂದರೆ ಧರ್ಮಾಧರ್ಮಗಳು. ನೋಡಬಾರದ್ದನ್ನು ನೋಡಿದರೆ ಪಾಪ, ನೋಡಬೇಕಾದ್ದನ್ನು ನೋಡಿದರೆ ಪುಣ್ಯ- ಇವೆರಡೂ ನೋಡಿದವರಿಗೆ ಆಗುವವು. ನೋಡುವವರಿಗೆಲ್ಲ ಕಣ್ಣಿಗೆ ಸಹಾಯನಾಗಿದ್ದ ಸೂರ್ಯನಿಗೆ ಆ ದೋಷವಿಲ್ಲ, ಏಕೆಂದರೆ ಅವನಿಗೆ ನಾನು ಮಾಡುವೆನೆಂಬ ಅಭಿಮಾನವಿಲ್ಲ.

ವನೋ, ಅದರಂತೆ ಒಬ್ಬನೇ ಆಗಿರುವ ಎಲ್ಲಾ ಪ್ರಾಣಿಗಳ ಅಂತರಾತ್ಮನು ಜನರ ದುಃಖವು ತನಗೆ ಹತ್ತದಂತೆ (ಆ ದುಃಖಕ್ಕೆ) ಹೊರಚ್ಚಾಗಿ ಇರುವನು. ಜನರು ತಮ್ಮಲ್ಲಿ ಆರೋಪಮಾಡಿಕೊಂಡ ತಪ್ಪುತಿಳಿವಳಿಕೆಯಿಂದ* ಕಾಮುಕರ್ಮಗಳಿಂದಾಗುವ ದುಃಖವನ್ನು ಅನುಭವಿಸುವರು; ಆದರೆ ಆ ಆರೋಪಿತವಾಗಿರುವ ಅವಿದ್ಯೆಯು ನಿಜವಾಗಿಯೂ† ಪರಮಾತ್ಮನಲ್ಲಿರುವದಿಲ್ಲ.

ಹೇಗೆ ಹಗ್ಗ, ಕಪ್ಪೆಯಚಿಪ್ಪು, ಮರುಭೂಮಿ, ಆಕಾಶ– ಇವುಗಳಲ್ಲಿ ಹಾವು, ಬೆಳ್ಳಿ, ನೀರು, ಮಸಕು– ಇವು ಹಗ್ಗ ಮುಂತಾದವುಗಳಿಗೆ ನಿಜವಾಗಿ ದೋಷರೂಪವಾಗಿ ಸ್ವಭಾವದಿಂದಲೇ ಇರುವದಿಲ್ಲವೋ, ಆಯಾ ಸಂಬಂಧವುಳ್ಳ ಅವಕ್ಕೆ ವಿರುದ್ಧವಾದ ಬುದ್ಧಿಯನ್ನು ಆರೋಪಮಾಡುವ ನಿಮಿತ್ತದಿಂದ ಆಯಾ ದೋಷವಿರುವಂತೆ ಭಾವಿಸಲ್ಪಡುವವೋ, ಆದರೆ ಆ ತಪ್ಪುತಿಳಿವಿನ ಆರೋಪಕ್ಕೆ ಅವು ಹೊರಚ್ಚಾಗಿಯೇ ಇರುವದರಿಂದ ಆ (ಹುಟ್ಟುಗಟ್ಟಿದ) ದೋಷಗಳಿಂದ ಅವಕ್ಕೆ ಹೇಗೆ (ನಿಜವಾಗಿ) ಲೇಪವಿಲ್ಲದೆ ಇರುವದೋ, ಅದರಂತೆ ಜನರೆಲ್ಲ ಹಗ್ಗದ ಹಾವೇ ಮುಂತಾದವುಗಳಂತೆ ಆತ್ಮಸ್ವರೂಪಕ್ಕೆ ವಿರೋಧವಾದ ಕ್ರಿಯೆ, ಕಾರಕ, ಫಲ- ಎಂಬ ತಿಳಿವಳಿಕೆಯನ್ನು ಆತ್ಮನಲ್ಲಿ ಹುಟ್ಟುಗಟ್ಟಿಕೊಂಡು ಆ ಕಾರಣದಿಂದ ಹುಟ್ಟು, ಸಾವು- ಮುಂತಾದ ದುಃಖವನ್ನು ಹೊಂದುವರು. ಆತ್ಮನು ಮಾತ್ರ ಅವರೆಲ್ಲರ ಆತ್ಮನಾಗಿದ್ದಾಗ್ಯೂ ಆ ವಿರುದ್ಧವಾದ ಆರೋಪದ ನಿಮಿತ್ತದಿಂದ ಆಗುವ ಜನರ ದುಃಖದಿಂದ ಲೇಪವನ್ನು ಹೊಂದದೆ ಇರುವನು. ಏಕೆಂದರೆ ಅವನು ಹೊರಗೆ ಇರುವನು, ಎಂದರೆ ಹಗ್ಗ ಮುಂತಾದವುಗಳಂತೆಯೇ ತನಗೆ ವಿರುದ್ಧವಾದ ಬುದ್ಧಿಯ ಆರೋಪಕ್ಕೆ ತಾನು ಹೊರಚ್ಚಾಗಿಯೇ‡ ಇರುವನು.

**ವಶಿಯಾಗಿಯೂ ಸರ್ವಭೂತಗಳಿಗೂ ಅಂತರಾತ್ಮನಾಗಿಯೂ ಇರುವ ಯಾವ ಒಬ್ಬನೇ (ತನ್ನ) ಒಂದು ರೂಪವನ್ನು ಬಹುವಿಧವಾಗಿ ಮಾಡಿಕೊಂಡಿರುವನೋ, ತಮ್ಮ ಆತ್ಮದಲ್ಲಿರುವ ಆತ್ಮನನ್ನು ಯಾವ ಧೀರರು (ಉಪದೇಶವಾದ) ಬಳಿಕ ಕಾಣುವರೋ ಅವರಿಗೇ ಶಾಶ್ವತವಾದ ಸುಖವು, ಉಳಿದವರಿಗಲ್ಲ. ‖ ೧೨ ‖**

---

* ಮೊದಲು ತಾವು ಅಜ್ಞರಾದ ಜೀವರೆಂದು ತಿಳಿದು ಕಾಮುಕರ್ಮಕ್ಕೆ ಜನರು ಒಳಗಾಗುವರು

† ಜೀವರಲ್ಲಿ ಅವಿದ್ಯೆಯು ಇದೆಯೆಂಬುದೂ ಅದು ವಿದ್ಯೆಯಿಂದ ಹೋಗುವದೆಂಬುದೂ ವ್ಯವಹಾರದ ದೃಷ್ಟಿಯೇ ಹೊರತು ನಿಜವಾದದ್ದಲ್ಲ. ನಿಜವಾಗಿ ನೋಡಿದರೆ ಹೋಗಬೇಕಾದ ಅವಿದ್ಯೆಯೂ ಇಲ್ಲ, ಬರಬೇಕಾದ ಜ್ಞಾನವೂ ಇರುವದಿಲ್ಲ.

‡ ಬುದ್ಧಿಯಿಂದ ಆರೋಪಮಾಡಿಕೊಂಡಿರುವ ಸ್ವರೂಪವು ಆತ್ಮನಿಗೆ ಅಂಟುವದಿಲ್ಲ.

ಮತ್ತು ಆ ಪರಮೇಶ್ವರನೊಬ್ಬನೇ ಎಲ್ಲೆಲ್ಲಿಯೂ ಹಬ್ಬಿಕೊಂಡು ಸ್ವತಂತ್ರನಾಗಿರುವನು; ಅವನಿಗೆ ಸಮನಾದ* ಅಥವಾ ಹೆಚ್ಚಾದ ಬೇರೊಬ್ಬನು ಇರುವದಿಲ್ಲ. ಇವನು ವಶಿಯು, ಏಕೆಂದರೆ ಜಗತ್ತೆಲ್ಲ ಇವನ ವಶದಲ್ಲಿಯೇ ಇರುವದು. ಅದೇಕೆ? ಎಂದರೆ ಇವನು ಎಲ್ಲಾ ಪ್ರಾಣಿಗಳಿಗೂ ಒಳಗಿನ ಆತ್ಮನೇ ಆಗಿರುವನು. ಅದು ಹೇಗೆ? ಎಂದರೆ, ಒಂದೇ ರೂಪವಾಗಿರುವ ಅತಿಶುದ್ಧವಾದ ಚೈತನ್ಯವೆಂಬ ತನ್ನ ಒಂದೇ ಒಂದು ಸ್ವರೂಪವನ್ನು† ನಾಮ, ರೂಪ- ಮುಂತಾದ ಅಶುದ್ಧವಾದ‡ ಉಪಾಧಿಗಳು ಬೇರೆ ಬೇರೆಯಾಗಿರುವ ಕಾರಣದಿಂದ ಬಹುವಿಧವಾಗಿ ಮಾಡಿಕೊಂಡಿರುವನು ; ಹೀಗೆಂದು ನೆನೆಸುವದಕ್ಕೂ ಆಗದಿರುವ ಶಕ್ತಿಗಳುಳ್ಳವನಾದ್ದರಿಂದ§ ಬರಿಯ ತನ್ನ ಇರುವಿಕೆಯೊಂದರಿಂದಲೇ||(ಬಹುವಿಧವಾಗಿ ಮಾಡಿಕೊಂಡಿರುತ್ತಾನೆ).

ಆ ತಮ್ಮ ಆತ್ಮದಲ್ಲಿರುವ ಎಂದರೆ ಶರೀರದ ಹೃದಯಾಕಾಶವಾದ ಬುದ್ಧಿಯಲ್ಲಿ ಚೈತನ್ಯರೂಪದಿಂದ ತೋರಿಕೊಳ್ಳುತ್ತಿರುವ ಎಂದರ್ಥ; ಏಕೆಂದರೆ ಆತ್ಮನ ಆಕಾಶದಂತೆ ಅಮೂರ್ತನಾಗಿರುವದರಿಂದ ಶರೀರವು ಆತ್ಮನಿಗೆ ಆಧಾರವೆನ್ನುವದು ಹೊಂದುವದಿಲ್ಲ; (ಆದ್ದರಿಂದ) 'ಕನ್ನಡಿಯಲ್ಲಿ ಮುಖವಿದೆ'** ಎಂಬ ಪ್ರಯೋಗದಂತೆಯೇ ಇದನ್ನೂ ತಿಳಿಯಬೇಕು. ಹಾಗೆ (ಶರೀರದಲ್ಲಿರುವ) ಈ ಈಶ್ವರನಾದ†† ಆತ್ಮನನ್ನು ಹೊರಗಿನ ವೃತ್ತಿಗಳನ್ನೆಲ್ಲ ಹಿಂತಿರುಗಿಸಿಕೊಂಡು‡‡ ಯಾರು ಆಚಾರ್ಯರ ಮತ್ತು ಶಾಸ್ತ್ರದ ಉಪದೇಶವಾದ ಬಳಿಕ§§ ಕಾಣುವರೋ ಎಂದರೆ ನೇರಾಗಿ

* ಗೀತೆಯ (೧೧–೪೩) ಸೂಚನೆ. 'ಸಮನಾದವನಿಲ್ಲ' ಎಂಬುದರಿಂದ ಆತ್ಮರು ಅನೇಕರೆಂಬ ಮತವನ್ನೂ 'ಅಧಿಕನಿಲ್ಲ' ಎಂಬುದರಿಂದ ಆತ್ಮಬ್ರಹ್ಮರು ಬೇರೆ ಎಂಬುದನ್ನೂ ನಿರಾಕರಿಸಿರುತ್ತದೆ. †. ಒಬ್ಬನೆ ಆಗಿರುವ ತನ್ನ ನಿಜವಾದ ರೂಪ. ‡. ರಾಗದ್ವೇಷಾದಿಗಳಿಗೂ ಜನ್ಮಮರಣಗಳಿಗೂ ಕಾರಣವಾಗಿರುವವರಿಂದ ನಾಮರೂಪಗಳು ಅಶುದ್ಧ § ಈ ಶಕ್ತಿಗಳೂ ಅವಿದ್ಯೆಯಿಂದ ಕಲ್ಪಿತವೆ ಬ್ರ|| ಸೂ|| (೪–೩–೧೪) ಭಾಷ್ಯವನ್ನು ನೋಡಿ || ಸೃಷ್ಟಿಮಾಡುವದಕ್ಕೆ ತಾನು ಏನೂ ಮಾಡಬೇಕಾದ್ದಿಲ್ಲ. ಏಕೆಂದರೆ ಸೃಷ್ಟಿ ಪರಮಾರ್ಥವಲ್ಲ.

**. ಮೂರ್ತವಸ್ತುಗಳಾದ ಕಲ್ಲು ಮುಂತಾದವುಗಳಿಗೆ ಆಧಾರವು ಬೇಕು, ಅಮೂರ್ತವಾದ ಆಕಾಶಾದಿಗಳಿಗೆ ಬೇಡ ಆದ್ದರಿಂದ 'ಆತ್ಮನು ಶರೀರದಲ್ಲಿದ್ದಾನೆ' ಎಂಬುದನ್ನು 'ಕನ್ನಡಿಯಲ್ಲಿ ಮುಖವಿದೆ' ಎಂಬ ಮಾತನ್ನು ಹೇಗೋ ಹಾಗೆ ಅರ್ಥಮಾಡಿಕೊಳ್ಳಬೇಕು.

††. ಅಂತರಾತ್ಮನಾಗಿ ಎಲ್ಲವನ್ನೂ ಆಳುವದರಿಂದ ಇವನೇ ಈಶ್ವರನು. ಈಶಾವಾಸ್ಯ(೧) ಭಾಷ್ಯವನ್ನು ನೋಡಿ.

‡‡. ಹೊರಗಿನ ವೃತ್ತಿಗಳೆಂದರೆ ವಿಷಯದಲ್ಲಿರುವ ಇಂದ್ರಿಯಮನಸ್ಸುಗಳ ವೃತ್ತಿಗಳು; ಆತ್ಮಜ್ಞಾನಕ್ಕೆ ಇವು ಅಡ್ಡಿ ಎಂದು ಹಿಂದೆ ಹೇಳಿದೆ.

§§. ತಾವೇ ನೋಡಿದರೆ ಹೊರಗಿನ ಪ್ರತ್ಯಕ್ಷಾದಿಪ್ರಮಾಣಗಳಿಂದ ನೋಡಿ ಆತ್ಮನೇ ಇಲ್ಲವೆಂದು ತಿಳಿದುಕೊಳ್ಳುವ ಅಪಾಯವಿದೆ.

ಅನುಭವಿಸುವರೋ* ಧೀರರಾದ ಎಂದರೆ ವಿವೇಕಿಗಳಾದ ಆ ಪರಮೇಶ್ವರಸ್ವರೂಪ ರಾದವರಿಗೇ† ಶಾಶ್ವತಸುಖ, ನಿತ್ಯವಾದ ಆತ್ಮಾನಂದವೆಂಬ ಸುಖವಾಗುವದು. ಹೊರಗೆ ಆಸಕ್ತಿಯನ್ನು ಇಟ್ಟುಕೊಂಡಿರುವ ಬುದ್ಧಿಯುಳ್ಳ ಮಿಕ್ಕ ಅವಿವೇಕಿಗಳಿಗೆ-(ಇದು ಅವರ) ಆತ್ಮವೇ ಆಗಿರುವದಾದರೂ- (ಈ ಸುಖವು) ಉಂಟಾಗಲಾರದು. ಏಕೆಂದರೆ **ಅವಿದ್ಯೆಯೇ**‡ ಇದಕ್ಕೆ ಮರೆಯಾಗಿರುವದು.

**ಅನಿತ್ಯವಾದವುಗಳಲ್ಲಿ ನಿತ್ಯನಾಗಿ ಚೇತನರುಗಳಿಗೆ ಚೇತನನಾಗಿ ತಾನೊಬ್ಬನೇ ಬಹುಪ್ರಾಣಿಗಳಿಗೆ ಯಾವನು ಕಾಮವನ್ನು ಕೊಡುತ್ತಿರುವನೋ, ತಮ್ಮ ಆತ್ಮದಲ್ಲಿರುವ ಆತನನ್ನು ಯಾವ ಧೀರರು (ಉಪದೇಶವಾದ) ಬಳಿಕ ಕಾಣುವರೋ ಅವರಿಗೇ ಶಾಶ್ವತವಾದ ಶಾಂತಿಯು, ಉಳಿದವರಿಗಲ್ಲ.** || ೧೩ ||

ಮತ್ತು ಅನಿತ್ಯವಾಗಿ ವಿನಾಶವಾಗುತ್ತಿರುವ (ಪ್ರಾಣಿಗಳಲ್ಲಿ ತಾನು) ನಿತ್ಯನಾಗಿ ನಾಶವಾಗದೆ§ ಇರುವನು. ಚೇತನರುಗಳಿಗೆ ಎಂದರೆ ಅರಿಯುವ ಬ್ರಹ್ಮಾದಿಪ್ರಾಣಿಗಳಿಗೆ ಚೇತನನಾಗಿರುವನು. ಉಷ್ಣವಿಲ್ಲದ ನೀರು ಮುಂತಾದವುಗಳು ಸುಡುವದಕ್ಕೆ ಬೆಂಕಿಯೇ ಹೇಗೆ ನಿಮಿತ್ತವೋ || ಹಾಗೆ ಆತ್ಮನ ಚೈತನ್ಯವೇ (ಚೈತನ್ಯವಲ್ಲದ) ಉಳಿದವರಿಗೆ ಅರಿವುಂಟಾಗುವದಕ್ಕೆ ಕಾರಣವು.

ಮತ್ತು ಆ ಸರ್ವಜ್ಞನಾದ ಸರ್ವೇಶ್ವರನು ಕಾಮಿಗಳಾದ ಸಂಸಾರಿಗಳಿಗೆ ಕರ್ಮಗಳಿಗೆ ಅನುಗುಣವಾಗಿ ಕಾಮಗಳನ್ನು ಎಂದರೆ ಕರ್ಮಕ್ಕೆ ಫಲವಾಗಿ ತಾನು ಅನುಗ್ರಹಿಸಿ ಕೊಡುವಂಥ ಕಾಮಗಳನ್ನು ಯಾವನೊಬ್ಬನೇ ಅನೇಕರಿಗೆ

---

* ಆಚಾರ್ಯರ ಮತ್ತು ಶಾಸ್ತ್ರದ ಉಪದೇಶದಿಂದಲೇ ಆತ್ಮತತ್ತ್ವವನ್ನು ಪಡೆಯಬೇಕಾಗಿರುವದಾದರೂ ಅದು ಮತ್ತೊಬ್ಬರ ಉಪದೇಶವನ್ನು ಅವಲಂಬಿಸಿರುವದಿಲ್ಲ, ನಮ್ಮ ಆತ್ಮವಾದ್ದರಿಂದ ನಾವೇ ನೇರಾಗಿ ತಿಳಿದುಕೊಳ್ಳಬಹುದಾಗಿದೆ †. ಮೇಲೆ ಹೇಳಿದಂತೆ ಆತ್ಮವು ಈಶ್ವರಸ್ವರೂಪವಾಗಿರುವದರಿಂದ ಅಂಥ ಆತ್ಮನು ತಾನೆಂದು ತಿಳಿದುಕೊಂಡವರೂ ಈಶ್ವರರೆ

‡. ತಿಳಿಯದೆಇದ್ದದ್ದರಿಂದ ಕಾಣದೆ ಇರುವ ಆತ್ಮಸುಖವು ತಿಳಿದುಕೊಂಡರೆ ಮಾತ್ರ ಕಾಣುವದು.

§ "ಒಂದು ಕಲ್ಪದಲ್ಲಿ ಪ್ರಲಯವಾದ ವಸ್ತುಗಳು ಮತ್ತೊಂದು ಕಲ್ಪದಲ್ಲಿಯೂ ಅದೇ ರೂಪದಲ್ಲಿ ಹುಟ್ಟುತ್ತಿರುವದರಿಂದ ಪ್ರಲಯದಲ್ಲಿ ವಿನಾಶವಾಗುವ ವಸ್ತುಗಳೆಲ್ಲವೂ ಯಾವದೋ ಒಂದು ವಸ್ತುವಿನಲ್ಲಿ ಅಡಗಿರುತ್ತವೆ ಎಂದು ಒಪ್ಪಿಕೊಳ್ಳಬೇಕು. ಇಂಥ ವಸ್ತುವೆ ಪರಮಾತ್ಮವಸ್ತು-ಎಂಬುದೇ 'ನಿತ್ಯ' ಎಂಬುದಕ್ಕೆ ಅರ್ಥ; ಬುದ್ಧಿವಂತರಾದ ಬ್ರಹ್ಮಾದಿಗಳಿಗೂ ಆತ್ಮಾನಂದವನ್ನು ಬಿಟ್ಟು ಹೊರಗೆ ವಿಷಯಗಳ ಕಡೆಗೆ ಬುದ್ಧಿಯು ಹರಿಯುತ್ತಿರುವದರಿಂದ ಅವರನ್ನೆಲ್ಲ ತನ್ನ ಕಟ್ಟಿನಲ್ಲಿಟ್ಟುಕೊಂಡು ಒಬ್ಬನಿದಾನೆಂದಾಯಿತು ಅವನೆ ಪರಮಾತ್ಮನು ಎಂದು ತಿಳಿಸುವದೇ ಚೇತನ ಎಂಬುದಕ್ಕೆ ಅರ್ಥ" ಹೀಗೆಂಬುದು ವ್ಯಾಖ್ಯಾನಕಾರರ ಮತ ಇದು ಸರಿಯೆಂದು ತೋರುವದಿಲ್ಲ.

|| ೬೮ನೆ ಪುಟದ † ಟಿಪ್ಪಣಿಯನ್ನು ನೋಡಿ

ಆಯಾಸವಿಲ್ಲದೆ* ಕೊಡುತ್ತಿರುವನೋ ಎಂದಭಿಪ್ರಾಯ. ತಮ್ಮ ಶರೀರದಲ್ಲಿರುವ ಅಂಥ (ಆತ್ಮನನ್ನು) ಯಾರು (ಉಪದೇಶವಾದ) ಬಳಿಕ ತಿಳಿದುಕೊಳ್ಳುವರೋ ಧೀರರಾದ ಅವರಿಗೇ ಶಾಂತಿಯು ಎಂದರೆ ಉಪರತಿಯು ಆಗುವದು, ನಿತ್ಯವಾಗಿ ಅವರ ಸ್ವರೂಪವಾಗಿಯೇ ಇರುವದು. ಹೀಗಿಲ್ಲದ ಮಿಕ್ಕ ಜನಗಳಿಗೆ (ಶಾಂತಿಯು) ಆಗದು.

## ಬ್ರಹ್ಮವು ಸ್ವಪ್ರಕಾಶವು

**ಅನಿರ್ದೇಶ್ಯವಾದ ಆ ಹೆಚ್ಚಿನ ಸುಖವನ್ನು ಅದು ಇದೇ ಎಂದು ಅರಿಯುತ್ತಾರಷ್ಟೆ, ಅದನ್ನು ನಾನು ಹೇಗೆ ತಿಳಿದುಕೊಳ್ಳಲಿ? ಅದು ಬೆಳಗುವದೊ (ಇಲ್ಲವೊ?) ಚೆನ್ನಾಗಿ ಕಾಣುವದೊ (ಇಲ್ಲವೊ)? ॥ ೧೪ ॥**

ಆತ್ಮನ ವಿಜ್ಞಾನವೆಂಬ ಅನಿರ್ದೇಶ್ಯವಾದ ಇದೆಂದು ತೋರಿಸುವದಕ್ಕಾಗದಿರುವ ಈ ಹೆಚ್ಚಿನ ಸುಖವು ಸಾಮಾನ್ಯ ಜನರ ಮಾತಿಗೂ ಮನಸ್ಸಿಗೂ ಗೋಚರವಾಗದಿದ್ದರೂ ಅಂಥ ಇದನ್ನು (ಮೂರು) ಬಯಕೆಗಳನ್ನೂ ತೊರೆದ ಬ್ರಾಹ್ಮಣರಾದವರು (ತಮಗೆ) ಪ್ರತ್ಯಕ್ಷವಾಗಿಯೇ ಇರುವದೆಂದು ತಿಳಿಯುವರು. ಆ ಸುಖವನ್ನು ಯಾವ ಪ್ರಕಾರದಿಂದ ನಾನು ತಿಳಿದುಕೊಳ್ಳಲಿ? ಎಂದರೆ ಬಯಕೆಯನ್ನೆಲ್ಲ ತೊರೆದ ಸಂನ್ಯಾಸಿಗಳಂತೆ 'ಇದೇ (ಆ ಸುಖವು)' ಎಂದು ನನ್ನ ಬುದ್ಧಿಗೆ ಹೇಗೆ ಗೋಚರಪಡಿಸಿಕೊಳ್ಳಲಿ? ಅದೇನು ಬೆಳಗುವದೊ ಎಂದರೆ ತೋರಿಕೊಳ್ಳುವದೊ (ಇಲ್ಲವೊ?) ಅದು ಪ್ರಕಾಶರೂಪವಾಗಿ ಇರುವದಾದರೆ ನಮ್ಮಂಥವರ† ಬುದ್ಧಿಗೆ ಗೋಚರವಾಗಿ ಚೆನ್ನಾಗಿ ಕಾಣುವದೊ ಇಲ್ಲವೊ?

**ಅಲ್ಲಿ ಸೂರ್ಯನು ಬೆಳಗುವದಿಲ್ಲ; ಚಂದ್ರನಕ್ಷತ್ರಗಳು (ಬೆಳಗುವದಿಲ್ಲ); ಈ ಮಿಂಚುಗಳೂ ಬೆಳಗುವದಿಲ್ಲ; ಈ ಅಗ್ನಿಯು ಬೆಳಗುವದೆಲ್ಲಿ**

---

* ಅನೇಕರು ಬಯಸುವ ಎಲ್ಲಾ ಕಾಮಗಳನ್ನೂ ಒಂದೇ ಕಾಲಕ್ಕೆ ನಿರಾಯಾಸವಾಗಿ ಒಬ್ಬನೇ ಕೊಡುವನು ಎಂಬುದರಿಂದ ಸರ್ವಶಕ್ತಿತ್ವವು ತೋರುತ್ತದೆ ಎಂದು ಭಾವ. ಅನೇಕ ಆತ್ಮರು ಇದ್ದಾರೆಂದು ಹೇಳುವದು ಪ್ರಕೃತವಲ್ಲವಾದ್ದರಿಂದ, ಆತ್ಮಬಹುತ್ವಕ್ಕೆ ಈ ವಾಕ್ಯವನ್ನು ಪ್ರಮಾಣವಾಗಿ ಅಂಗೀಕರಿಸುವ ವಾದಿಗಳು ವಾಕ್ಯಸ್ವಭಾವವನ್ನು ಅರಿಯರೆಂದು ಹೇಳಬೇಕು.

ಕರ್ಮಫಲವು ಕರ್ಮಸ್ವರೂಪವನ್ನೆಲ್ಲ ತಿಳಿದ ಸರ್ವಜ್ಞನಾದ ಈಶ್ವರನಿಂದಲೇ ದೊರಕಬೇಕಾದ್ದರಿಂದ ಈಶ್ವರನಿದ್ದಾನೆಂದು ಸಿದ್ಧವಾಗುವದು- ಎಂದು ವ್ಯಾಖ್ಯಾನಕಾರರು ವಿವರಿಸಿದ್ದಾರೆ. ಇದು ಬ್ರಹ್ಮಾತ್ಮೈಕತ್ವವೆಂಬ ಪ್ರಕೃತಕ್ಕೆ ಸಾಲದೆಂದು ತೋರುತ್ತದೆ. ೧೨ರಿಂದ ೧೫ರವರೆಗಿನ ಮಂತ್ರಗಳ ಅಭಿಪ್ರಾಯದ ವಿಷಯದಲ್ಲಿ ಪೀಠಿಕೆಯನ್ನೂ ಉಪನಿಷತ್ತಿನ ಸಾರವನ್ನೂ ನೋಡಿ.

† ತಾನೇ ಪ್ರಕಾಶಾತ್ಮಕನಾಗಿರುವ ಆತ್ಮನು ಅಜ್ಞರಾಗಿರುವ ನಮ್ಮ ಬುದ್ಧಿಗೆ ವಿಷಯವಾಗಿ ತೋರಿಯಾನೆ? ಎಂದು ಪ್ರಶ್ನೆ.

**ಬಂತು? ಬೆಳಗುತ್ತಿರುವ ಅವನನ್ನೇ ಅನುಸರಿಸಿ ಎಲ್ಲವೂ ಬೆಳಗುವದು; ಆತನ ಬೆಳಕಿನಿಂದಲೇ ಎಲ್ಲವೂ ತೋರುತ್ತಿರುವದು. || ೧೫ ||**

ಈ (ಮೇಲಿನ ಪ್ರಶ್ನೆಗೆ)ಇದು ಉತ್ತರ: ಅದು ಬೆಳಗಿಯೂ ಬೆಳಗುತ್ತದೆ, ಕಂಡೂ ಕಾಣುತ್ತದೆ. ಸೂರ್ಯನು ಎಲ್ಲವನ್ನೂ ಬೆಳಗುವನಾದರೂ ತನಗೂ* ಆತ್ಮನಾಗಿರುವ ಆ ಬ್ರಹ್ಮದಲ್ಲಿ ಬೆಳಗುವದಿಲ್ಲ; ಎಂದರೆ (ಸೂರ್ಯನು)ಬ್ರಹ್ಮವನ್ನು ತೋರಿಸಿಕೊಡುವದಿಲ್ಲ ಎಂದರ್ಥ. ಇದರಂತೆ ಚಂದ್ರನಕ್ಷತ್ರಗಳೂ ಈ ಮಿಂಚು ಗಳೂ ಬೆಳಗುವದಿಲ್ಲ; ನಮ್ಮ ಕಣ್ಣಿಗೆ ಕಾಣುವ ಈ ಬೆಂಕಿಯು (ಅದನ್ನು ಬೆಳಗುವ) ದೆಲ್ಲಿ ಬಂತು? ಹೆಚ್ಚು ಹೇಳಿದ್ದರಿಂದೇನು? ಬೆಳಗುವ ಈ ಸೂರ್ಯನೇ ಮುಂತಾದ ಸರ್ವಜಗತ್ತೂ ಆ ಪರಮೇಶ್ವರನು ತಾನೇ ಬೆಳಕಿನ ರೂಪವಾಗಿದ್ದು ಬೆಳಗುವ ದನ್ನು ಅನುಸರಿಸಿಯೇ ಬೆಳಗುತ್ತಿರುವದು. ಹೇಗೆ ನೀರು, ಕೊಳ್ಳಿ- ಮುಂತಾದದ್ದು ಬೆಂಕಿಯ ಸಂಬಂಧದಿಂದ ಬೆಂಕಿಯು ಸುಡುವದನ್ನನುಸರಿಸಿ ಸುಡುವದೇ ಹೊರತು ತಾನೇ ಸುಡುವದಿಲ್ಲವೋ ಅದರಂತೆ ಆ (ಬ್ರಹ್ಮದ) ಬೆಳಕಿನಿಂದಲೇ ಈ ಸೂರ್ಯನೇ ಮುಂತಾದದ್ದೆಲ್ಲವೂ ಬೆಳಗುತ್ತಿರುವದು.

ಹೀಗಿರುವದರಿಂದ, ಈ ಬ್ರಹ್ಮವು (ತಾನೇ ಬೆಳಗಿಯೂ) ಬೆಳಗುವದು, ಮತ್ತು (ತನ್ನ) ಕಾರ್ಯಗಳಲ್ಲಿರುವ ಬಗೆಬಗೆಯ† ಬೆಳಕಿನಿಂದಲೂ ಬೆಳಗುತ್ತಿರು ವದು. ಆದ್ದರಿಂದ ಆ ಬ್ರಹ್ಮವು ತಾನೇ ಬೆಳಕಿನ ರೂಪನಾದದ್ದೆಂದು ನಿಶ್ಚಯವಾಯಿತು. ಏಕೆಂದರೆ ತನ್ನಲ್ಲಿಲ್ಲದ ಬೆಳಕನ್ನು ಮತ್ತೊಂದಕ್ಕೆ ಉಂಟು ಮಾಡುವದಕ್ಕೆ (ಯಾವ ವಸ್ತುವಿಗೂ) ಆಗಲಾರದು. ಉದಾಹರಣೆಗೆ (ತಮ್ಮಲ್ಲಿ (ಯಾವ ಬೆಳಕೂ ಇಲ್ಲದ) ಗಡಿಗ ಮುಂತಾದವುಗಳು ಮತ್ತೊಂದು ವಸ್ತುವನ್ನು ಬೆಳಗುವದು ಕಂಡುಬರುವದಿಲ್ಲ; ಬೆಳಕಿನ ರೂಪದಲ್ಲಿರುವ ಸೂರ್ಯನೇ ಮುಂ ತಾದವುಗಳು ಹಾಗೆ (ಬೆಳಗುವದು) ಕಂಡುಬಂದಿರುತ್ತದೆ (ಆದ್ದರಿಂದ ಬ್ರಹ್ಮವು ತನ್ನ ಬೆಳಕಿನಿಂದ ಎಲ್ಲವನ್ನೂ ಬೆಳಗುತ್ತಿದೆಯೆಂದಾಯಿತು.)

---

* ಸೂರ್ಯನಿಗೂ ಬ್ರಹ್ಮವು ಆತ್ಮವಾಗಿದೆ

† ಕಾರ್ಯವಾದ ಸೂರ್ಯನೇ ಮುಂತಾದವುಗಳ ಬೆಳಕೂ ಇದರದೆ; ವಿಶೇಷರೂಪವಾಗಿಯೂ ತನ್ನ ಸ್ವಾಭಾವಿಕರೂಪವಾಗಿಯೂ ಬೆಳಗುವದು ಎಂದರ್ಥ. ಈ ಮಂತ್ರದ ಭಾಷ್ಯವನ್ನು ಮುಂಡಕ ೨-೨-೧೦ ನೆಯ ಮಂತ್ರದ ಭಾಷ್ಯಕ್ಕೆ ಹೋಲಿಸಿ ನೋಡಿರಿ.

# ಎರಡನೆಯ ಅಧ್ಯಾಯ – ಮೂರನೆಯ ವಲ್ಲಿ

ಮರದ ಬುಡದ ಸ್ವರೂಪವನ್ನು ಗೊತ್ತುಪಡಿಸುವದರ ಮೂಲಕ (ಅದರ) ಬೇರಿನ ಸ್ವರೂಪವನ್ನು ಹೇಗೆ ಲೋಕದಲ್ಲಿ ನಿರ್ಣಯಿಸುತ್ತಾರೋ ಅದರಂತೆ ಸಂಸಾರವೆಂಬ ಕಾರ್ಯರೂಪವಾದ ವೃಕ್ಷದ ಸ್ವರೂಪವನ್ನು ನಿರ್ಧರಿಸುವದರ ಮೂಲಕ ಅದರ ಮೂಲವಾದ ಬ್ರಹ್ಮದ ಸ್ವರೂಪವನ್ನು ಗೊತ್ತುಪಡಿಸುವದಕ್ಕಾಗಿ ಈ ಆರನೆಯ ವಲ್ಲಿಯು ಆರಂಭವಾಗಿರುತ್ತದೆ.

## ಜಗತ್ಕಾರಣವೇ ಬ್ರಹ್ಮ

**ಮೇಲುಗಡೆ ಬೇರೂ ಕೆಳಗಡೆ ಕೊಂಬೆಗಳೂ ಇರುವ ಈ ಅಶ್ವತ್ಥವು ಬಹುಕಾಲದ್ದು. ಅದೇ ಶುಕ್ರವು, ಅದೇ ಬ್ರಹ್ಮವು, ಅದೇ ಅಮೃತವೆನಿಸಿಕೊಳ್ಳಲ್ಪಡುವದು. ಅದರಲ್ಲಿ ಲೋಕಗಳೆಲ್ಲ ಆಶ್ರಯಿಸಿರುವವು, ಅದನ್ನು ಯಾವದೂ ಮೀರಲಾರದು, ಇದೇ ಅದು. ॥ ೧ ॥**

ಮೇಲುಗಡೆ ಬೇರುಳ್ಳದ್ದು ಎಂದರೆ ಮೇಲೆನಿಸಿದ ಆ **ವಿಷ್ಣುವಿನ ಪರಮ ಪದ**ವೆಂಬುದೇ ಬೇರಾಗಿರುವದರಿಂದ ಈ ಅವ್ಯಕ್ತಾದಿಯಾಗಿ ಸ್ಥಾವರದವರೆಗಿನ ಸಂಸಾರವೃಕ್ಷವು ಮೇಲೆ ಬೇರುಳ್ಳದ್ದೆನಿಸಿರುವದು. ಇದು ಕಡಿದುಹಾಕಲ್ಪಡತಕ್ಕದ್ದಾದ್ದರಿಂದ [ವ್ರಶ್ಚನಾತ್] ವೃಕ್ಷವೆನ್ನಿಸುವದು ಹುಟ್ಟು, ಮುಪ್ಪು, ಮರಣ, ಶೋಕ–ಮುಂತಾದ ಅನೇಕವಾದ ಅನರ್ಥಗಳ ರೂಪವಾಗಿರುವದಾಗಿಯೂ ಮಾಯೆ, ಬಿಸಿಲುಕುದುರೆಯ ನೀರು, ಗಂಧರ್ವನಗರ– ಮುಂತಾದವುಗಳಂತೆ ತೋರಿ ಹಾರುವದರಿಂದ ಪ್ರತಿಕ್ಷಣವೂ ಬೇರೊಂದು ರೂಪವನ್ನು ಪಡೆಯುತ್ತಿರುವದಾಗಿಯೂ ಕೊನೆಗೆ ವೃಕ್ಷದಂತೆ ಇಲ್ಲವೆನಿಸುವದಾಗಿಯೂ ಬಾಳೆಯ ಕಂಬದಂತೆ ಸಾರವಿಲ್ಲದ್ದಾಗಿಯೂ ಎಷ್ಟೋ ನೂರಾರು ಪಾಷಂಡಮತಗಳವರ* ಬುದ್ಧಿಯ ವಿಧವಿಧವಾದ ಕಲ್ಪನೆಗೆ ಅವಕಾಶವನ್ನು ಕೊಡುತ್ತಿರುವದಾಗಿಯೂ ತತ್ತ್ವವನ್ನೇ ತಿಳಿಯಬೇಕೆಂಬವರಿಗೆ ಇದೇ ತತ್ತ್ವವೆಂದು ನಿರ್ಣಯಿಸುವದಕ್ಕೆ ಅವಕಾಶವನ್ನು † ಕೊಡುತ್ತಿರುವದಾಗಿಯೂ ವೇದಾಂತಗಳಲ್ಲಿ ಪರಬ್ರಹ್ಮವೇ

---

* ತಪ್ಪುದಾರಿಯ ನಾಸ್ತಿಕಮತದವರ

† ಈ ಜಗತ್ತಿನ ತತ್ತ್ವವೆಂಬುದನ್ನು ತಿಳಿಯುವದಕ್ಕೆ ಎಷ್ಟೆಷ್ಟು ವಿಚಾರಮಾಡಿದರೆ ಅಷ್ಟಷ್ಟು ಹೊಸ ಒಗಟುಗಳು ತೋರುತ್ತಾ, ಇದನ್ನು ನಿರ್ಣಯಿಸುವದಕ್ಕಾಗುವದೇ ಇಲ್ಲ– ಎನ್ನಿಸುವದು. ಆದರೂ ವೇದಾಂತದ ಕ್ರಮದಲ್ಲಿ ವಿಚಾರಿಸಿದರೆ ಇದರ ತತ್ತ್ವವು ಬ್ರಹ್ಮವೇ ಎಂದು ನಿರ್ಧಾರಿತವಾಗುವದು.

ಇದಕ್ಕೆ ಮೂಲವೆಂದು ನಿಶ್ಚಯಿಸಿರುವ ಸಾರವುಳ್ಳದ್ದಾಗಿಯೂ ಅವಿದ್ಯಾಕಾಮಕರ್ಮಗಳ **ಅವ್ಯಕ್ತಬೀಜ**ದಿಂದ ಹುಟ್ಟಿದ್ದಾಗಿಯೂ ವಿಜ್ಞಾನಶಕ್ತಿಕ್ರಿಯಾಶಕ್ತಿಗಳೆಂಬ ಎರಡು ಶಕ್ತಿಗಳುಳ್ಳ ಅಪರಬ್ರಹ್ಮವಾದ **ಹಿರಣ್ಯಗರ್ಭ**ನೆಂಬ **ಮೊಳಕೆ**ಯುಳ್ಳದ್ದಾಗಿಯೂ ಎಲ್ಲಾ ಪ್ರಾಣಿಗಳ **ಲಿಂಗಶರೀರ**ಗಳೆಂಬ ಹೊಡೆಯುಳ್ಳದ್ದಾಗಿಯೂ ಆಸೆಯೆಂಬ ನೀರು ಹೊಯ್ದು ಉಬ್ಬಿ ಹುಲುಸುಳ್ಳದ್ದಾಗಿಯೂ ಬುದ್ಧಿಯ ವಿಷಯಗಳೆಂಬ ಮತ್ತು ಇಂದ್ರಿಯಗಳ ವಿಷಯಗಳೆಂಬ ಚಿಗುರುಗಳುಳ್ಳದ್ದಾಗಿಯೂ ಶ್ರುತಿಸ್ಮೃತಿನ್ಯಾಯಗಳಿಂದ ಮಾಡಿದ ವಿದ್ಯೋಪದೇಶವೆಂಬ ಎಲೆಗಳುಳ್ಳದ್ದಾಗಿಯೂ ಯಜ್ಞ, ದಾನ, ತಪಸ್ಸು– ಮುಂತಾದ ಕ್ರಿಯೆಗಳೆಂಬ ಸೊಗಸಾದ ಬಹಳ ಹೂಗಳುಳ್ಳದ್ದಾಗಿಯೂ ಸುಖದುಃಖಗಳ ಅನುಭವವೆಂಬ ಅನೇಕ ರಸವುಳ್ಳವಾಗಿಯೂ ಪ್ರಾಣಿಗಳು ಆಶ್ರಯಿಸಿಕೊಂಡು ಜೀವಿಸುತ್ತಿರುವವಾಗಿಯೂ– ಇರುವ ಲೆಕ್ಕವಿಲ್ಲದಷ್ಟು ಫಲಗಳುಳ್ಳದ್ದಾಗಿಯೂ ಆಯಾ ಫಲಗಳ ಆಸೆಯೆಂಬ ನೀರನ್ನು ಹುಯ್ಯುವದರಿಂದ ಊರಿಕೊಂಡು ಬಲವಾಗಿಬಿಟ್ಟಿರುವ ಗಟ್ಟಿಯಾದ ಕಿರುಬೇರುಗಳುಳ್ಳದ್ದಾಗಿಯೂ **ಸತ್ಯಲೋಕವೇ** ಮುಂತಾದ ಹೆಸರಿನ **ಏಳು ಲೋಕ**ಗಳಲ್ಲಿ ಬ್ರಹ್ಮನೇ ಮುಂತಾದ ಹಕ್ಕಿಗಳು ಮಾಡಿಕೊಂಡಿರುವ ಗೂಡುಗಳುಳ್ಳದ್ದಾಗಿಯೂ ಪ್ರಾಣಿಗಳ ಸುಖದುಃಖಗಳಿಂದುಂಟಾಗುವ ಸಂತೋಷದಿಂದಲೂ ಶೋಕದಿಂದಲೂ ತೋರುವ ಕುಣಿತ, ಹಾಡು, ವಾದ್ಯಗಳು, ಹಾರಿ ಮೇಲೆ ಬೀಳುವದು, (ತೋಳುಗಳಿಂದ) ಪಟ್ಟುಹಿಡಿಯುವದು, ನಗುವದು, ಹಿಡಿದೆಳೆಯುವದು, ಅಳುವದು, 'ಹಾಹಾ ! ಬಿಡು ಬಿಡು !' ಎನ್ನುವದು– ಇವೇ ಮುಂತಾದ ಅನೇಕ ವಿಧವಾದ ಶಬ್ದಗಳಿಂದ ಗದ್ದಲವಾಗಿರುವ ಮಹಾಧ್ವನಿಯುಳ್ಳದ್ದಾಗಿಯೂ ವೇದಾಂತಗಳಲ್ಲಿ ಹೇಳಿರುವ ಬ್ರಹ್ಮಾತ್ಮದರ್ಶನವೆಂಬ ಅಸಂಗಶಸ್ತ್ರದಿಂದ* ಕಡಿಯಬೇಕಾದದ್ದಾಗಿಯೂ ಇರುವ ಈ ಸಂಸಾರವೃಕ್ಷವು ಅಶ್ವತ್ಥವು, ಎಂದರೆ ಅಶ್ವತ್ಥದ ಹಾಗೆ ಕಾಮಕರ್ಮಗಳೆಂಬ ಗಾಳಿಗಳಿಂದ ಯಾವಾಗಲೂ ಅಲುಗಾಡುವ ಸ್ವಭಾವವುಳ್ಳದ್ದು ; ಸ್ವರ್ಗ, ನರಕ, ತಿರ್ಯಗ್ಜನ್ಮ, ಪ್ರೇತಜನ್ಮ– ಮುಂತಾದವುಗಳೇ ಕೊಂಬೆಗಳಾಗಿ ಕೆಳಗೆ ಕೊಂಬೆಗಳಿರುವಂಥಾದ್ದು. ಇದು ಬಹುಕಾಲದ್ದು ಎಂದರೆ ಅನಾದಿಯಾಗಿ† ಬಹುಕಾಲದಿಂದಲೂ ನಡೆದುಕೊಂಡು ಬಂದಿರುವದು.

ಈ ಸಂಸಾರವೃಕ್ಷದ ಬೇರುಂಟಷ್ಟೆ, ಅದೇ ಶುಕ್ರವು ಎಂದರೆ ಶುಭ್ರವಾಗಿ ಶುದ್ಧವಾಗಿರುವಂಥದ್ದು ; ಜ್ಯೋತಿಯುಳ್ಳ ಚೈತನ್ಯವೆಂಬ ಆತ್ಮಜ್ಯೋತಿಯ ಸ್ವರೂಪವುಳ್ಳದ್ದು, ಅದೇ ಬ್ರಹ್ಮವು ; ಏಕೆಂದರೆ ಇದು ಎಲ್ಲಕ್ಕಿಂತಲೂ ದೊಡ್ಡದಾಗಿರುವದು. ಅದೇ ಅಮೃತವು ಎನಿಸಿಕೊಳ್ಳಲ್ಪಡುವದು ಎಂದರೆ ನಾಶವಿಲ್ಲದ

* ಗೀತೆಯ (೧೧–೩)ರ ಸೂಚನೆ † ಬ್ರ|| ಸೂ|| ೨—೧—೩೬.

ಸ್ವಭಾವವುಳ್ಳದ್ದೆನಿಸುವದು ; ಏಕೆಂದರೆ ಅದು (ನಿಜವಾಗಿಯೂ) ಸತ್ಯವಾಗಿರುವಂಥದ್ದು. ಅದಕ್ಕಿಂತ ಬೇರೆಯಾದ ಕಾರ್ಯವು ಕೇವಲ ಮಾತಿನಿಂದ ಆಗಿರುವ ಹೆಸರು,* ಸುಳ್ಳಾದದ್ದು, ನಾಶವುಳ್ಳದ್ದು. ಗಂಧರ್ವನಗರದಂತೆಯೂ ಬಿಸಿಲು ಕುದುರೆಯ ನೀರಿನಂತೆಯೂ ಮಾಯೆಯಂತೆಯೂ ಇರುವವಾಗಿಯೂ, ಪರಮಾರ್ಥವನ್ನು ಕಾಣದ್ದರಿಂದ ತೋರುತ್ತಿರುವವಾಗಿಯೂ ಇರುವ ಲೋಕಗಳೆಲ್ಲ ಉತ್ಪತ್ತಿ, ಸ್ಥಿತಿ, ಲಯ- ಎಂಬ ಮೂರು ಕಾಲಗಳಲ್ಲಿಯೂ ಪರಮಾರ್ಥವಾಗಿಯೂ ಸತ್ಯವಾಗಿರುವ ಬ್ರಹ್ಮವನ್ನೇ ಆಶ್ರಯಿಸಿಕೊಂಡಿರುವವು.† ಆ ಬ್ರಹ್ಮವನ್ನು– ಗಡಿಗೆ ಮುಂತಾದ ಕಾರ್ಯವು ಮಣ್ಣು ಮುಂತಾದ (ಕಾರಣ)ವನ್ನು ಹೇಗೆ ಮೀರಿರಲಾರದೋ ಹಾಗೆ– ಯಾವದೂ ಎಂದರೆ ಯಾವ ಕಾರ್ಯವೂ ಮೀರಲಾರದು. ಇದೇ ಅದು.

## ಜಗತ್ತಿನ ವ್ಯವಸ್ಥೆಗೆ ಕಾರಣವಾಗಿರುವದು ಬ್ರಹ್ಮ

**ಈ ಜಗತ್ತೆಲ್ಲವೂ (ಪ್ರಾಣನಿಂದಲೆ) ಹೊರಕ್ಕೆ ಬಂದು ಪ್ರಾಣನಿದ್ದರೇ ನಡುಗುತ್ತಿರುವದು. ಎತ್ತಿದ ವಜ್ರವಾಗಿರುವ (ಇವನು) ದೊಡ್ಡ ಭಯವು. ಯಾರು ಇದನ್ನು ಅರಿತುಕೊಳ್ಳುವರೋ ಅವರು ಅಮೃತರಾಗುವರು. ||**

ಯಾವದನ್ನು ಅರಿಯುವದರಿಂದ ಮೋಕ್ಷವಾಗುವದೆಂದು ಹೇಳುತ್ತಾರೋ ಅಂಥ ಜಗತ್ತಿನ ಮೂಲವಾದ ಬ್ರಹ್ಮವೆಂಬುದೇ ಇಲ್ಲ, ಏಕೆಂದರೆ ಈ (ಜಗತ್ತು) ಅಸತ್ತಿನಿಂದಲೇ ಉಂಟಾಗಿರುವದು– ಎಂದು (ಯಾರಾದರೂ ನಾಸ್ತಿಕರು ಹೇಳಬಹುದು.)

ಆದರೆ ಇದು ಸರಿಯಲ್ಲ. ಈ ಜಗತ್ತಿನಲ್ಲಿ ಪ್ರತಿಯೊಂದೂ ಪ್ರಾಣನೆಂಬ ಪರಬ್ರಹ್ಮವು ‡ ಇದ್ದರೇ ನಡುಗುತ್ತಿರುವದು, ಆದರಿಂದಲೇ ಹೊರಕ್ಕೆ ಬಂದು ಓಡಾಡುವದು, ನಿಯಮದಿಂದ ಕೆಲಸ ಮಾಡುತ್ತಿರುವದು. ಯಾವದು ಹೀಗೆ ಜಗತ್ತಿನ ಉತ್ಪತ್ತಿಯೇ ಮುಂತಾದ್ದಕ್ಕೆ ಕಾರಣವಾಗಿರುವದೋ ಆ ಬ್ರಹ್ಮವು ದೊಡ್ಡ ಭಯವು; ಯಾವದರಿಂದ ಹೆದರುತ್ತಾರೋ ಅದೇ ಭಯವು ; (ಈ ಬ್ರಹ್ಮವು) ದೊಡ್ಡ ಭಯ. (ಇದು) ಎತ್ತಿದ ವಜ್ರದಂತೆ ಇರುವದು; ಹೇಗೆ ವಜ್ರಾ

* ಛಾಂದೋಗ್ಯ (೬—೧೪) ದ ಸೂಚನೆ

† ಮರಗಿಡಗಳು ಭೂಮಿಯನ್ನು ಆಶ್ರಯಿಸಿರುವಂತೆ ಆಶ್ರಯಿಸಿರುವವೆಂದು ಆಧಾರಾಧೇಯಭಾವವನ್ನು ಇಟ್ಟುಕೊಳ್ಳಬಾರದೆನ್ನುವದಕ್ಕಾಗಿ ಗಂಧರ್ವನಗರಾದಿಗಳ ದೃಷ್ಟಾಂತವನ್ನು ಕೊಟ್ಟಿದೆ.

‡ ಬ್ರ|| ಸೂ|| (೧—೩—೩೯)ದಲ್ಲಿ ಪ್ರಾಣನೆಂದರೆ ಬ್ರಹ್ಮವೆಂದು ನಿರ್ಣಯಿಸಿದೆ.

ಯುಧವನ್ನು ಎತ್ತಿ ಹಿಡಿದುಕೊಂಡಿರುವ ರಾಜನು ಎದುರಿಗೆ ಇರುವದನ್ನು ಕಂಡು ಭೃತ್ಯರು ನಿಯಮವಾಗಿ ಆತನ ಅಪ್ಪಣೆಯಂತೆ ನಡೆದುಕೊಳ್ಳುತ್ತಿರುರುವರೋ ಹಾಗೆಯೇ ಈ ಚಂದ್ರಸೂರ್ಯಗ್ರಹನಕ್ಷತ್ರತಾರಕಾದಿಗಳೆಂಬ ಜಗತ್ತೆಲ್ಲವೂ ಈಶ್ವರನಿರುವದರಿಂದಲೇ ನಿಯಮವಾಗಿ ಒಂದು ಕ್ಷಣವೂ ನಿಲ್ಲದೆ ಕೆಲಸಮಾಡುತ್ತಿರುವದು– ಎಂದು ಹೇಳಿದಂತೆ ಆಯಿತು.

ಯಾರು ತಮ್ಮ ಪ್ರವೃತ್ತಿಗೂ ಸಾಕ್ಷಿಯಾದ * ಒಂದೇ ಇದ ಈ ಬ್ರಹ್ಮವನ್ನು ಅರಿತುಕೊಳ್ಳುವರೋ ಅವರು ಅಮೃತರಾಗುವರು, ಸಾವೆಂಬುದಿಲ್ಲದ ಸ್ವಭಾವದವರಾಗುವರು.

ಆತನ ಭಯದಿಂದಲೇ ಜಗತ್ತು ಇರುವದೆಂಬುದು ಹೇಗೆ? ಎಂದರೆ ಹೇಳುತ್ತಾನೆ: —

**ಈತನ ಭಯದಿಂದ ಅಗ್ನಿಯು ಸುಡುತ್ತಾನೆ; (ಈತನ) ಭಯದಿಂದ ಸೂರ್ಯನು ಕಾಯುತ್ತಾನೆ. (ಈತನ) ಭಯದಿಂದಲೇ ಇಂದ್ರನೂ ವಾಯುವೂ (ಕೆಲಸ ಮಾಡುತ್ತಾರೆ). (ಈತನ ಭಯದಿಂದಲೇ) ಐದನೆಯವನಾದ ಮೃತ್ಯುವು ಓಡುತ್ತಾನೆ.** || ೩ ||

(ಈ) ಪರಮೇಶ್ವರನ ಭಯದಿಂದ ಅಗ್ನಿಯು ಸುಡುತ್ತಾನೆ; (ಈತನ) ಭಯದಿಂದ ಸೂರ್ಯನು ಕಾಯುತ್ತಾನೆ, (ಈತನ) ಭಯದಿಂದಲೇ ಇಂದ್ರನೂ ವಾಯುವೂ (ಕೆಲಸ ಮಾಡುತ್ತಾರೆ). ಐದನೆಯವನಾದ ಮೃತ್ಯುವೂ (ಈತನ) ಭಯದಿಂದಲೇ ಓಡುತ್ತಾನೆ. ತಾವು ದೊಡ್ಡವರಾಗಿ ಸಮರ್ಥರಾಗಿರುವ **ಲೋಕಪಾಲರು**ಗಳಿಗೆ ವಜ್ರವನ್ನು ಕೈಯಲ್ಲಿ ಎತ್ತಿಹಿಡಿದವನಂತೆ ಕಟ್ಟುಮಾಡುವವನು ಒಬ್ಬನು ಇಲ್ಲದೆ ಇದ್ದರೆ– ಒಡೆಯನ ಭಯದಿಂದ ಹೆದರಿದ ಭೃತ್ಯರಂತೆ- ನಿಯತವಾಗಿ ಇವರು ಕೆಲಸಮಾಡುತ್ತಿರುವದೆಂಬುದು ಹೊಂದಲಾರದು.

## ಬ್ರಹ್ಮವನ್ನು ಈ ಲೋಕದಲ್ಲಿಯೇ ಅರಿಯಬೇಕು

**ಶರೀರವು ಸಡಿಲವಾಗುವದಕ್ಕೆ ಮೊದಲು ಇಲ್ಲಿಯೇ ತಿಳಿದುಕೊಳ್ಳುವದಕ್ಕೆ ಸಮರ್ಥನಾದರೆ (ಸರಿ. ಹಾಗಿಲ್ಲದಿದ್ದರೆ) ಅದರಿಂದ ಸರ್ಗವೆಂಬ ಲೋಕಗಳಲ್ಲಿ ಶರೀರಕ್ಕೆ ತಕ್ಕವನಾಗುವನು.** || ೪ ||

ಆ ಬ್ರಹ್ಮವನ್ನು ಇಲ್ಲಿ ಬದುಕಿರುವಾಗಲೇ ತಿಳಿಯುವದಕ್ಕೆ ಸಮರ್ಥನಾದರೆ, ಈ ಭಯಕಾರಣವಾದ ಬ್ರಹ್ಮವನ್ನು ತಿಳಿದುಕೊಳ್ಳುವನಾದರೆ, ಶರೀ

---

* ಯಾವಾಗಲೂ ಕೂಟಸ್ಥನಾಗಿರುವ ಆತ್ಮನು ನಮ್ಮಗಳ ಕ್ರಿಯೆಗಳನ್ನೆಲ್ಲ ನೋಡುತ್ತಿರುವನು. ಗೀತೆಯನ್ನು (೧೩—೧೨) ನೋಡಿ.

ರವು ಸಡಿಲವಾಗುವದಕ್ಕೆ ಮೊದಲು ಎಂದರೆ ದೇಹವು ಬಿದ್ದುಹೋಗುವದಕ್ಕೆ ಮೊದಲು (ತಿಳಿದುಕೊಂಡರೆ), ಸಂಸಾರಬಂಧದಿಂದ ಬಿಡುಗಡೆಯಾಗುತ್ತಾನೆ. ಆದರೆ ತಿಳಿದುಕೊಳ್ಳುವದಕ್ಕೆ ಕೈಯಲ್ಲಿ ಸಾಗದೆ ಹೋದರೆ ಆ ಅಜ್ಞಾನದಿಂದ ಸರ್ಗಲೋಕಗಳಲ್ಲಿ– ಸೃಷ್ಟಿಯಾಗುವ ಪ್ರಾಣಿಗಳು ಎಲ್ಲಿ ಸೃಷ್ಟಿಯಾಗುವವೋ ಅಂಥ ಪೃಥಿವಿ ಮುಂತಾದ ಲೋಕಗಳು ಸರ್ಗಲೋಕಗಳೆನಿಸುವವು. ಆ ಸರ್ಗಲೋಕಗಳಲ್ಲಿ– ಶರೀರಕ್ಕೆ ತಕ್ಕವನಾಗುವನು, ಯೋಗ್ಯನಾಗುತ್ತಾನೆ; ದೇಹವನ್ನು ಧರಿಸುತ್ತಾನೆ ಎಂದರ್ಥ.

ಆದ್ದರಿಂದ ಶರೀರವು ಸಡಿಲಿಸುವ ಮೊದಲು (ಇಲ್ಲಿಯೇ) ಆತ್ಮವನ್ನು ತಿಳಿದುಕೊಳ್ಳುವದಕ್ಕೆ ಯತ್ನವನ್ನು ಮಾಡಬೇಕು. ಏಕೆಂದರೆ ಇಲ್ಲಿಯೇ ಆದರೆ ಕನ್ನಡಿಯಲ್ಲಿ ಮುಖವನ್ನು ಕಾಣುವಂತೆ ಆತ್ಮನನ್ನು ಸ್ಪಷ್ಟವಾಗಿ ಕಾಣಬಹುದೇ ಹೊರತು ಮಿಕ್ಕ ಲೋಕಗಳಲ್ಲಿ (ಹಾಗೆ ಸ್ಪಷ್ಟವಾಗಿ ಕಾಣಲಾಗುವದಿಲ್ಲ. ಬ್ರಹ್ಮಲೋಕವೊಂದರಲ್ಲೇನೋ ಕಾಣಬಹುದು; ಆದರೆ ಆ ಬ್ರಹ್ಮಲೋಕವೆಂಬುದನ್ನು) ಪಡೆಯುವದು ಕಷ್ಟವಾಗಿರುತ್ತದೆ. ಅದು ಹೇಗೆ ಎಂದರೆ ಹೇಳುತ್ತಾನೆ:—

**ಕನ್ನಡಿಯಲ್ಲಿ ಹೇಗೋ ಹಾಗೆ ಆತ್ಮದಲ್ಲಿ, ಸ್ವಪ್ನದಲ್ಲಿ ಹೇಗೋ ಹಾಗೆ ಪಿತೃಲೋಕದಲ್ಲಿ, ನೀರಿನಲ್ಲಿ ಕಾಣುವದು ಹೇಗೋ ಹಾಗೆ ಗಂಧರ್ವಲೋಕದಲ್ಲಿ, ನೆರಳುಬಿಸಿಲುಗಳಂತೆ ಬ್ರಹ್ಮಲೋಕದಲ್ಲಿ. ||**

ಕನ್ನಡಿಯಲ್ಲಿ ಪ್ರತಿಬಿಂಬವಾಗಿರುವ ತಮ್ಮನ್ನು ಜನರು ಹೇಗೆ ಅತ್ಯಂತ ಬೇರೆಯಾಗಿ (ಸ್ಪಷ್ಟವಾಗಿ) ಕಾಣುವರೋ ಹಾಗೆ ಇಲ್ಲಿ ಆತ್ಮದಲ್ಲಿ ಎಂದರೆ ಕನ್ನಡಿಯಂತೆ ನಿರ್ಮಲವಾಗಿರುವ ತನ್ನ ಬುದ್ಧಿಯಲ್ಲಿ ಬೇರೆಯಾಗಿ ಆತ್ಮನನ್ನು ಕಾಣಬಹುದು ಎಂದರ್ಥ.

ಸ್ವಪ್ನದಲ್ಲಿ * ಜಾಗ್ರದ್ವಾಸನೆಯಿಂದ ಉಂಟಾಗುವ ಆತ್ಮದರ್ಶನವು ಹೇಗೆ ಸ್ಪಷ್ಟವಾಗಿರುವದಿಲ್ಲವೋ ಹಾಗೆ ಪಿತೃಲೋಕದಲ್ಲಿ ಬೇರ್ಪಡದೆಯೇ ಆತ್ಮನ ದರ್ಶನವಾಗುವದು, ಏಕೆಂದರೆ (ಅಲ್ಲಿ ಜನರು) ಕರ್ಮಫಲವನ್ನು ಅನುಭವಿಸುವದರಲ್ಲಿ ಆಸಕ್ತರಾಗಿರುವರು.

ನೀರಿನಲ್ಲಿ ಹೇಗೆ ಅವಯವಗಳು ಚೆನ್ನಾಗಿ ಬೇರ್ಪಡದೆ ತನ್ನ ರೂಪವು ಕಾಣುವಂತಿರುವದೋ– ಮೂಲದಲ್ಲಿ 'ಪರೀವ ದದೃಶೇ' ಎಂಬುದನ್ನು 'ಪರಿದೃಶ್ಯತೇ ಇವ' ಎಂದು ಜೋಡಿಸಿಕೊಳ್ಳಬೇಕು.– ಅದರಂತೆ ಗಂಧರ್ವಲೋಕದಲ್ಲಿಯೂ ಆತ್ಮನ ದರ್ಶನವು ಬಿಂಗಡವಾಗಿ ಕಾಣದೆ ಇರುವದು. ಇದರಂತೆಯೇ

* ಎಚ್ಚರದಲ್ಲಿ ಕಂಡ ಭೋಗಗಳನ್ನೇ ಕನಸಿನಲ್ಲಿ ಭ್ರಾಂತಿಯಿಂದ ಕಲ್ಪಿಸಿಕೊಂಡು ಭೋಗಾಸಕ್ತನಾಗಿರುತ್ತಾನೆ ಇದರಿಂದ ತಾನು ಯಾರೆಂಬ ವಿಷಯದಲ್ಲಿ ಮನಸ್ಸು ಹೋಗುವದಿಲ್ಲ.

ಲೋಕಾಂತರಗಳಲ್ಲಿಯೂ (ಕಾಣಲಾಗುವದಿಲ್ಲ)- ಎಂದು ಶಾಸ್ತ್ರಪ್ರಾಮಾಣ್ಯದಿಂದ* ನಿಶ್ಚಯಿಸಬಹುದು.

ಬ್ರಹ್ಮಲೋಕವೊಂದರಲ್ಲಿ ಮಾತ್ರ ನೆರಳುಬಿಸಿಲುಗಳಂತೆ ಅತ್ಯಂತವಾಗಿ ವಿಂಗಡವಾಗಿ (ಕಾಣಬಹುದು). ಆದರೆ ಅತ್ಯಂತವಾಗಿ ಅದಕ್ಕಾಗಿ ಮಾಡುವ (ಹೆಚ್ಚಿನ) ಕರ್ಮ ಮತ್ತು ಜ್ಞಾನಗಳ † (ಸೇರುವೆಯಿಂದ) ಪಡೆಯತಕ್ಕದ್ದಾದ್ದರಿಂದ ಆ ಬ್ರಹ್ಮಲೋಕವನ್ನು ಹೊಂದುವದೆಂಬುದು ಕಷ್ಟ. ಆದ್ದರಿಂದ ಆತ್ಮದರ್ಶನಕ್ಕೆ ಇಲ್ಲಿಯೇ ಯತ್ನವನ್ನು ಮಾಡಬೇಕು ಎಂದಭಿಪ್ರಾಯವು.

## ಇಂದ್ರಿಯಾದಿಗಳಿಂದ ಆತ್ಮನನ್ನು ವಿಂಗಡಿಸಿ ಅರಿಯಬೇಕು

**ಬೇರ ಬೇರೆ ಹುಟ್ಟುವ ಇಂದ್ರಿಯಗಳ ಬೇರೆಯ ಸ್ವರೂಪವನ್ನು ಹುಟ್ಟುವದು ಮುಳುಗುವದು- ಇವುಗಳನ್ನೂ ತಿಳಿದ ಧೀರನು ಶೋಕಿಸುವದಿಲ್ಲ.** || ೬ ||

ಇವನನ್ನು ತಿಳಿಯುವದು ಹೇಗೆ? ತಿಳಿದರೆ ಪ್ರಯೋಜನವಾದರೂ ಏನು? ಎಂದರೆ ಹೇಳುತ್ತಾರೆ. ಬೇರೆ ಬೇರೆ ಹುಟ್ಟುವ ಇಂದ್ರಿಯಗಳು ಎಂದರೆ ಆಯಾ ವಿಷಯಗಳನ್ನು ಅರಿಯುವದಕ್ಕೋಸ್ಕರ ಆಕಾಶವೇ ಮುಂತಾದ ತಮ್ಮ ತಮ್ಮ ಕಾರಣಗಳಿಂದ ಹುಟ್ಟಿರುವ ಕಿವಿಯೇ ಮುಂತಾದ ಇಂದ್ರಿಯಗಳು. (ಇವುಗಳ) ಬೇರೆಯ ಸ್ವರೂಪವನ್ನು ಎಂದರೆ ಅತ್ಯಂತ ವಿಶುದ್ಧವಾಗಿಯೂ ತಾನೊಂದೇ ಇರುವದಾಗಿಯೂ ಇರುವ ಜ್ಞಾನಮಾತ್ರವಾಗಿರುವ ಆತ್ಮಸ್ವರೂಪಕ್ಕಿಂತ (ಇವು) ಬೇರೆಯ ಸ್ವಭಾವದವುಗಳಾಗಿರುವವು- ಎಂಬುದನ್ನು. ಇದನ್ನೂ ಮತ್ತು ಎಚ್ಚರನಿದ್ರೆಗಳೆಂಬ ಅವಸ್ಥೆಗಳಿಂದ ಹೊರತೋರುವದು ಅಡಗಿಕೊಳ್ಳುವದು- ಇವೆರಡೂ ಆ ಇಂದ್ರಿಯಗಳಿಗೆ ಆಗುವದೇ ಹೊರತು ತನ್ನ ಆತ್ಮನಿಗಾಗುವದಿಲ್ಲ ಎಂಬುದನ್ನೂ ವಿಂಗಡಿಸಿ‡ ತಿಳಿದುಕೊಂಡರೆ, ಅಂಥ ಧೀರನು ಎಂದರೆ

---

* ಆತ್ಮದರ್ಶನವನ್ನು ಇಲ್ಲಿಯೇ ಮಾಡಿಕೊಳ್ಳಬೇಕೆಂದೂ ಗಂಧರ್ವಲೋಕದಲ್ಲಿಯೂ ಹಾಗೆ ಮಾಡಿಕೊಳ್ಳುವದಕ್ಕೆ ಆಗಲಾರದೆಂದೂ ಶಾಸ್ತ್ರವು ಹೇಳಿರುವದರಿಂದ ಮಿಕ್ಕ ಯಾವ ಪರಲೋಕಗಳಲ್ಲಿಯೂ ಆತ್ಮದರ್ಶನವು ಸ್ಪಷ್ಟವಾಗಿ ಆಗುವದೇ ಇಲ್ಲವೆಂದೂ ಆ ಲೋಕಗಳೆಲ್ಲ ಕೇವಲ ಭೋಗಭೂಮಿಗಳೆಂದೂ ಶಾಸ್ತ್ರವೇ ಹೇಳಿದಂತಾಯಿತು

† ಉಪಾಸನೆ.

‡ ಹೇಗೆ ತಿಳಿಯಬೇಕು? ಎಂದರೆ (೧) ಇಂದ್ರಿಯಗಳು ಅಶುದ್ಧವಾಗಿವೆ, ಅನೇಕ, ವಿಷಯಗಳಿಗೆ ಸಂಬಂಧಪಟ್ಟಿವೆ, ಆತ್ಮನು ಶುದ್ಧನು, ಏಕನು, ಅದ್ವಿತೀಯನು. (೨) ಇಂದ್ರಿಯಗಳ ಅರಿವು ಹುಟ್ಟುಹೊಂದುಗಳುಳ್ಳದ್ದು, ಅವುಗಳ ಇರವು ಎಚ್ಚರವನ್ನು ಅವಲಂಬಿಸಿರುವದು; ಆತ್ಮನ ಅರಿವು ಮಾರ್ಪಾಡುಗಳಿಲ್ಲದ್ದು, ನಿತ್ಯವಾದದ್ದು, ಮತ್ತೊಂದನ್ನು ಆಶ್ರಯಿಸದೆ ತಾನೆ ಇರುವಂಥಾದ್ದು.

ಬುದ್ಧಿವಂತನು ಶೋಕಿಸುವದಿಲ್ಲ.* ಏಕೆಂದರೆ ಯಾವಾಗಲೂ ಒಂದೇ ಸ್ವಭಾವವಾಗಿರುವ ಆತ್ಮನಿಗೆ ಹೆಚ್ಚು ಕಡಿಮೆ ಇರುವದಿಲ್ಲವಾಗಿ (ಆ ಆತ್ಮನ ವಿಷಯದಲ್ಲಿ) ಶೋಕಕ್ಕೆ ಕಾರಣವಿರುವದಿಲ್ಲ. ಆದ್ದರಿಂದ 'ಆತ್ಮವನ್ನು ತಿಳಿದವನು ಶೋಕವನ್ನು ಮೀರುತ್ತಾನೆ' (ಛಾ) ಎಂದು ಬೇರೊಂದು ಶ್ರುತಿಯಲ್ಲಿ ಹೇಳಿರುತ್ತದೆ.

ಯಾವ ಆತ್ಮನಿಗಿಂತ ಇಂದ್ರಿಯಗಳು ಬೇರೆ ಸ್ವರೂಪದವುಗಳೆಂದು ಹೇಳಿದೆಯೋ ಅವನನ್ನು ನಮ್ಮ ಹೊರಗೆ (ಇದ್ದಾನೆಂದು) ಅರಿಯತಕ್ಕದ್ದಲ್ಲ, ಏಕೆಂದರೆ ಅವನು ಎಲ್ಲಕ್ಕೂ ಒಳಗಿನ ಆತ್ಮನಾಗಿರುವನು. ಅದು ಹೇಗೆ? ಎಂದರೆ ಹೇಳುತ್ತಾನೆ:—

**ಇಂದ್ರಿಯಗಳಿಗಿಂತ ಮನಸ್ಸು ಉತ್ತಮ; ಮನಸ್ಸಿಗಿಂತ ಸತ್ತ್ವವು ಉತ್ತಮ; ಸತ್ತ್ವಕ್ಕಿಂತ ಮಹಾನ್ ಎಂಬ ಆತ್ಮವು ಹೆಚ್ಚು; ಮಹತ್ತಿಗಿಂತ ಅವ್ಯಕ್ತವು ಉತ್ತಮ. || ೭ ||**

**ಅವ್ಯಕ್ತಕ್ಕಿಂತ ವ್ಯಾಪಕನಾಗಿಯೂ ಅಲಿಂಗನಾಗಿಯೂ ಇರುವ ಪುರುಷನೇ ಉತ್ತಮ. ಈ (ಪುರುಷನನ್ನು) ಅರಿತರೆ ಪ್ರಾಣಿಯು ಮುಕ್ತನಾಗುವನು. ಅಮೃತತ್ವವನ್ನೂ ಹೊಂದುವನು. || ೮ ||**

"ಇಂದ್ರಿಯಗಳಿಗಿಂತ ಮನಸ್ಸು ಉತ್ತಮ" ಎಂದು ಮೊದಲಾಗಿರುವ (ಮಂತ್ರವಿದೆಯಷ್ಟೆ); ಅರ್ಥಗಳೂ ಇಂದ್ರಿಯಗಳ ಜಾತಿಯೇ ಆದ್ದರಿಂದ 'ಇಂದ್ರಿಯ' ಎಂಬ ಮಾತಿನಿಂದಲೇ (ಅವುಗಳನ್ನೂ) ಇಲ್ಲಿ ಗ್ರಹಿಸಬೇಕು. ಮಿಕ್ಕದ್ದು ಹಿಂದೆ† (೧-೩-೧೦ರಲ್ಲಿ) ಹೇಳಿದಂತೆ ತಿಳಿಯತಕ್ಕದ್ದು. ಸತ್ತ್ವವೆಂಬ ಮಾತಿಗೆ ಇಲ್ಲಿ ಬುದ್ಧಿ ಎಂದರ್ಥ. || ೭ ||

'ಅವ್ಯಕ್ತಕ್ಕಿಂತಲೂ ಪುರುಷನು ಹೆಚ್ಚು' ಇವನು ವ್ಯಾಪಕನು, ಏಕೆಂದರೆ (ಇವನು) ಆಕಾಶವೇ ಮುಂತಾದ‡ ಎಲ್ಲಾ ವ್ಯಾಪಕಗಳಿಗೂ ಕಾರಣನಾಗಿರು

---

ಹೀಗೆ ಆತ್ಮನನ್ನೂ ಇಂದ್ರಿಯಗಳನ್ನೂ ವಿಂಗಡಿಸಿ ಅರಿಯಬೇಕು. ಇಲ್ಲಿ ಇಂದ್ರಿಯ—ಎಂಬ ಶಬ್ದದಲ್ಲಿ ಅನಾತ್ಮವೆಲ್ಲ ಅಡಗಿರುವದು. ಅನಾತ್ಮವನ್ನೂ ಆತ್ಮವನ್ನೂ ಹೀಗೆಯೇ ವಿಂಗಡಿಸಿ ತಿಳಿದುಕೊಳ್ಳಬೇಕು.

* ಆತ್ಮವನ್ನು ಅನಾತ್ಮಸ್ವರೂಪದಿಂದ ವಿಂಗಡಿಸಿ ಯಥಾರ್ಥವಾಗಿ ಅರಿತರೆ ಪ್ರಯೋಜನವೇನು? ಎಂದರೆ ಶೋಕನಾಶವು. ಅನಿತ್ಯವಾದ ಅನಾತ್ಮದಲ್ಲಿ ಆತ್ಮಬುದ್ಧಿಯಿಂದ ಶೋಕವಾಗಿರುವದು, ಕೂಟಸ್ಥನಾದ ಅದ್ವಿತೀಯಾತ್ಮನ ಜ್ಞಾನದಿಂದ ಇದು ಹೋಗಿಬಿಡುವದು.

† ಆತ್ಮನು ಬಲು ಸೂಕ್ಷ್ಮನು ಎಂದು ಹೇಳುವದಕ್ಕೆ ಹಿಂದೆ (೧-೩-೧೦) ಈ ಮಂತ್ರವು ಬಂದಿತ್ತು, ಈಗ ಆತ್ಮನು ತಮ್ಮ ಒಳಗಿರುತ್ತಾನೆಂದು ಎಂದು ಹೇಳುವದಕ್ಕೆ ಬಂದಿದೆ

‡ ಆಕಾಶವು ಮಿಕ್ಕ ಎಲ್ಲವನ್ನೂ ವ್ಯಾಪಿಸಿರುವದು, ಆದ್ದರಿಂದ ಇದಕ್ಕೂ ಕಾರಣವಾಗಿರುವ ಆತ್ಮನು ಎಲ್ಲಕ್ಕೂ ಹೆಚ್ಚು ವ್ಯಾಪಕನಾದಂತಾಯಿತು ಆದ್ದರಿಂದ ಇವನೇ ನಿಜವಾಗಿ ವ್ಯಾಪಕನು. ಹೀಗೆಯೇ ಕಾಲವೇ ಮುಂತಾದದ್ದಕ್ಕಿಂತಲೂ ಆತ್ಮನು ವ್ಯಾಪಕನೆಂದು ತಿಳಿಯಬೇಕು ಇಲ್ಲಿ ವ್ಯಾಪಕ

ತ್ತಾನೆ. ಇವನು ಅಲಿಂಗನು– ಯಾವ ಗುರುತಿನಿಂದ ಅರಿಯುತ್ತಾರೋ ಆದು ಲಿಂಗವು, ಅಂಥ ಬುದ್ಧಿಯೇ ಮುಂತಾದ ಲಿಂಗವು ಇವನಿಗೆ ಇರುವದೇ ಇಲ್ಲ– ಎಂದರೆ ಯಾವ ಸಂಸಾರಧರ್ಮಗಳೂ ಇವನಿಗೆ ಇರುವದಿಲ್ಲ* ಎಂದಭಿಪ್ರಾಯ. ಯಾವ ಆತ್ಮನನ್ನು ಆಚಾರ್ಯರಿಂದಲೂ ಶಾಸ್ತ್ರದಿಂದಲೂ ತಿಳಿದುಕೊಂಡರೆ ಜೀವನು ಬದುಕಿರುವಾಗಲೇ ಅವಿದ್ಯೆಯೇ ಮುಂತಾದ **ಹೃದಯದ ಗ್ರಂಥಿಗಳಿಂದ**† ಬಿಡುಗಡೆಹೊಂದುವನೋ ಶರೀರವು ಬಿದ್ದುಹೋದ ಮೇಲೆಯೂ‡ ಅಮೃತತ್ವವನ್ನು ಹೊಂದುವನೋ, 'ಆ ಅಲಿಂಗನಾದ ಪುರುಷನು (ಆತ್ಮನು) ಅವ್ಯಕ್ತಕ್ಕಿಂತ ಹೆಚ್ಚಿನವನು'– ಎಂದು ಹಿಂದಕ್ಕೆ ಸಂಬಂಧಮಾಡಿಕೊಳ್ಳಬೇಕು. ॥ ೮ ॥

**ಈತನ ರೂಪವು ದರ್ಶನ(ಕ್ಷೇತ್ರ)ದಲ್ಲಿರುವದಿಲ್ಲ. ಯಾವನೂ ಈತನನ್ನು ಕಣ್ಣಿನಿಂದ ನೋಡಲಾರನು. ಮನಸ್ಸನ್ನಾಳುವ ಹೃದಯದಿಂದ ಮನನಮಾಡುವದರಿಂದ ಗೊತ್ತುಪಡಿಸಲ್ಪಟ್ಟವನಾಗಿ ( ತೋರಿಕೊಳ್ಳುತ್ತಾನೆ). ಯಾರು ಇದನ್ನು ಅರಿಯುವರೋ ಅವರು ಅಮೃತರಾಗುವರು.** ॥ ೯ ॥

ಹಾಗಾದರೆ ಯಾವ ಗುರುತೂ ಇಲ್ಲದ ಈ (ಆತ್ಮನನ್ನು) ಕಾಣುವದೆನ್ನುವದು ಹೇಗೆ? ಎಂದರೆ ಹೇಳುತ್ತಾನೆ. ಈ ಒಳಗಿರುವ ಆತ್ಮನ ರೂಪವು ದರ್ಶನಕ್ಕೆ ವಿಷಯವಾಗಿ ಇರುವದಿಲ್ಲ, ಆದ್ದರಿಂದ ಕಣ್ಣಿನಿಂದ– ಕಣ್ಣು ಎಂದು ಹೇಳಿದ್ದು ಉಪಲಕ್ಷಣವಾದ್ದರಿಂದ ಯಾವ ಇಂದ್ರಿಯದಿಂದಲೂ– ಯಾವನೂ ಈ ಪ್ರಕೃತವಾದ ಆತ್ಮನನ್ನು ನೋಡಲಾರನು, ಎಂದರೆ ತಿಳಿಯಲಾರನು.

ಹಾಗಾದರ ಈತನನ್ನು ಹೇಗೆ ತಿಳಿಯಬೇಕು ? ಎಂದರೆ ಹೇಳುತ್ತಾನೆ. ಹೃದಯದಿಂದ ಎಂದರೆ ಹೃದಯದಲ್ಲಿರುವ ಬುದ್ಧಿಯಿಂದ. ಮನೀಷಾ ಎಂದರೆ–

ಎಂಬ ಮಾತಿನ ಅಕ್ಷರಾರ್ಥವನ್ನು ಹಿಡಿಯಬೇಕಾದದ್ದಿಲ್ಲ. ಕಾಲ, ಆಕಾಶ ಮುಂತಾದುವುಗಳ ಕಟ್ಟಿಗೂ ಆತ್ಮನು ಸಿಕ್ಕಿಲ್ಲ, ಏಕೆಂದರೆ ಅವುಗಳೂ ಆತ್ಮನಲ್ಲಿಯೇ ಕಲ್ಪಿತವಾಗಿವೆ– ಎಂಬುದು ವಾಕ್ಯದ ಅರ್ಥ.

* 'ಯಾವದರಿಂದ ಅವನು ಅರಿಯುತ್ತಾನೊ' ಎಂದು ಹೇಳುವಾಗ ಇಂದ್ರಿಯಗಳು ಆತ್ಮನಿಗೆ ನಿಜವಾಗಿಯೂ ಗುರುತಾಗಿ ಇರಬಹುದೆಂದು ತೋರುತ್ತದೆ ಹಾಗೆ ಭಾವಿಸಬಾರದೆಂದು ಭಾವ.

† ಹೃದಯಕ್ಕೆ ಗಂಟುಹಾಕಿದಂತೆ ಅವಿದ್ಯೆಯೂ ಕಾಮ ಮುಂತಾದವುಗಳೂ ಸೇರಿಕೊಂಡಿರುತ್ತವೆ. ಇವುಗಳಿಂದ ಬಿಡುಗಡೆಯಾಗುವದೇ ಜೀವನ್ಮುಕ್ತಿಯು

‡ ಶರೀರವು ಬಿದ್ದ ಮೇಲೆ ಅಮೃತತ್ವವನ್ನು ಪಡೆಯುವನೆಂದರೆ ಮತ್ತೆ ಜನ್ಮವನ್ನು ಹೊಂದದೆ ಇರುವನು ಎಂದರ್ಥ. ಇಲ್ಲಿ ಎರಡು ಬಗೆಯ ಮುಕ್ತಿಗಳನ್ನು ಹೇಳಿಲ್ಲ ಈ ವಿಷಯದಲ್ಲಿ ಪೀಠಿಕೆಯನ್ನು ನೋಡಿ.

ಸಂಕಲ್ಪವೇ ಮುಂತಾದ * ರೂಪದ ಮನಸ್ಸನ್ನು ಬಿಗಿಯಲ್ಲಿಟ್ಟು ಆಳುವದರಿಂದ ಬುದ್ಧಿಗೆ ಮನೀಷ್ ಎಂದು ಹೆಸರು. (ಹೀಗೆ)- ಮನಸ್ಸನ್ನಾಳುತ್ತಾ † ಬೇರೆ ಬೇರೆ ಕಲ್ಪನೆಗಳನ್ನು ಮಾಡದ ಬುದ್ಧಿಯಿಂದ ಮನನಮಾಡಿ ಚೆನ್ನಾಗಿ ಅರಿಯುವದರಿಂದ ಗೊತ್ತುಪಡಿಸಲ್ಪಟ್ಟವನಾಗಿ, ಎಲ್ಲಾ ವಿಧದಿಂದಲೂ ನಿರ್ಣಯಿಸಲ್ಪಟ್ಟವನಾಗಿ, ಚೆನ್ನಾಗಿ ಬೆಳಗಿಸಲ್ಪಟ್ಟವನೆ ಎಂದರ್ಥ. '(ಆಗ) ಆತ್ಮನನ್ನು ಅರಿಯುವದಕ್ಕೆ ಆಗುವದು' ಎಂದು ವಾಕ್ಯದ ಶೇಷವು ಈ ಆತ್ಮನನ್ನು ಎಂದರೆ ಬ್ರಹ್ಮವನ್ನು ಯಾರು ತಿಳಿಯುವರೋ ಅವರು ಅಮೃತರಾಗುವರು.

## ಜ್ಞಾನಕ್ಕೆ ಸಾಧನವಾದ ಯೋಗ

**ಯಾವಾಗ ಐದು ಜ್ಞಾನಗಳೂ ಮನಸ್ಸಿನೊಡಗೂಡಿ ನಿಲುಗಡೆಗೆ ಬರುವವೋ, ಬುದ್ಧಿಯು ಅಲ್ಲಾಡುವದಿಲ್ಲವೋ ಅದನ್ನೇ ಪರಮಗತಿ ಎಂದು ಹೇಳುತ್ತಾರೆ. ॥ ೧೦ ॥**

ಆ (ಮನೀಷ್ ಎಂಬ) ಮನಸ್ಸನ್ನಾಳುವ ಬುದ್ಧಿಯು ಹೇಗೆ ಸಿಕ್ಕುತ್ತದೆ? ಎಂದರೆ ಹೇಳುತ್ತಾರೆ.

ಯಾವಾಗ ಎಂದರೆ ಯಾವ ಕಾಲದಲ್ಲಿ ತಮ್ಮ ತಮ್ಮ ವಿಷಯಗಳಿಂದ ಹಿಂತಿರುಗಿಸಿದ ಐದು ಜ್ಞಾನಗಳೂ- ಶ್ರೋತ್ರವೇ ಮುಂತಾದ ಜ್ಞಾನದ ಇಂದ್ರಿಯಗಳು ಜ್ಞಾನಕ್ಕೋಸ್ಕರ ಉಪಯೋಗವಾಗುವದರಿಂದ 'ಜ್ಞಾನಗಳು' ಎಂದು ಕರೆಯಲ್ಪಡುತ್ತವೆ. ಅವು- ಮನಸ್ಸಿನೊಡನೆ, ಎಂದರೆ ಯಾವ ಅಂತಃಕರಣ

---

* ಸಂಕಲ್ಪವೆಂದರೆ ಪ್ರವೃತ್ತಿಗೆ ಬೇಕಾದ ಮೊದಲನೆಯ ಕಲ್ಪನೆ, ಮುಂತಾದದ್ದು ಎನ್ನುವದರಿಂದ ವಿಕಲ್ಪವನ್ನೂ ತೆಗೆದುಕೊಳ್ಳಬೇಕು ವಿಕಲ್ಪವೆಂದರೆ ಇಂಥಿಂಥದ್ದೆಂದು ತಿಳಿಯುವದು ಸಂಕಲ್ಪಕ್ಕೂ ವಿಕಲ್ಪಕ್ಕೂ ಬೇರೆ ಬೇರೆ ನರಗಳು ಇರುವವೆಂದು ಈಗಿನ ಮನಃಶಾಸ್ತ್ರಜ್ಞರು ಹೇಳುತ್ತಾರೆ, ಆದರೂ ಇವೆರಡೂ ನಮ್ಮೊಳಗಿರುವ ಒಂದೇ ಕರಣದ ಕಾರ್ಯಗಳೆಂಬುದು ಶಾಸ್ತ್ರದ ಅಂಗೀಕಾರವಾಗಿದೆ.

† ಹೊರಗಿನ ಇಂದ್ರಿಯಗಳನ್ನು ತಡೆದುಕೊಂಡಿರುವಾಗಲೂ ಮನಸ್ಸು ವಿಷಯಗಳನ್ನು ಕಲ್ಪಿಸಿಕೊಳ್ಳುತ್ತಿರುವದು. ಆಗ ಮುಮುಕ್ಷುವಿನ ಬುದ್ಧಿಯು ಅದನ್ನು ತಡೆದು --"ಎಲೈ ಮನಸ್ಸೆ, ಏತಕ್ಕೆ ಪಿಶಾಚಿಯಂತೆ ನೀನು ಓಡಾಡುತ್ತಿದ್ದೀಯೆ ? ನಿನ್ನ ಪ್ರಯೋಜನಕ್ಕಂತೂ ಅಲ್ಲ, ಏಕೆಂದರೆ ನೀನು ಜಡವಾಗಿರುವೆಯಾದ್ದರಿಂದ ನಿನಗೆ ಪ್ರಯೋಜನವೇನೂ ಬೇಕಿಲ್ಲ, ವಿಷಯಗಳು ನಾಶವಾಗತಕ್ಕಂಥವಾದ್ದರಿಂದ ಅವುಗಳಿಂದ ಪ್ರಯೋಜನವಾಗುವದೆಂಬುದೂ ಹೊಂದುವ ಮಾತಲ್ಲ. ಚೇತನಕ್ಕಾಗಿ ಓಡಾಡುತ್ತೇನೆಂಬುದೂ ಸರಿಯಲ್ಲ, ಏಕೆಂದರೆ ಚೇತನವು ಅಸಂಗವಾಗಿ ಪರಮಾನಂದಸ್ವಭಾವವಾಗಿಯೇ ಇರುವದು'' ಎಂದು ಬುದ್ಧಿಹೇಳಿ ಬಿಗಿಹಿಡಿಯುತ್ತದೆ. ಆದ್ದರಿಂದ ಇಂಥ ಬುದ್ಧಿಗೆ ಮನೀಷ್ ಮನಸ್ಸನ್ನು ಆಳತಕ್ಕದ್ದು ಎಂದು ಹೆಸರು (ಗೋ॥)

ದೊಡನೆ ಸೇರಿಯೇ ಇರುವವೋ ಅಂಥ ಅಂತಃಕರಣವನ್ನು ಸಂಕಲ್ಪವೇ ಮುಂತಾದದ್ದಿಲ್ಲದಂತೆ ತಿರುಗಿಸಿ– ಆತ್ಮನಲ್ಲಿಯೇ ಯಾವಾಗ ನಿಲ್ಲುವವೋ ಮತ್ತು ನಿಶ್ಚಯಸ್ವರೂಪವಾದ ಬುದ್ಧಿಯೂ (ಯಾವಾಗ) ಅಲ್ಲಾಡುವದಿಲ್ಲವೋ ಎಂದರೆ ತನ್ನ ವ್ಯಾಪಾರಗಳಲ್ಲಿ ಆಸಕ್ತವಾಗದೆ ಇರುವದೋ * ಅದನ್ನೇ ಉತ್ತಮಗತಿಯೆನ್ನುತ್ತಾರೆ.

**ಸ್ಥಿರವಾಗಿ ಇಂದ್ರಿಯಗಳನ್ನು ಧರಿಸುವ್ಯದೆಂಬ ಇದನ್ನೇ ಯೋಗ ಎನ್ನುತ್ತಾರೆ; ಆಗ ಅಪ್ರಮತ್ತನಾಗಿರುತ್ತಾನೆ; ಏಕೆಂದರೆ ಯೋಗವು ಹುಟ್ಟುಹೊಂದುಗಳುಳ್ಳದ್ದು. || ೧೧ ||**

ಹೀಗೆ ಇರುವ ಈ ಅವಸ್ಥೆಯನ್ನು–(ನಿಜವಾಗಿ ನೋಡಿದರೆ) ಅದು ವಿಯೋಗವಾಗಿದ್ದರೂ–† 'ಯೋಗ'ವೆಂದು ಕರೆಯುತ್ತಾರೆ. ಯೋಗಿಯಾದವನಿಗೆ ಎಲ್ಲಾ ಅನರ್ಥಸಂಬಂಧವೂ ಹೋಗುವ ಅವಸ್ಥೆಯೇ ಇದು, ಏಕೆಂದರೆ ಈ ಅವಸ್ಥೆಯಲ್ಲಿಯೇ ಅವಿದ್ಯೆಯಿಂದಾದ ಅರೋಪಣೆಯಿಂದ ಬಿಡಲ್ಪಟ್ಟು ತನ್ನ ರೂಪದಲ್ಲಿಯೇ‡ ಆತ್ಮನು ಇರುತ್ತಾನೆ. ಸ್ಥಿರವಾದ ಇಂದ್ರಿಯಧಾರಣೆಯೆಂದರೆ ಹೊರಗಿನ ಮತ್ತು ಒಳಗಿನ ಇಂದ್ರಿಯಗಳನ್ನು ಸ್ಥಿರವಾಗಿ ಅಲ್ಲಾಡದಂತೆ ಬಿಗಿಹಿಡಿಯುವದೇ (ಯೋಗವು) ಎಂದರ್ಥ.

ಸಮಾಧಾನವಾಗಿರುವ ವಿಷಯದಲ್ಲಿ ಅಪ್ರಮತ್ತನಾಗಿ ಎಂದರೆ ಎಚ್ಚರತಪ್ಪಿದವನಾಗದೆ, ಸಮಾಧಾನದಿಂದಿರುವ ವಿಷಯದಲ್ಲಿ ಯಾವಾಗಲೂ ಯತ್ನಮಾಡುತ್ತಾ ಆಗ ಇರುತ್ತಾನೆ. ಯಾವಾಗ ಯೋಗದಲ್ಲಿ ಮನಸ್ಸುಹಾಕುತ್ತಾನೋ ಆ ಕಾಲದಲ್ಲಿ ಅಪ್ರಮತ್ತನಾಗಿರುತ್ತಾನೆ- ಎಂದು (ವಾಕ್ಯದ) ಸಾಮರ್ಥ್ಯದಿಂದ ಗೊತ್ತುಮಾಡಬೇಕಾಗಿದೆ; ಏಕೆಂದರೆ ಬುದ್ಧಿಯೇ ಮುಂತಾದವು ಅಲ್ಲಾಡದೆ ಇರುವ (ಸಮಾಧಿಯ ಕಾಲದಲ್ಲಿ) ಎಚ್ಚರತಪ್ಪುವ ಸಂಭವವೇ ಇರುವದಿಲ್ಲ. ಆದ್ದರಿಂದ ಬುದ್ಧಿಯೇ ಮುಂತಾದವುಗಳ ವ್ಯಾಪಾರವು ನಿಲ್ಲುವ ಮುಂಚೆಯೇ ಎಚ್ಚರತಪ್ಪದೆ ಇರಬೇಕು ಎಂದು ವಿಧಿಸಿರುತ್ತದೆ ಅಥವಾ ಯಾವಾಗ ಇಂದ್ರಿಯಗಳನ್ನು ಸ್ಥಿರವಾಗಿ ಧರಿಸಿರುತ್ತಾನೋ ಆಗಲೇ ಪ್ರಮಾದವಿಲ್ಲದೆ ಇರುವ

* ಗೌಡಪಾದಕಾರಿಕೆಯನ್ನು (೩-೪೦ರಿಂದ ೪೭) ನೋಡಿ

† ಗೀತೆಯ (೬-೨೩)ರ ಸೂಚನೆ

‡ ಅದ್ವಿತೀಯರೂಪದಿಂದ, ಸಮಾಧಿಯಲ್ಲಿ ಅವಿದ್ಯೆಯೆಂಬ ಶಕ್ತಿಯಿರುವದಿಲ್ಲವೆಂದು ಈಗಿನವರು ಹೇಳುವ ಅಭಿಪ್ರಾಯವಲ್ಲ. ಪೀಠಿಕೆಯನ್ನು ನೋಡಿ. ಅನರ್ಥಗಳ ವಿಯೋಗವಿರುವ ಸ್ಥಿತಿಯನ್ನು ಯೋಗವೆಂದು ಕರೆದಿರುವದು ವಿಪರೀತಲಕ್ಷಣೆಯಿಂದ, ಅಮಂಗಲವಾದ ವಾರವನ್ನು ಮಂಗಲವೆಂದು ಕರೆದಿರುವಂತೆಯೇ ಇದನ್ನು ಅರಿಯಬೇಕು. ಗೀತೆಯ (೬—೨೩ನ್ನು) ನೋಡಿ.

ದೆಂಬುದು ಅಡ್ಡಿಯಿಲ್ಲದೆ * ಇರುವದು ಎಂದು ತಿಳಿಸುವದಕ್ಕೆ 'ಆಗ ಅಪ್ರಮತ್ತನಾಗಿರುತ್ತಾನೆ' ಎಂದು ಹೇಳಿದೆ. (ಎಂದಾದರೂ ಈ ವಾಕ್ಯಕ್ಕೆ ಅರ್ಥ ಮಾಡಬಹುದು).

ಒಂದನೆಯ ವ್ಯಾಖ್ಯಾನದಲ್ಲಿ ಎಚ್ಚರಿಕೆಯಿಂದಿರಬೇಕು- ಎಂದು ವಿಧಿಸಿದೆಯಷ್ಟೆ. ಇದೇಕೆ? ಎಂದರೆ ಯೋಗವೆಂಬುದು ಹುಟ್ಟುಹೋಗುಗಳುಳ್ಳದ್ದು, ಹುಟ್ಟಿ ನಾಶವಾಗುವ ಸ್ವಭಾವವುಳ್ಳದ್ದು ಎಂದರ್ಥ. ಆದ್ದರಿಂದ (ತಪ್ಪಿ) ಹೋಗದೆ † ಇರುವದಕ್ಕಾಗಿ ಎಚ್ಚರದಪ್ಪದೆ ಇರಬೇಕೆಂದು ಅರ್ಥ.

## ಬ್ರಹ್ಮಜ್ಞಾನವೂ ಆದರ ಫಲವೂ

**ಮಾತಿನಿಂದಾಗಲಿ, ಮನಸ್ಸಿನಿಂದಾಗಲಿ, ಕಣ್ಣಿನಿಂದಾಗಲಿ, ಹೊಂದುವದಕ್ಕೆ ಆಗುವದಿಲ್ಲ. 'ಇದಾನೆ' ಎಂದು ಹೇಳುವವನನ್ನು ಬಿಟ್ಟು ಬೇರೆ ಅದು ಹೇಗೆ ಕಂಡುಬಂದೀತು? ‖ ೧೨ ‖**

(ಆಕ್ಷೇಪ) ಬ್ರಹ್ಮವು ಬುದ್ಧಿಯೇ ಮುಂತಾದವುಗಳ ವ್ಯಾಪಾರಕ್ಕೆ ವಿಷಯವಾಗಿದ್ದರೆ ಅದು ಇಂಥದ್ದು ಎಂದು ಗ್ರಹಿಸಬಹುದಾಗಿತ್ತು. ಬುದ್ಧಿ ಮುಂತಾದವುಗಳು ಕೆಲಸಮಾಡದೆ ಇರುವಾಗ ತಿಳಿಯುವದಕ್ಕೆ ಕರಣವೇ ಇಲ್ಲದ್ದರಿಂದ, (ಯಾವದಕ್ಕೂ) ಕಾಣದೆ ಇರುವ ಬ್ರಹ್ಮವು ಇಲ್ಲವೇ ಇಲ್ಲ(ವೆನ್ನಬೇಕು.) ಯಾವದು ಕರಣಗಳಿಗೆ ಗೋಚರವಾಗುವದೋ ಅದು ಇದೆಯೆಂದೂ ಇದಕ್ಕೆ ವಿರುದ್ಧವಾಗಿ (ಕರಣಗಳಿಗೆ ಗೋಚರವಾಗದೆ) ಇರುವದು ಇಲ್ಲವೆಂದೂ ಲೋಕದಲ್ಲಿ ಪ್ರಸಿದ್ಧವಾಗಿರುತ್ತದೆ. ಆದ್ದರಿಂದ ಯೋಗವು ವ್ಯರ್ಥವು; ಅಥವಾ ಬ್ರಹ್ಮವು ಕಾಣದೆ ಇರುವದರಿಂದ ಅದು ಇಲ್ಲವೆಂದೇ ‡ ತಿಳಿಯಬೇಕು.

ಹೀಗೆಂದು ಒದಗಿದ (ಪೂರ್ವಪಕ್ಷಕ್ಕೆ ಇಲ್ಲಿ) ಉತ್ತರವನ್ನು ಹೇಳಿರುತ್ತದೆ. ನಿಜ, ಮಾತಿನಿಂದಲಾಗಲಿ, ಮನಸ್ಸಿನಿಂದಾಗಲಿ, ಕಣ್ಣಿನಿಂದಾಗಲಿ, ಮಿಕ್ಕ ಇಂದ್ರಿ

---

* ಸಮಾಧಿಯು ಬಂದಾಗ ಮಾಡಬೇಕಾದದ್ದೇನೂ ಇರುವದಿಲ್ಲವಾದ್ದರಿಂದ ಆಗ ಪ್ರಮಾದವಾಗಲಿ ಅಪ್ರಮಾದವಾಗಲಿ ಇರಲಾರದು ಆದ್ದರಿಂದ ಸಮಾಧಿಯುಂಟಾಗುವ ಪೂರ್ವದಲ್ಲಿ ಎಚ್ಚರದಪ್ಪದೆ ನೋಡಿಕೊಳ್ಳುತ್ತಿರಬೇಕೆಂದು ವಿಧಿಸಿದೆ ಎಂದು ಹಿಂದೆ ಹೇಳಿತ್ತು. ಇದು ವಿಧಿಯಲ್ಲ. ಸಮಾಧಿಯಿರುವಾಗ ಯಾವ ಪ್ರಮಾದವೂ ಇಲ್ಲವೇ ಹೊರತು ಮಿಕ್ಕ ಕಾಲದಲ್ಲಿ ಪ್ರಮಾದಕ್ಕೆ ಅವಕಾಶವಿದ್ದೇ ಇದೆಯೆಂಬುವನ್ನು ತಿಳಿಸುವದಕ್ಕೆ ಒಂದ ವಾಕ್ಯವಿದು ಎಂದು ಈಗ ಹೇಳುತ್ತಾರೆ

† ಯೋಗವು ಹೋಗಿ ಬೇಗ ಹೊರಮುಖವಾಗಿ ಬಿಡಬಹುದಾದ್ದರಿಂದ ಎಚ್ಚರದಿಂದ ಅಭ್ಯಾಸಮಾಡುತ್ತಿರಬೇಕು— ಎಂದು ಅಭಿಪ್ರಾಯ.

‡ ಇದು ಚಾರ್ವಾಕರ ಮತ್ತು ಬೌದ್ಧರ ಪೂರ್ವಪಕ್ಷ.

ಯುಗಳಿಂದಲಾಗಲಿ* (ಇದನ್ನು) ಪಡೆಯುವದಕ್ಕೆ ಆಗುವದಿಲ್ಲ, ಎಂದರ್ಥ.† ಹೀಗೆ ಯಾವ ವಿಶೇಷವೂ ಇಲ್ಲದೆ ಇದ್ದರೂ ಜಗತ್ತಿಗೆ ಮೂಲವೆಂದು ಗೊತ್ತಾಗಿರುವದರಿಂದ ಇದ್ದೇ ಇರುವದು, ಏಕೆಂದರೆ ಕಾರ್ಯವು ನಷ್ಟವಾಯಿತು (ಎಂದು ಕಲ್ಪಿಸುವಾಗ ಅದು) 'ಇದೆ' ಎಂಬ ವಸ್ತುವಿನಲ್ಲಿಯೇ ನಿಲ್ಲುವದು. ಆದ್ದರಿಂದ, ಈ ಕಾರ್ಯವಾದ (ಜಗತ್ತು) ಒಂದಕ್ಕಿಂತ ಒಂದು ಸೂಕ್ಷ್ಮವಾಗಿರುವ ಪರಂಪರೆಯಿಂದ‡ ಅನುಸರಿಸಲ್ಪಟ್ಟಿರುವದರಿಂದ ಇದೆ ಎಂಬ ಬುದ್ಧಿ [ಸದ್ಬುದ್ಧಿ] ಯಲ್ಲಿಯೇ ಕೊನೆಗೆ ನಿಲ್ಲಬೇಕೆಂದು ನಿಶ್ಚಯವಾಗುತ್ತದೆ. ವಿಷಯವು ನಾಶವಾಗಿ ಬುದ್ಧಿಯು ನಾಶವಾಗುವಾಗಲೂ 'ಇದೆ' ಎಂಬ ಅರಿವಿನಿಂದ ಕೂಡಿಕೊಂಡೇ§ ನಾಶವಾಗುತ್ತದೆ. ಬುದ್ಧಿಯೇ ನಮಗೆ ಇರುವದು, ಇಲ್ಲದ್ದು– ಎಂಬೆರಡರ ದಿಟವನ್ನು ನಿಶ್ಚಯಿಸುವದಕ್ಕೆ ಪ್ರಮಾಣವಾಗುತ್ತದೆ. ಜಗತ್ತಿಗೆ ಮೂಲವೇ ಇಲ್ಲದಿದ್ದರೆ ಈ ಕಾರ್ಯವು ಅಸತ್ತಿನಿಂದಲೇ ಆಗಿರುವದರಿಂದ ಇದು 'ಇರುವದಿಲ್ಲ'ವೆಂದೇ ತೋರಬೇಕಾಗಿತ್ತು;|| ಆದರೆ ಹಾಗಿಲ್ಲ, 'ಇದೆ' 'ಇದೆ'– ಎಂದೇ ತೋರುತ್ತಿರುವದು. ಮಣ್ಣು ಮುಂತಾದವುಗಳ ಕಾರ್ಯವಾದ ಗಡಿಗೆ ಮುಂತಾದದ್ದು ಮಣ್ಣಿನಿಂದಲೇ ಕೂಡಿಕೊಂಡಿರುವಂತೆ (ಇದು ಸದ್ವಸ್ತುವಿನ ಕಾರ್ಯವಾದ್ದರಿಂದಲೇ 'ಇದೆ', 'ಇದೆ'- ಎಂದು ಇರುವಿಕೆಯಿಂದ ಕೂಡಿಕೊಂಡೇ ತೋರುತ್ತದೆ). ಆದ್ದರಿಂದ ಜಗತ್ತಿಗೆ ಮೂಲವಾದ ಆತ್ಮನು ಇದ್ದಾನೆಂದೇ ತಿಳಿಯಬೇಕು. ಏಕೆಂದರೆ ಇದೆ ಎಂದು ಹೇಳುವ ಎಂದರೆ ಆಗಮದ ಅರ್ಥವನ್ನು ಅನುಸರಿಸಿರುವ ಶ್ರದ್ಧೆಯುಳ್ಳವನನ್ನು ಬಿಟ್ಟು ಬೇರೆಯಾದ ನಾಸ್ತಿಕವಾದಿಯಲ್ಲಿ 'ಜಗತ್ತಿಗೆ ಮೂಲವಾದ ಆತ್ಮನಿಲ್ಲ, ಈ ಕಾರ್ಯವು ಯಾವದರಿಂದಲೂ ಕೂಡಿಕೊಂಡಿಲ್ಲ, ಕೊನೆಗೆ ಅಭಾವವೇ ನಿಲ್ಲುವಂತೆ ನಾಶವಾಗುವದು' ಎಂದು ತಿಳಿದಿರುವ, ತಪ್ಪು ತಿಳಿವಿನ ಮನುಷ್ಯನಲ್ಲಿ, ಆ ಬ್ರಹ್ಮವು ಹೇಗೆ ಸರಿಯಾಗಿ ಕಂಡೀತು ? ಹೇಗೂ ಕಾಣುವದಿಲ್ಲ ಎಂದರ್ಥ.**

---

* ವಾಕ್ಕು, ಮನಸ್ಸು –ಎಂದು ಹೇಳಿರುವದನ್ನು ಎಲ್ಲಾ ಇಂದ್ರಿಯಗಳಿಗೂ ಉಪಲಕ್ಷಣವಾಗಿ ತೆಗೆದುಕೊಳ್ಳಬೇಕೆಂದು ಭಾವ. † ಈ ಮಾತು ಭಾಷ್ಯಕ್ಕೆ ಅವಶ್ಯವಿರುವದಿಲ್ಲ.

‡ ದೇಹ, ಇಂದ್ರಿಯ, ಮನಸ್ಸು, ಬುದ್ಧಿ- ಮುಂತಾದ ಸೂಕ್ಷ್ಮಪರಂಪರೆ

§ ಗಡಿಗೆ ಹೋಯಿತು, ಗಡಿಗೆಯ ತುಂಡು ಉಳಿಯಿತು- ಎಂಬಂತೆ ಒಂದು ನಾಶವಾಯಿತು ಎಂಬಲ್ಲಿ ಬೇರೆ ಏನಾದರೂ ಉಳಿದೇ ಉಳಿಯುವದು.

|| ಕಾರ್ಯವು ತನ್ನ ಕಾರಣವನ್ನನುಸರಿಸಬೇಕಾದ್ದರಿಂದ ಅಸತ್ತಿನ ಕಾರ್ಯವು ಅಸತ್ತೇ ಆಗಿರಬೇಕಾಗಿತ್ತು, 'ಇದೆ' ಎಂದು ತೋರಬಾರದಿತ್ತು ಎಂದು ಭಾವ. ಛಾ. ೬-೨-೨ ನೋಡಿ

** 'ಇದೆ' ಎಂದು ತೋರುವದಕ್ಕೆ ಆಧಾರವೇನೊ ಇರಬೇಕೆಂದು ನಂಬುವ ಪರೋಕ್ಷಜ್ಞಾನವೇ ಇಂಥದ್ದೆಂದು ಸರಿಯಾಗಿ ಅರಿಯುವ ಸಾಕ್ಷಿಜ್ಞಾನಕ್ಕೆ ಕಾರಣ, ಇಲ್ಲವೆಂದು ನಂಬುವಾತನಿಗೆ ಅದು ಗೋಚರವಾಗುವ ಸಂಭವವೇ ಇಲ್ಲ- ಎಂದು ಭಾವ.

**ಇದಾನೆಂದೇ ಅರಿಯಬೇಕು, ತತ್ತ್ವಭಾವದಿಂದಲೂ (ಅರಿಯಬೇಕು); ಇವೆರಡರಲ್ಲಿ ಇದಾನೆ ಎಂದು ಅರಿತವನಿಗೆ ತತ್ತ್ವಭಾವವು ಪ್ರಸನ್ನವಾಗುವದು.** || ೧೩ ||

ಆದ್ದರಿಂದ ಅಸದ್ವಾದಿಯ **ಆಸುರಪಕ್ಷವನ್ನು** * ಬಿಟ್ಟು, (ಹಿಂದಿನ ಮಂತ್ರದಲ್ಲಿ ಹೇಳಿದಂತೆ) ಸತ್ಕಾರ್ಯವುಳ್ಳಾತನಾಗಿಯೂ ಬುದ್ಧಿಯೇ † ಮುಂತಾದ ಉಪಾಧಿಗಳುಳ್ಳವನಾಗಿಯೂ ಇರುವದರಿಂದ ಆತ್ಮನು ಇದಾನೆ ಎಂದೇ ಅರಿಯಬೇಕು. ಈ ಉಪಾಧಿಗಳಿಲ್ಲದ ಆತ್ಮನು ಮಾರ್ಪಾಡುಗಳಿಲ್ಲದವನೆಂದೂ, (ಗಡಿಗೆ ಮುಂತಾದ) 'ವಿಕಾರವೆಂಬುದು ಮಾತುಗಳಿಂದಾದ ಬರಿಯ ಹೆಸರೇ, ಮಣ್ಣೆಂಬುದೇ ಸತ್ಯವು' (ಛಾ) ಎಂಬ ಶ್ರುತಿಯು ಹೇಳುವಂತೆ ಕಾರಣವನ್ನು ಬಿಟ್ಟು ಕಾರ್ಯವೆಂಬುದೇ ಇಲ್ಲವೆಂದೂ ಯಾವಾಗ ಅರಿಯುವೆವೋ, ಆಗ (ಅದೇ) ಉಪಾಧಿಗಳಿಲ್ಲದವನಾಗಿಯೂ ತಿಳಿಯುವದಕ್ಕೆ ಯಾವ ಗುರುತೂ ಇಲ್ಲದವನಾಗಿಯೂ 'ಇದೆ', 'ಇಲ್ಲ'— ಮುಂತಾದ ಯಾವ ಪ್ರತ್ಯಯಕ್ಕೂ ಗೋಚರವಾಗದವನಾಗಿಯೂ ಇರುವ ಈ ಆತ್ಮನ **ತತ್ತ್ವಭಾವ**ವಾಗಿರುವದು.‡ ಆ ನಿಜವಾದ ಸ್ವರೂಪದಿಂದಲೂ ಆತ್ಮನನ್ನು 'ಅರಿಯಬೇಕು' ಎಂದು ಸೇರಿಸಿಕೊಳ್ಳಬೇಕು.

ಅದರಲ್ಲಿ ಉಪಾಧಿಗಳಿಂದ ಕೂಡಿದ ಅಸ್ತಿಭಾವ, ಉಪಾಧಿಗಳಿಲ್ಲದ ತತ್ತ್ವಭಾವ, ಈ ಎರಡರಲ್ಲಿ— 'ಉಭಯೋಃ' ಎಂಬಲ್ಲಿ ಷಷ್ಠಿಯು ಎರಡರೊಳಗೆ ಇಂಥದ್ದೊಂದೆಂದು ಗೊತ್ತುಮಾಡುವದಕ್ಕಾಗಿ ಬಂದಿದೆ. ಆದ್ದರಿಂದ ಈ ಎರಡು ವಿಧಗಳಲ್ಲಿ)— ಮೊದಲು ಇದಾನೆ ಎಂದು ತಿಳಿದರೆ ಸತ್ಕಾರ್ಯವೆಂಬ ಉಪಾಧಿಯಿಂದ ಆತ್ಮನನ್ನು 'ಇದಾನೆ' ಎಂಬ ಅರಿವಿನಿಂದ ಕಂಡುಕೊಂಡರೆ ಎಂದರ್ಥ. ಆಮೇಲೆ ಎಲ್ಲಾ ಉಪಾಧಿಗಳೂ ನಾಶವಾದದ್ದಾಗಿಯೂ ತಿಳಿದದ್ದು ತಿಳಿಯದ್ದು— ಇವೆರಡಕ್ಕೂ ಬೇರೆಯಾದದ್ದಾಗಿಯೂ, ಅದ್ವಯಸ್ವಭಾವವಾಗಿಯೂ, "ಇದಲ್ಲ ಇದಲ್ಲ, ಸ್ಥೂಲವಲ್ಲ, ಅಣುವಲ್ಲ," (ಬೃ) "ಅದೃಶ್ಯವಾದ ಅನಾತ್ಮವಾದ ಅನಿಲಯನವಾದ" (ತೈ) ಮುಂತಾದ ಶ್ರುತಿಗಳಲ್ಲಿ ತಿಳಿಸಿರುವದಾಗಿಯೂ ಇರುವ ಆತ್ಮನ ತತ್ತ್ವಭಾವವು ಪ್ರಸನ್ನವಾಗುವದು ; ಎಂದರೆ ಮೊದಲು 'ಇದೆ' ಎಂದು ತಿಳಿದವನಿಗೆ (ಅದು) ತಾನೇ ತೋರಿಕೊಳ್ಳುವದಕ್ಕೆ ಅಭಿಮುಖವಾಗುವದು ಎಂದು ತಾತ್ಪರ್ಯ.

* ಗೀತೆಯ (೧೬—೮) ಸೂಚನೆ.

† ವ್ಯವಹಾರದಲ್ಲಿ ತೋರುವ ಬುದ್ಧಿಯು ಮುಂತಾದವು. 'ಇದೆ' 'ಇದೆ'— ಎಂಬ ಬುದ್ಧಿಗೆ ಗೋಚರವಾಗುವದರಿಂದ ಈ ಉಪಾಧಿಗಳಲ್ಲೆಲ್ಲ ಯಾವದೋ ಒಂದು ತೋರುತ್ತಿರುವದು ಎಂಬುದೆ ಅಸ್ತಿಭಾವ

‡ ಯಾವ ಉಪಾಧಿಗಳಿಲ್ಲದಿದ್ದರೂ ಸುಷುಪ್ತಿ, ಸಮಾಧಿ— ಮುಂತಾದ ಅವಸ್ಥೆಗಳಲ್ಲಿ ಆತ್ಮನು ತೋರುವನು : ಅದೇ ಅವನ ನಿಜವಾದ ಸ್ವರೂಪವೆಂದು ತಿಳಿಯುವದೇ ತತ್ತ್ವಭಾವ

**ಯಾವಾಗ ಈತನ ಹೃದಯದಲ್ಲಿ ಆಶ್ರಯಿಸಿಕೊಂಡಿದ್ದ ಕಾಮಗಳೆಲ್ಲ ಬಿಡುಗಡೆಯಾಗುವವೋ, ಆಗ ಮರ್ತ್ಯನಾದವನು ಅಮೃತನಾಗುತ್ತಾನೆ. ಇಲ್ಲಿಯೇ ಬ್ರಹ್ಮವನ್ನು ಪಡೆಯುತ್ತಾನೆ. || ೧೪ ||**

ಹೀಗೆ ಪರಮಾರ್ಥವನ್ನು ಕಂಡ ಈ ಜ್ಞಾನಿಗೆ ಜ್ಞಾನವಾಗುವದಕ್ಕೆ ಮೊದಲು ಹೃದಯವನ್ನು ಆಶ್ರಯಿಸಿಕೊಂಡಿದ್ದ ಕಾಮಗಳು ಎಂದರೆ ಬುದ್ಧಿಯಲ್ಲಿದ್ದ ಕಾಮಗಳೆಲ್ಲ–ಬುದ್ಧಿಯೇ ಕಾಮಗಳಿಗೆ ಆಶ್ರಯವೇ ಹೊರತು ಆತ್ಮನಲ್ಲ.* "ಕಾಮ, ಸಂಕಲ್ಪ– ಮುಂತಾದ(ವೆಲ್ಲ ಬುದ್ಧಿಯೇ)" (ಬೃ) ಎಂದು ಹೇಳುವ ಬೇರೊಂದು ಶ್ರುತಿಯೂ ಇದಕ್ಕೆ ಪ್ರಮಾಣವು; (ಈ ಕಾಮಗಳು)– ಯಾವಾಗ ಬೇಡತಕ್ಕ ಮತ್ತೊಂದು ಪದಾರ್ಥವೇ ಇಲ್ಲದ್ದರಿಂದ ಬಿಡುಗಡೆಯಾಗುವವೋ ಎಂದರೆ ನಾಶವಾಗಿಬಿಡುವವೋ, ಆಗ ಜ್ಞಾನಕ್ಕಿಂತ ಮೊದಲು ಮರ್ತ್ಯನಾಗಿದ್ದವನು ಜ್ಞಾನವಾದ ಮೇಲೆ ಅವಿದ್ಯೆ, ಕಾಮ, ಕರ್ಮ– ಎಂಬ ಮೃತ್ಯುವು ನಾಶವಾದದ್ದರಿಂದ ಅಮೃತನಾಗುವನು ಎಂದರ್ಥ. (ದೇಹವನ್ನು ಬಿಟ್ಟು) ಹೊರಟು ಹೋಗಬೇಕಾದ್ದಕ್ಕೆ ಕಾರಣವಾದ ಮೃತ್ಯುವೇ ನಾಶವಾಗಿರುವದರಿಂದ (ದೇಹವನ್ನು ಬಿಟ್ಟು) ಹೋಗುವದೆಂಬುದು ಇವನಿಗೆ ಹೊಂದುವದಿಲ್ಲ; ಆದ್ದರಿಂದ ದೀಪವು† ಆರಿಹೋದಂತೆ ಎಲ್ಲಾ ಬಂಧಗಳೂ ಶಾಂತಿಯಾಗಿ ಇಲ್ಲಿಯೇ ಬ್ರಹ್ಮವನ್ನು ಹೊಂದುತ್ತಾನೆ, ಎಂದರೆ ಬ್ರಹ್ಮವೇ ಆಗುತ್ತಾನೆ ‡ ಎಂದರ್ಥ.

**ಯಾವಾಗ ಆತನ ಹೃದಯದ ಗ್ರಂಥಿಗಳೆಲ್ಲ ಇಲ್ಲಿಯೇ ಬಿಚ್ಚಿಕೊಳ್ಳುವವೋ ಆಗ ಮರ್ತ್ಯನು ಅಮೃತನಾಗುವನು. ಇಷ್ಟೇ ಅನುಶಾಸನವು. || ೧೫ ||**

ಹಾಗಾದರೆ ಕಾಮಗಳು ಬೇರುಸಹಿತ ಯಾವಾಗ ನಾಶವಾಗುವವು? ಎಂದರೆ ಹೇಳುತ್ತಾನೆ: ಯಾವಾಗ ಹೃದಯದ ಎಂದರೆ ಬುದ್ಧಿಯ ಗ್ರಂಥಿಗಳೆಲ್ಲ, ಗಂಟುಗಳ ಹಾಗೆ ಗಟ್ಟಿಯಾಗಿ ಕಟ್ಟಿಹಾಕಿರುವ ಅವಿದ್ಯೆಯ ಜ್ಞಾನಗಳೆಲ್ಲ, ಇಲ್ಲಿಯೇ ಎಂದರೆ ಬದುಕಿರುವಾಗಲೇ ಬಿಚ್ಚಿಕೊಳ್ಳುವವೋ ಎಂದರೆ ಭಿನ್ನವಾಗಿ ನಾಶವಾಗುವವೋ– ನಾನು ಈ ಶರೀರವು, ನನ್ನದು ಈ ಧನವು, ನಾನು ಸುಖಿಯು, ದುಃಖಿಯು- ಎಂಬು ಮುಂತಾಗಿರುವ ಅರಿವುಗಳೆಲ್ಲ ಇದಕ್ಕೆ ವಿರೋಧವಾಗಿ 'ಅಸಂಸಾರಿಯಾದ ಬ್ರಹ್ಮವೇ ನಾನು' ಎಂಬ ಬ್ರಹ್ಮಾತ್ಮದ ಅರಿವು ಹುಟ್ಟಿ– **ಅವಿದ್ಯಾ**

---

* ಕಾಮವು ಆತ್ಮನಲ್ಲಿರುವವೆಂದು ವೈಶೇಷಿಕರೂ ಕೆಲವರು ವೇದಾಂತಿಗಳೂ ಹೇಳುತ್ತಿದ್ದರು ಇದನ್ನು ಇಲ್ಲಿ ತಿರಸ್ಕರಿಸಿದೆ

† ಬಂಧಗಳು ಎಲ್ಲಿಗೂ ಹೋಗುವದಿಲ್ಲ, ಕಲ್ಪಿತವಸ್ತುಗಳೆಂದು ಗೊತ್ತಾಗಿಬಿಡುವವು– ಎಂದು ತಿಳಿಸುವದಕ್ಕೆ ದೀಪವು ಆರುವವರ ದೃಷ್ಟಾಂತವನ್ನು ಕೊಟ್ಟದೆಯೆಂದು ಭಾವ.

‡ ಮೊದಲೂ ಬ್ರಹ್ಮವೇ ಆಗಿರುತ್ತಾನೆ; ಈಗ ಜ್ಞಾನದಿಂದ ಅದನ್ನು ತಿಳಿದುಕೊಳ್ಳುತ್ತಾನೆ. ಹೀಗೆ ತಿಳಿದುಕೊಳ್ಳುವದೇ ಬ್ರಹ್ಮವಾಗುವದು.

**ಗ್ರಂಥಿ**ಗಳು ಯಾವಾಗ ನಾಶವಾಗುವವೋ, ಆಗ- ಆ (ಗ್ರಂಥಿ) ಗಳಿಂದ ಆಗಿದ್ದ ಕಾಮಗಳು ಬೇರುಸಹಿತವಾಗಿ* ನಾಶವಾಗುತ್ತವೆ ಆಗ ಮರ್ತ್ಯನಾದವನು ಅಮೃತನಾಗುವನು.

ಇಷ್ಟೇ ಅನುಶಾಸನವು, ಇದಕ್ಕಿಂತ ಹೆಚ್ಚು (ತಿಳಿಯತಕ್ಕದ್ದು) ಇದೆ ಎಂದು ತಿಳಿಯಬಾರದು; ಎಲ್ಲಾ ವೇದಾಂತಗಳೂ ಹೇಳುವ ಅನುಶಾಸನವು ಎಂದರೆ ತಿಳಿಸಿ ಕೊಡುವ ಉಪದೇಶವು (ಇಷ್ಟೇ)† ಎಂದು ಈ ವಾಕ್ಯಕ್ಕೆ ಸೇರಿಸಿಕೊಳ್ಳಬೇಕು.

ಯಾವ ವಿಶೇಷಗಳೂ ಇಲ್ಲದೆ ವ್ಯಾಪಿಸಿಕೊಂಡಿರುವ **ಬ್ರಹ್ಮಾತ್ಮದ ಜ್ಞಾನದಿಂದ ಅವಿದ್ಯೆಯೇ ಮುಂತಾದ ಎಲ್ಲಾ ಗ್ರಂಥಿಗಳನ್ನೂ ಬಿಚ್ಚಿಕೊಂಡು ಬದುಕಿರುವಾಗಲೇ ಬ್ರಹ್ಮವಾಗಿರುವ ಜ್ಞಾನಿಗೆ (ಶರೀರವನ್ನು ಬಿಟ್ಟು ಎಲ್ಲಿಗೂ) ಹೋಗುವದೆಂಬುದು ಇಲ್ಲ**- ಎಂದು ಮೇಲೆ ಹೇಳಿರುತ್ತದೆಂದು ತಿಳಿಯಬೇಕು; ಏಕೆಂದರೆ 'ಇಲ್ಲಿಯೇ ಬ್ರಹ್ಮವನ್ನು ಪಡೆಯುತ್ತಾನೆ' ಎಂದು ಈ ಶ್ರುತಿಯಲ್ಲಿದೆ. 'ಅವನ ಪ್ರಾಣಗಳು (ಶರೀರವನ್ನು ಬಿಟ್ಟು) ಹೋಗುವದಿಲ್ಲ, (ಬೃ) 'ಬ್ರಹ್ಮವೇ ಆಗಿದ್ದು ಬ್ರಹ್ಮದಲ್ಲಿ ಲಯವಾಗುವನು' (ಬೃ) ಎಂದು ಹೇಳುವ ಬೇರೊಂದು ಶ್ರುತಿಯ ಪ್ರಮಾಣದಿಂದಲೂ (ಇದೇ ನಿರ್ಣಯವಾಗಿರುತ್ತದೆ)

ಆದರೆ ಯಾರು ಕೀಳುಬ್ರಹ್ಮವನ್ನು‡ ತಿಳಿದವರಾಗಿ ಬೇರೆ (ಬಗೆಯ ಜ್ಞಾನವನ್ನು§ ಅಭ್ಯಾಸಮಾಡಿ ಬ್ರಹ್ಮಲೋಕವನ್ನು ಪಡೆಯುವವರಾಗಿರುತ್ತಾರೋ ಮತ್ತು ಯಾರು ಅವರಂತಲ್ಲದೆ (ಇದಕ್ಕೆ) ವಿರುದ್ಧವಾದ ಸ್ವಭಾವವುಳ್ಳವರಾಗಿ|| ಸಂಸಾರವನ್ನು ಹೊಂದುವವರಾಗಿರುವರೋ ಅವರಿಗೆ (ಆಗುವ) ಗತಿಯು ಎಂಥದ್ದೆಂಬುದನ್ನು ಇಲ್ಲಿ ಪ್ರಕೃತವಾಗಿಯೂ ಎಲ್ಲಕ್ಕೂ ಉತ್ತಮವಾದದ್ದಾಗಿಯೂ ಇರುವ ಬ್ರಹ್ಮವಿದ್ಯೆಯ ಫಲವನ್ನು ಹೊಗಳುವದಕ್ಕೋಸ್ಕರ** ತಿಳಿಸುತ್ತಾನೆ ಅದೂ ಅಲ್ಲದೆ ಹಿಂದೆ ಅಗ್ನಿವಿದ್ಯೆಯನ್ನು ಕುರಿತು ಕೇಳಿದ್ದೂ ಉತ್ತರವನ್ನು ಹೇಳಿದ್ದೂ ಆಗಿದೆಯಷ್ಟೆ, ಅದಕ್ಕೂ ಫಲವನ್ನು ಹೇಳಬೇಕು; ಆದ್ದರಿಂದಲೂ ಈ (ಮುಂದಿನ) ಮಂತ್ರವು ಆರಂಭವಾಗಿರುತ್ತದೆ.

* ನಿದ್ರೆಯೇ ಮುಂತಾದ ಅವಸ್ಥೆಗಳಲ್ಲಿ ಇವು ಇಲ್ಲವಾಗಿರುತ್ತವೆ; ಆದರೆ ಎಚ್ಚತ್ತ ಮೇಲೆ ಮತ್ತೂ ತೋರಿಕೊಳ್ಳುತ್ತದೆ ಅವುಗಳ ಬೇರು, ಎಂದರೆ ಅಜ್ಞಾನವು ನಾಶವಾಗುವದರಿಂದಲೇ ಅವುಗಳು ಮತ್ತೆ ಮುಖವನ್ನು ತೋರಿಸುವದಿಲ್ಲ.

† ಅವಿದ್ಯಾಕಾಮಗಳು ಹೋದರೆ ಜೀವನು ನಿತ್ಯಬ್ರಹ್ಮವೇ ಆಗಿರುವನು ಎಂಬುದೇ ವೇದಾಂತದ ರಹಸ್ಯ.

‡ ಉಪಾಸನೆಮಾಡಬೇಕಾದ ಬ್ರಹ್ಮದ ರೂಪವನ್ನು. ಇದರಲ್ಲಿ ಅವಿದ್ಯೆಯಿಂದ ಕಲ್ಪಿಸಿರುವ ನಾಮರೂಪಗಳೂ ಉಂಟು. § ಉಪಾಸನೆಯನ್ನು || ವಿಷಯಗಳ ಧ್ಯಾನವುಳ್ಳವರಾಗಿ.

** ಉಪಾಸಕರಿಗೂ ಸಂಸಾರಿಗಳಿಗೂ ಆಗುವ ಗತಿಗಿಂತ ಇದು ಉತ್ತಮವಾದ ಗತಿಯೆಂದು ತೋರಿಸುವವಕ್ಕೋಸ್ಕರ

**ಹೃದಯಕ್ಕೆ ನೂರು ಮತ್ತೊಂದು ನಾಡಿಗಳಿವೆ. ಅವುಗಳಲ್ಲಿ ಒಂದು ನೆತ್ತಿಯ ಕಡೆಗೆ ಹೊರಟಿರುವದು. ಅದರಿಂದ ಮೇಲಕ್ಕೆ ಹೋಗುವವನು ಅಮೃತತ್ವವನ್ನು ಹೊಂದುತ್ತಾನೆ. ಮಿಕ್ಕ ಕಡೆಗಳಿಗೆ ಹೋಗಿರುವ ಉಳಿದ (ನಾಡಿಗಳು) ಉತ್ಕ್ರಮಣಕ್ಕೆ ಕಾರಣವಾಗಿರುವವು. ||**

ಇಲ್ಲಿ ನೂರು ಎಂದರೆ ಎಣಿಸಿದರೆ ನೂರಾಗುವಷ್ಟು,* ಮತ್ತು ಮೇಲೆ ಒಂದು, ಎಂದರೆ '**ಸುಷುಮ್ನೆ**' ಎಂಬ ನಾಡಿ, ಇವು ಮನುಷ್ಯನ ಹೃದಯದಿಂದ ಹೊರಟಿರುವ ನಾಡಿಗಳು ಎಂದರೆ ನರಗಳು. ಅವುಗಳಲ್ಲಿ ನೆತ್ತಿಯನ್ನು ಒಡೆದುಕೊಂಡು ಹೋಗಿರುವದು ಒಂದು, ಸುಷುಮ್ನೆ† ಎಂಬುದು. ಅದರ ಮೂಲಕವಾಗಿ ಅವಸಾನಕಾಲದಲ್ಲಿ ಹೃದಯದಲ್ಲಿ ಮನಸ್ಸನ್ನು ಸ್ವಾಧೀನಪಡಿಸಿಕೊಳ್ಳಬೇಕು. ಆಮೇಲೆ ಆ ನಾಡಿಯ ಮೂಲಕ ಮುಂದಕ್ಕೆ ಹೋಗುವಾತನು **ಆದಿತ್ಯನ** ಮೂಲಕ‡ ಅಮೃತತ್ವವನ್ನು ಹೊಂದುತ್ತಾನೆ. (ಇಲ್ಲಿ ಅಮೃತತ್ವವೆಂಬುದು) ಇನ್ನೊಂದರ ಹೋಲಿಕೆಯಿಂದ§ ಹೇಳಿದ್ದು. ಏಕೆಂದರೆ "ಆಭೂತಸಂಪ್ಲವಂ ಸ್ಥಾನಮಮೃತತ್ವಂ ಹಿ ಭಾಷ್ಯತೇ" (ವಿ) (ಭೂತಗಳೆಲ್ಲ ಪ್ರಲಯವಾಗುವವರೆಗೂ ಸ್ಥಿರವಾಗಿರುವ ಸ್ಥಾನವು ಅಮೃತತ್ವವೆನ್ನಲ್ಪಡುತ್ತದೆ) ಎಂದು **ಸ್ಮೃತಿ** ಇದೆ. ಅಥವಾ ಹೋಲಿಕೆಯಿಲ್ಲದಂಥ (ಉತ್ತಮ)ವಾದ ಭೋಗಗಳನ್ನು || ಬ್ರಹ್ಮಲೋಕದಲ್ಲಿ ಅನುಭವಿಸಿ ಬ್ರಹ್ಮನೊಡನೆ (ಕೊನೆಗೆ) ಬೇರೊಂದು ಕಾಲದಲ್ಲಿ** ಮುಖ್ಯವಾಗಿರುವ ಅಮೃತತ್ವವೆಂಬ (ನಿಜವಾದ ಕಡೆಗೆ ಮುಕ್ತಿಯನ್ನೆ) ಪಡೆಯುತ್ತಾನೆ-ಎಂದೂ ಅರ್ಥವನ್ನು (ಮಾಡಬಹುದು). ಸಿಕ್ಕಸಿಕ್ಕ ಹಾಗೆ ಹೋಗಿರುವ ಮಿಕ್ಕ ನಾಡಿಗಳು ಉತ್ಕ್ರಮಣಕ್ಕೆ ಕಾರಣವಾಗಿರುವವು, ಎಂದರೆ ಸಂಸಾರವನ್ನು ಪಡೆಯುವದಕ್ಕೆ ಕಾರಣವಾಗಿರುವವು.

## ಉಪಸಂಹಾರ

**ಅಂತರಾತ್ಮನಾದ ಪುರುಷನು ಅಂಗುಷ್ಠಮಾತ್ರನಾಗಿ ಜನಗಳ ಹೃದಯದಲ್ಲಿ ಯಾವಾಗಲೂ ಇದ್ದುಕೊಂಡಿರುತ್ತಾನೆ. ನೊಸೆಯ†† ಹುಲ್ಲಿ**

---

* ಅನೇಕ ಸಂಖ್ಯೆಯ

† ತೈತ್ತಿರೀಯವನ್ನು (೧-೬) ನೋಡಿ ಯೋಗದಲ್ಲಿ ಈ ನಾಡಿಯು ಪ್ರಸಿದ್ಧ

‡ ಛಾಂದೋಗ್ಯದಲ್ಲಿರುವ ನಾಡೀಖಂಡವನ್ನು (೮-೬) ನೋಡಿ

§ ಬ್ರಹ್ಮಲೋಕವು ನಿಜವಾಗಿ ನಿತ್ಯವಾದದ್ದು ಎಂದರ್ಥವಲ್ಲ, ಏಕೆಂದರೆ ಅದಕ್ಕೂ ಪ್ರಲಯವುಂಟು. ಮಿಕ್ಕ ಲೋಕಗಳಿಗೆ ಹೋಲಿಸಿದರೆ ಇದನ್ನು ನಿತ್ಯವೆನ್ನಬಹುದೆಂದರ್ಥ.

|| ಈ ಭೋಗಗಳನ್ನು ಛಾಂದೋಗ್ಯದಲ್ಲಿ (೮-೫-೩) ವರ್ಣಿಸಿದೆ

**. ಕಾರ್ಯಬ್ರಹ್ಮವನ್ನು ಪಡೆದವರಿಗೂ ಜ್ಞಾನದಿಂದಲೇ ಮುಕ್ತಿಯಾಗುವದೆಂಬುದನ್ನು ಬ್ರ||ಸೂ|| ೪-೩-೧೦ರಲ್ಲಿ ನಿಶ್ಚಯಿಸಿದೆ

†† ಇದನ್ನು ನೊಸೆ ಹುಲ್ಲು ಎಂದು ಕರೆಯುತ್ತಾರೆ.

**ನಿಂದ ದಂಟನ್ನು (ತೆಗೆಯುವಂತೆ) ಧೈರ್ಯದಿಂದ ಆತನನ್ನು ತನ್ನ ಶರೀರ ದಿಂದ ಹಿರಿದುಕೊಳ್ಳಬೇಕು. ಅವನನ್ನು ಶುಕ್ರನೆಂದೂ ಅಮೃತನೆಂದೂ ತಿಳಿದುಕೊಳ್ಳಬೇಕು, ಅವನನ್ನು ಶುಕ್ರನೆಂದೂ ಅಮೃತನೆಂದೂ ತಿಳಿದು ಕೊಳ್ಳಬೇಕು. ಹೀಗೆ (ಉಪನಿಷತ್ತು ಮುಗಿಯಿತು.) ॥ ೧೭ ॥**

ಈಗ ಈ ವಲ್ಲಿಗಳ ಅರ್ಥವನ್ನೆಲ್ಲ ಉಪಸಂಹಾರಮಾಡಿ ಹೇಳುತ್ತಾರೆ. 'ಅಂತರಾತ್ಮನಾದ ಪುರುಷನು, ಜನಗಳಿಗೆ ಸೇರಿರುವ ಹೃದಯದಲ್ಲಿ ಅಂಗುಷ್ಠ ಮಾತ್ರನಾಗಿ ಯಾವಾಗಲೂ ಇದ್ದುಕೊಂಡಿರುತ್ತಾನೆ.' ಇದನ್ನು ಹಿಂದೆಯೇ (೨-೧-೧೨ ರಲ್ಲಿ) ವಿವರಿಸಿದೆ. ಆತನನ್ನು ತನ್ನ ಶರೀರದಿಂದ* ಎತ್ತಿಹಿಡಿದು ಕೊಳ್ಳಬೇಕು, ಎಂದರೆ ಬೇರ್ಪಡಿಸಿಕೊಳ್ಳಬೇಕು ಎಂದರ್ಥ. ಯಾವ ರೀತಿ? ಎಂದರೆ ಹೇಳುತ್ತಾನೆ. ನೊದೆಯ ಹುಲ್ಲಿನಿಂದ ಒಳಗಿರುವ ದಂಟನ್ನು ಧೈರ್ಯ ದಿಂದ ಎಂದರೆ ಎಚ್ಚರಿಕೆಯಿಂದ† (ಹಿರಿದುಕೊಳ್ಳುವಂತೆ, ಆತ್ಮನನ್ನು ಬಿಡಿಸಿ ಕೊಳ್ಳಬೇಕು) ಹಾಗೆ ಶರೀರದಿಂದ ಬೇರ್ಪಡಿಸಿಕೊಂಡ ಒರಿಯು ಅರಿವೇ ಆಗಿ ರುವ (ಆತ್ಮನೇ) (೨-೩-೧) ಇದುವರೆಗೆ ಹೇಳಿದಂತೆ ಶುಭ್ರವಾಗಿ ನಾಶವಿಲ್ಲ ದ್ದಾಗಿರುವ) ಬ್ರಹ್ಮವು ಎಂದು ತಿಳಿಯಬೇಕು. ('ಅವನನ್ನು ಶುಕ್ರನೆಂದೂ ಅಮೃತನೆಂದೂ ತಿಳಿದುಕೊಳ್ಳಬೇಕು' ಎಂಬ ವಾಕ್ಯವನ್ನು) ಎರಡು ಸಲ ಹೇಳಿ ದ್ದೂ ಕೊನೆಯಲ್ಲಿ 'ಹೀಗೆ' ('ಇತಿ') ಎಂಬ ಶಬ್ದವನ್ನು ಉಪಯೋಗಿಸಿರುವದೂ ಉಪನಿಷತ್ತು ಮುಗಿಯಿತೆಂದು ಸೂಚಿಸುವದಕ್ಕೆ.

**ಮೃತ್ಯುವು ಹೇಳಿದ ಈ ವಿದ್ಯೆಯನ್ನೂ ಯೋಗದ ಕ್ರಮವನ್ನೂ ಎಲ್ಲ ವನ್ನೂ ಪಡೆದುಕೊಂಡು ನಚಿಕೇತನು ಬ್ರಹ್ಮವನ್ನು ಹೊಂದಿದನು, ಧೂಳಿ ಲ್ಲದವನೂ ಮೃತ್ಯುವಿಲ್ಲದವನೂ ಆದನು. ಮತ್ತೊಬ್ಬನು ಯಾವನು ಅಧ್ಯಾತ್ಮವನ್ನೆ ಹೀಗೆಯೇ ತಿಳಿಯುತ್ತಾನೋ (ಅವನೂ ಹೀಗೆಯೇ ಆಗುವನು). ॥ ೧೮ ॥**

ವಿದ್ಯೆಯನ್ನು ಹೊಗಳುವದಕ್ಕಾಗಿ‡ ಕಥೆಯಲ್ಲಿ ಹೇಳಿದ ವಿಷಯವನ್ನು ಈಗ ಉಪಸಂಹಾರಮಾಡಿ ಹೇಳಲಾಗುತ್ತದೆ. ಮೃತ್ಯುವು ಹೇಳಿದ, ಹಿಂದೆ ವರ್ಣಿಸಿರುವ ಈ ಬ್ರಹ್ಮವಿದ್ಯೆಯನ್ನೂ ಮತ್ತು ಯೋಗವಿದ್ಯೆಯನ್ನೂ ಎಲ್ಲವನ್ನೂ

---

* ಸ್ಥೂಲಸೂಕ್ಷ್ಮಶರೀರಗಳಿಂದ † ಹುಲ್ಲಿನ ಸಿಪ್ಪೆಯೆ ಬೇರೆ, ದಂಟು ಬೇರೆ- ಆಗು ವಂತೆ ಬಿಡಿಸುವದಕ್ಕೆ ಜಾಣತನ ಬೇಕು, ಇದರಂತೆ ಆತ್ಮವಸ್ತುವನ್ನು ಅನಾತ್ಮದಿಂದ ಬಿಡಿಸಿಕೊಳ್ಳು ವದಕ್ಕೂ ಜಾಣತನ ಬೇಕು

‡ ವಿದ್ಯೆಯನ್ನು ಸರಿಯಾದ ಗುರು ಉಪದೇಶಮಾಡಿದರೆ ಮತ್ತು ತಕ್ಕ ಶಿಷ್ಯನಾದರೆ ಫಲವು ಆಗಿಯೇ ಆಗುತ್ತದೆ; ಈ ವಿದ್ಯೆಯ ಫಲವು ವೈದಿಕವೇ ಮುಂತಾದುವುಗಳ ಫಲದಂತೆ ಸಂಶಯ ಗ್ರಸ್ತವಾದದ್ದಲ್ಲ ಎಂದು ಹೇಳುವದಕ್ಕಾಗಿ ಇದನ್ನು ಹೊಗಳಿದೆ.

ಎಂದರೆ ಉಪಕರಣಗಳು * ಫಲ– ಇವುಗಳ ಸಮೇತವಾಗಿ ಪೂರ್ಣವಾಗಿ ನಚಿಕೇತನು ಮೃತ್ಯುವಿನಿಂದ ವರಪ್ರದಾನಕಾರಣದಿಂದ ಪಡೆದುಕೊಂಡು– ಏನಾದನು ? ಎಂದರೆ– ಬ್ರಹ್ಮವನ್ನು ಪಡೆದನು, ಮುಕ್ತನಾದನು ಎಂದರ್ಥ. ಹೇಗೆ (ಮುಕ್ತನಾದನು) ? ಎಂದರೆ ಈ ವಿದ್ಯೆಯನ್ನು ಪಡೆದುಕೊಂಡದ್ದರಿಂದ ಧೂಳಿಲ್ಲದವನೂ ಎಂದರೆ ಧರ್ಮಾಧರ್ಮಗಳ (ಸೋಂಕು) ಇಲ್ಲದವನೂ, ಮೃತ್ಯುವಿಲ್ಲದವನೂ ಎಂದರೆ ಕಾಮವೂ ಅವಿದ್ಯೆಯೂ ಇಲ್ಲದವನೂ ಮೊದಲು † (ಆಗಿ ಮುಕ್ತನಾದನು) ಎಂದು ಅರ್ಥ

ನಚಿಕೇತನೊಬ್ಬನೇ ಅಲ್ಲ, ನಚಿಕೇತನ ಹಾಗೆ ಆತ್ಮವನ್ನು ಅರಿತು ಅಧ್ಯಾತ್ಮವನ್ನೇ ಎಂದರೆ ಗೌಣವಲ್ಲದ ನೇರಾದ ಒಳಗಿರುವ ಆತ್ಮದ ಸ್ವರೂಪವನ್ನೇ ಎಂದರೆ ತತ್ತ್ವವನ್ನೇ ಪಡೆದು ; ಒಳಗಿನ ಆತ್ಮವಲ್ಲದ ಮತ್ತೊಂದನ್ನು (ನೆಸಪಡೆ) ಎಂದಭಿಪ್ರಾಯ ; ಹೀಗೆ ಎಂದರೆ ಹಿಂದೆ ಹೇಳಿದ ರೀತಿಯಲ್ಲಿ ಅಧ್ಯಾತ್ಮವನ್ನೇ ಯಾವನು ತಿಳಿಯುತ್ತಾನೋ, ಅಂಥ ಹೀಗೆ ತಿಳಿಯುವವನೂ ಧರ್ಮಾಧರ್ಮಗಳ 'ಧೂಳಿಲ್ಲದವನಾಗಿ ಬ್ರಹ್ಮವನ್ನು ಪಡೆದು ವಿಮೃತ್ಯುವಾಗುತ್ತಾನೆ' ಎಂದು (ಈ) ವಾಕ್ಯಕ್ಕೆ ಶೇಷವು.

**‡ ನಮ್ಮಿಬ್ಬರನ್ನೂ ಜೊತೆಯಲ್ಲಿ ಕಾಪಾಡಲಿ, ನಮ್ಮಿಬ್ಬರನ್ನೂ ಜೊತೆಯಲ್ಲಿ ಪೋಷಿಸಲಿ. (ಈ) ವೀರ್ಯವನ್ನು (ನಾವಿಬ್ಬರೂ) ಜೊತೆಯಲ್ಲಿ ಉಂಟುಮಾಡುವಂತಾಗಲಿ, ನಾವು ಅಧ್ಯಯನಮಾಡಿದ್ದು ತೇಜಸ್ವಿಯಾಗಲಿ. (ಒಬ್ಬರನ್ನೊಬ್ಬರು) ದ್ವೇಷಮಾಡದೆ ಇರುವಂತಾಗಲಿ.**

**|| ಓಂ ಶಾಂತಿಃ ಶಾಂತಿಃ ಶಾಂತಿಃ ||**

ಶಿಷ್ಯನೂ ಆಚಾರ್ಯನೂ ಪ್ರಮಾದದಿಂದ ಅನ್ಯಾಯವಾಗಿ § ವಿದ್ಯಾಗ್ರಹಣಮಾಡುವದರಿಂದಲೂ ಅನ್ಯಾಯವಾಗಿ ಹೇಳಿಕೊಡುವದರಿಂದಲೂ ಆಗಬಹುದಾದ

---

* ಕರ್ಮ, ಯೋಗ– ಇವು ಉಪಕರಣಗಳು ; ಶೋಕನಿವೃತ್ತಿಯು ಫಲ.

† ಮೊದಲು ಅವಿದ್ಯಾಕಾಮಗಳು ಹೋಗಿ ಆಮೇಲೆ ಕರ್ಮಕೃತವಾದ ಸಂಸಾರದಿಂದಲೇ-ಮುಕ್ತನಾದನು- ಎಂದು ಭಾವ.

‡ ಈ ಶಾಂತಿಯೂ ಇದರ ಭಾಷ್ಯವೂ ಶ್ರೀಶಂಕರಾಚಾರ್ಯರ ಭಾಷ್ಯಮೂಲದಲ್ಲಿ ಸೇರಿತ್ತೋ ಇಲ್ಲವೋ ಹೇಳುವದಕ್ಕಿಲ್ಲ. ಏಕೆಂದರೆ ಉಪನಿಷತ್ತಿನ ಆದಿಯಲ್ಲಿ ಈ ಶಾಂತಿಯಾಗಲಿ, ಇದರ ಭಾಷ್ಯವಾಗಲಿ ಇರುವದಿಲ್ಲ; ಕೆಲವು ಪುಸ್ತಕಗಳಲ್ಲಿ 'ಇತಿ ದ್ವಿತೀಯಾಧ್ಯಾಯಃ' ಎಂಬ ಮಾತುಗಳಾದ ಮೇಲೆ 'ಸಹನಾವತು ಶಾನ್ತಿಃ' ಎಂದಿಷ್ಟೇ ಇದೆ.

§ ಶಾಸ್ತ್ರದಲ್ಲಿ ಹೇಳಿರುವ ಕ್ರಮವನ್ನು ಬಿಟ್ಟು ಬೇರೊಂದು ರೀತಿಯಿಂದ ಪಾಠಪ್ರವಚನವನ್ನು ಮಾಡಿರಬಹುದಾದ್ದರಿಂದ– ಎಂದರ್ಥ. ಗುರುಶಿಷ್ಯಭಾವದಿಂದಲೇ ಇದನ್ನು ಹೇಳಿಕೊಡಬೇಕು- ಎಂದು ಭಾವ

ದೋಷವನ್ನು ಶಾಂತಿಗೊಳಿಸುವದಕ್ಕಾಗಿ ಈ ಶಾಂತಿಯನ್ನು ಹೇಳಿರುತ್ತದೆ ನಮ್ಮಿಬ್ಬರನ್ನೂ ಜೊತೆಯಲ್ಲಿಯೇ ವಿದ್ಯಾಸ್ವರೂಪವನ್ನು ನಮಗೆ ತೋರಿಸಿ ಕಾಪಾಡಲಿ. ಯಾರು? ಎಂದರೆ ಉಪನಿಷತ್ತಿನಲ್ಲಿ ಹೇಳಿರುವ ಆ ಪರಮೇಶ್ವರನೆ. ಮತ್ತು ಆ (ವಿದ್ಯೆಯ) ಫಲವನ್ನು* ತೋರಿಸಿಕೊಟ್ಟು ನಮ್ಮಿಬ್ಬರನ್ನೂ ಒಟ್ಟಿಗೆ ಪೋಷಿಸಲಿ. ಈ ವಿದ್ಯೆಯಿಂದ ಆಗಿರುವ ವೀರ್ಯವನ್ನು ಎಂದರೆ ಸಾಮರ್ಥ್ಯವನ್ನು† ಒಟ್ಟಿಗೆ ಉಂಟುಮಾಡುವರಾಗೋಣ. ಮತ್ತು ತೇಜಸ್ವಿಗಳಾದ [ತೇಜಸ್ವಿನೌ = ತೇಜಸ್ವಿನೋಃ] ನಮ್ಮಿಬ್ಬರ ಅಧ್ಯಯನವು ಸರಿಯಾದ ಅಧ್ಯಯನವಾಗಲಿ ಅಥವಾ‡ ನಾವಿಬ್ಬರೂ ಅಧ್ಯಯನಮಾಡಿದ್ದು ಅದು ಬಹಳ ತೇಜಸ್ವಿಯಾಗಲಿ, ಎಂದರೆ ವೀರ್ಯವುಳ್ಳದ್ದಾಗಲಿ (ಎಂದರ್ಥ) ಶಿಷ್ಯಾಚಾರ್ಯರಾದ ನಾವಿಬ್ಬರೂ ಒಬ್ಬರನ್ನೊಬ್ಬರು ದ್ವೇಷಮಾಡದೆ ಇರೋಣ ಎಂದರೆ ಪ್ರಮಾದದಿಂದ ಅನ್ಯಾಯವಾಗಿ ಅಧ್ಯಯನಮಾಡಿದ ಮತ್ತು ಅಧ್ಯಯನಮಾಡಿಸಿದ ದೋಷದಿಂದ. ಪರಸ್ಪರದ್ವೇಷವನ್ನು ಮಾಡದೆ ಇರುವಂತಾಗಲಿ! ಎಂದರ್ಥ. "ಶಾಂತಿಃ ಶಾಂತಿಃ ಶಾಂತಿಃ" ಎಂದು ಮೂರು ಸಲ ಹೇಳಿದ್ದು ಎಲ್ಲಾ ದೋಷಗಳೂ ಪರಿಹಾರವಾಗುವದಕ್ಕೆ. ಓಮಿತಿ.§ ॥

॥ ॐ तत्सत् ॥

---

* ವಿದ್ಯೆಯು ಸ್ವರೂಪವು ಈಶ್ವರಭಕ್ತಿಯುಳ್ಳಾತನಿಗೇ ಗೊತ್ತಾಗುವದು, ಅದರ ಫಲವೂ ಅಂಥವನಿಗೇ ಆಗುವದು

† ಸರಿಯಾದ ಗುರು ಸರಿಯಾದ ಶಿಷ್ಯನಿಗೆ ಹೇಳಿಕೊಟ್ಟ ವಿದ್ಯೆಗೇ ವೀರ್ಯವುಂಟು; ಹಾಗಿಲ್ಲದಿದ್ದರೆ ಅದು ಫಲಕಾರಿಯಾಗಲಾರದು

‡ 'ತೇಜಸ್ವಿನೌ, ಅಧೀತಂ, ಅಸ್ತು' ಎಂದು ಒಂದನೆಯ ವ್ಯಾಖ್ಯಾನಕ್ಕೆ ಪದಚ್ಛೇದ 'ತೇಜಸ್ವಿ, ನೌ, ಅಧೀತಂ, ಅಸ್ತು' ಎಂದು ಎರಡನೆಯ ವ್ಯಾಖ್ಯಾನಕ್ಕೆ

§ ಓಂ ಎಂಬುದು ಮಂಗಲವನ್ನೂ ಇತಿ ಎಂಬುದು ಭಾಷ್ಯದ ಸಮಾಪ್ತಿಯನ್ನೂ ಸೂಚಿಸುತ್ತವೆ.

# ಉಪನಿಷತ್ಸಾರ

## ಒಂದನೆಯ ಅಧ್ಯಾಯ – ಒಂದನೆಯ ವಲ್ಲಿ

೧–೯ ವಾಜಶ್ರವಸನೆಂಬಾತನು ಸರ್ವಸ್ವವನ್ನೂ ದಕ್ಷಿಣೆಯಾಗಿ ಕೊಡಬೇಕಾದ ವಿಶ್ವಜಿತ್ತು ಎಂಬ ಯಾಗವನ್ನು ಮಾಡಿ ಯೋಗ್ಯವಲ್ಲದ ಬರಡುಹಸುಗಳನ್ನು ದಕ್ಷಿಣೆಗೆಂದು ಒಯ್ಯುತ್ತಿರುವದನ್ನು ಕಂಡು, ಅವನ ಮಗನಾದ ನಚಿಕೇತನೆಂಬ ಹುಡುಗನು "ಅಯ್ಯೋ! ಇಂಥ ದಾನವನ್ನು ಮಾಡಿದರೆ ನಮ್ಮ ತಂದೆಗೆ ದುರ್ಗತಿ ಬರುವದಲ್ಲ" ಎಂದು ಯೋಚಿಸಿ "ಅಪ್ಪ, ನನ್ನನ್ನು ಯಾರಿಗೆ ದಕ್ಷಿಣೆಯಾಗಿ ಕೊಡುತ್ತೀಯೆ?" ಎಂದು ತಂದೆಯನ್ನು ಕೇಳಿದನು. "ನನ್ನನ್ನು ಯಾರಿಗೆ ಕೊಡುವೆ" ಎಂದು ಮತ್ತೆ ಮತ್ತೆ ಮಗನು ತನ್ನನ್ನು ನಿರ್ಬಂಧಿಸುವದನ್ನು ಕಂಡು ಸಿಟ್ಟುಗೊಂಡ ತಂದೆಯು "ನಿನ್ನನ್ನು ಯಮನಿಗೆ ಕೊಟ್ಟಿದ್ದೇನೆ" ಎಂದನು. ತಂದೆಯು ಯಜ್ಞಭೂಮಿಯಲ್ಲಿ ಆಡಿದ ಮಾತು ಸುಳ್ಳಾಗಬಾರದೆಂದು ತಿಳಿದ ನಚಿಕೇತನು "ಅಯ್ಯೋ! ಏನೋ ಹೇಳಿಬಿಟ್ಟೆನಲ್ಲ" ಎಂದು ಪಶ್ಚಾತ್ತಾಪಪಡುತ್ತಿದ್ದ ಅವನನ್ನು ಕುರಿತು "ನಿನ್ನ ವಚನವೇ ನಡೆಯಲಿ, ಇದರಿಂದ ನಿನಗೆ ಒಳ್ಳೆಯದಾಗಬಹುದು. ಮಗನೆಂಬ ಮೋಹದಿಂದ ಸುಳ್ಳು ಹೇಳಬೇಡ" ಎಂದು ಒಪ್ಪಿಸಿ ತಂದೆಯ ಅನುಜ್ಞೆಯನ್ನು ಹೊಂದಿ ಯಮಲೋಕಕ್ಕೆ ಹೋದನು. ಯಮನು ಈ ವೇಳೆಗೆ ಮನೆಯಲ್ಲಿಲ್ಲದೆ ಬೇರೆ ಕಡೆಗೆ ಹೋಗಿದ್ದನು, ಅವನು ನಚಿಕೇತನು ಬಂದು ಮೂರು ದಿನವಾದ ಮೇಲೆ ತಿರುಗಿ ಬಂದನು. ತನ್ನ ಮನೆಯ ಮುಂದೆ ಮೂರು ದಿನ ಉಪವಾಸವಿದ್ದ ಬ್ರಾಹ್ಮಣಕುಮಾರನಿಗೆ ಅತಿಥಿಸತ್ಕಾರವಿಲ್ಲದೆ ತಾನು ಅನಾದರಮಾಡಿದ ದೋಷದ ಪರಿಹಾರಕ್ಕಾಗಿ ಯಮನು "ಮೂರು ವರವನ್ನು ಬೇಡಿಕೋ, ಕೊಡುತ್ತೇನೆ" ಎಂದು ಹೇಳಿದನು.

೧೦–೧೯. ಆಗ ನಚಿಕೇತನು "ನಾನು ಹಿಂತಿರುಗಿ ಹೋದರೆ ನನ್ನ ತಂದೆಯು ನನ್ನ ವಿಷಯದಲ್ಲಿ ಪ್ರಸನ್ನನಾಗಿರಬೇಕು. ಇದು ಮೊದಲನೆಯ ವರವು. ವಿರಾಟ್ಪುರುಷನನ್ನು ಪಡೆಯುವದಕ್ಕೆ ಸಾಧನವಾದ ಅಗ್ನಿವಿದ್ಯೆಯನ್ನು ನನಗೆ ತಿಳಿಸು. ಇದು ಎರಡನೆಯ ವರವು" ಎಂದು ಕೇಳಿಕೊಂಡನು. ಯಮನು ಈ ಎರಡು ವರಗಳನ್ನೂ ಕೊಟ್ಟು "ಕರ್ಮೋಪಾಸನೆಗಳ ಫಲವಾದ ವಿರಾಟ್ಪ್ರಾಪ್ತಿಯನ್ನು ಕೊಡುವ ಅಗ್ನಿವಿದ್ಯೆಯಲ್ಲಿ ಉಪಯೋಗಿಸುವ ಅಗ್ನಿಗೆ ನಚಿಕೇತನೆಂದೇ ಇನ್ನು ಮೇಲೆ ಹೆಸರಾಗಲಿ" ಎಂದು ಹೆಚ್ಚಿಗೆಯ ವರವೊಂದನ್ನೂ ತಾನಾಗಿ ಕೊಟ್ಟನು. ಯಾವನು ಈ ನಚಿಕೇತಾಗ್ನಿಯನ್ನು ಉಪಾಸನೆಮಾಡುವನೋ ಅವನು ಬದುಕಿರುವಾಗಲೇ ಅಧರ್ಮ, ಅಜ್ಞಾನ- ಮುಂತಾದವುಗಳನ್ನು ಬಿಡಿಸಿಕೊಂಡು ಸತ್ತ ಮೇಲೆ ವಿರಾಡಾತ್ಮನಾಗಿ ದುಃಖವರ್ಜಿತನಾಗುವನು. ಇಂಥ ಉಪಾಸನಾಕ್ರಮವನ್ನು ಹೇಳಿಕೊಟ್ಟದ್ದೇ ಯಮನು ಕೊಟ್ಟ ಎರಡನೆಯ ವರವು.

೨೦-೨೯. ಆಮೇಲೆ "ಶರೀರೇಂದ್ರಿಯಾದಿಗಳಿಗಿಂತ ವ್ಯತಿರಿಕ್ತನಾಗಿ ಬೇರೊಂದು ದೇಹವನ್ನು ಹೊಂದುವ ಆತ್ಮನೊಬ್ಬನು ಇದಾನೆಂದು ಕೆಲವರೂ ಇಲ್ಲವೆಂದು ಕೆಲವರೂ ಹೇಳುತ್ತಿರುವರು; ಪ್ರತ್ಯಕ್ಷಾನುಮಾನಗಳಿಗೆ ನಿಲುಕದ ಈ ಆತ್ಮತತ್ತ್ವವನ್ನು ನನಗೆ ಹೇಳಿಕೊಡು" ಎಂದು ನಚಿಕೇತನು ಮೂರನೆಯ ವರವನ್ನು ಬೇಡಿಕೊಂಡನು ಈ ಮಾತನ್ನು ಕೇಳಿ ಜ್ಞಾನಕ್ಕೆ ನಚಿಕೇತನು ಅರ್ಹನೋ ಅಲ್ಲವೋ ಎಂದು ಪರೀಕ್ಷಿಸುವದಕ್ಕೋಸ್ಕರ ಯಮನು "ನಚಿಕೇತನೆ, ಇದನ್ನು ತಿಳಿಯುವದು ದೇವತೆಗಳಿಗೂ ಕಷ್ಟವಾಗಿರುವದು ಇದಲ್ಲದೆ ಈ ವರದಿಂದ ನಿನಗೇನಾಗಬೇಕು? ಆಯುಸ್ಸು, ಪ್ರಜಾಸಂತತಿ, ಪಶುವಿತ್ತಕ್ಷೇತ್ರಾದಿಗಳು, ಸಾಮ್ರಾಜ್ಯ— ಇಂಥ ವರಗಳನ್ನು ಕೇಳಿಕೊ , ಇಂಥ ಅನುಕೂಲವನ್ನೆಲ್ಲ ಕಲ್ಪಿಸಿ ಕೊಡುತ್ತೇನೆ" ಎಂದನು ಆದರೆ ನಚಿಕೇತನು ಇಂದ್ರಿಯಗಳಿಗೆ ಮುಪ್ಪನ್ನು ತರುವ ಆ ಭೋಗಗಳನ್ನು ಯಾವವನ್ನೂ ಒಲ್ಲದೆ ತನಗೆ ಮುಖ್ಯವಾದ ಆತ್ಮತತ್ತ್ವವನ್ನೇ ತಿಳಿಸಬೇಕೆಂದು ಪಟ್ಟು ಹಿಡಿದು ಕೇಳಿಕೊಂಡನು.

## ಒಂದನೆಯ ಅಧ್ಯಾಯ – ಎರಡನೆಯ ವಲ್ಲಿ

೧-೬. ನಚಿಕೇತನ ಉತ್ತಮವಾದ ಯೋಗ್ಯತೆಯನ್ನು ಕಂಡ ಯಮನು ಇವನಿಗೆ ಆತ್ಮವಿದ್ಯೆಯನ್ನು ಉಪದೇಶಿಸಿದನು. ಅವನು ಮೊದಲು ಇವನ ವೈರಾಗ್ಯವನ್ನು ಮೆಚ್ಚಿ ಹೊಗಳಿದ್ದು ಹೇಗೆಂದರೆ- "ನಚಿಕೇತನೆ, ಪ್ರಿಯವಾದದ್ದು, ಹಿತವಾದದ್ದು— ಎಂದು ಎರಡು ಬಗೆಯ ಸಾಧನಗಳು ಮನುಷ್ಯನಿಗೆ ದೊರೆಯಬಹುದಾಗಿವೆ. ಇವುಗಳಲ್ಲಿ ಹಿತವನ್ನು ಆರಿಸಿಕೊಂಡರೆ ಒಳ್ಳೆಯ ಫಲವಾಗುವದು, ಪ್ರಿಯವಾದದ್ದನ್ನು ಆರಿಸಿಕೊಂಡವನಿಗೆ ಪುರುಷಾರ್ಥವು ನಷ್ಟವಾಗುತ್ತದೆ ಆದ್ದರಿಂದ ಮೂಢನಾಗಿ ಪ್ರಿಯವಾದದ್ದನ್ನು ಆರಿಸಿಕೊಳ್ಳದೆ ವಿವೇಕಿಯಾದವನು ಹಿತವನ್ನೇ ಒಯಸಬೇಕು. ನೀನು ಹಿತವನ್ನೇ ಬಯಸಿ ಆತ್ಮತತ್ತ್ವವನ್ನು ಕೇಳಿದ್ದು ನೀನು ವಿವೇಕಿಯೆಂಬುದನ್ನು ತೋರಿಸುತ್ತದೆ

೭-೧೩. "ಈ ಆತ್ಮತತ್ತ್ವವು ಎಷ್ಟೋ ಜನರಿಗೆ ಕಿವಿಗೇ ಬೀಳುವದಿಲ್ಲ ಇನ್ನು ಕೆಲವರಿಗೆ ಬಿದ್ದರೂ ಅವರಿಗೆ ಅದು ತಿಳಿಯುವದೇ ಇಲ್ಲ. ಇದನ್ನು ತಿಳಿಸುವ ಗುರುವೂ ತಿಳಿಯುವ ಶಿಷ್ಯನೂ ಅದ್ಭುತಪ್ರಜ್ಞರಾಗಿರಬೇಕು ಸಂಪ್ರದಾಯವನ್ನು ಬಲ್ಲ ಆಚಾರ್ಯನು ಹೇಳಿದ ಮಾತಿನಿಂದ ಆತ್ಮತತ್ತ್ವವು ತಿಳಿದೀತೇ ಹೊರತು ಅದು ಬರಿಯ ತರ್ಕಕ್ಕೆ ಗೋಚರವಾಗುವಂಥದ್ದಲ್ಲ ಇಂಥ ಸೂಕ್ಷ್ಮತತ್ತ್ವವನ್ನು ತಿಳಿಯುವದಕ್ಕೆಂದು ನೀನು ಬ್ರಹ್ಮಪದವಿಯನ್ನು ಕೂಡ ಕಡೆಗಣಿಸಿ ಪರಮತತ್ತ್ವವನ್ನೇ ಕೇಳುತ್ತೀಯಲ್ಲ ! ಇದು ನಿನ್ನ ಉತ್ತಮಯೋಗ್ಯತೆಯನ್ನು ತೋರಿಸುತ್ತದೆ ಪ್ರಾಣಿಗಳ ಹೃದಯದಲ್ಲಿಯೇ ಇದ್ದರೂ ಈ ಆತ್ಮತತ್ತ್ವವು ಅಧ್ಯಾತ್ಮಯೋಗವನ್ನು ತಿಳಿದವರಿಗೆ ಮಾತ್ರ ಗೊತ್ತಾಗುವದು ಇದನ್ನು ಶ್ರವಣಮನನಗಳಿಂದ ವಿಂಗಡಿಸಿ ತಿಳಿದುಕೊಂಡವನಿಗೆ ಪರಮಾನಂದವೇ ಪ್ರಾಪ್ತಿಯಾಗುತ್ತದೆ. ಇದನ್ನು ನೀನು ಬಯಸಿದ್ದು ನಿನಗೆ ಉತ್ತಮಗತಿಯಾಗುವದೆಂಬುದಕ್ಕೆ ಸೂಚನೆಯಾಗಿದೆ."

೧೪-೧೭ ಹೀಗೆಂದು ತನ್ನಲ್ಲಿ ಪ್ರಸನ್ನನಾಗಿರುವ ಯಮನನ್ನು ಕಂಡು ನಚಿಕೇತನು " ಹಾಗಾದರೆ ನಾನು ಹಿಂದೆ ಹೇಳಿದಂತೆ ಧರ್ಮಾಧರ್ಮಗಳಿಗೂ ಕ್ರಿಯಾಕಾರಕಫಲಗಳಿಗೂ ಕಾಲ

ತ್ರಯಕ್ಕೂ ಮೀರಿರುವ ಆ ಆತ್ಮತತ್ತ್ವವನ್ನೇ ಹೇಳು'' ಎಂದು ಮತ್ತೆ ಬೇಡಿಕೊಂಡನು ಆಗ ಯಮನು ಹೇಳುತ್ತಾನೆ. ''ನಚಿಕೇತನೆ, ವೇದಪ್ರತಿಪಾದ್ಯವಾಗಿ ಬ್ರಹ್ಮಚರ್ಯಾದಿಸಾಧನಗಳಿಂದ ಪಡೆಯಬೇಕಾಗಿರುವ ಈ ಆತ್ಮಕ್ಕೆ ಓಂಕಾರವು ವಾಚಕವಾಗಿಯೂ ಪ್ರತೀಕವಾಗಿಯೂ ಇರುವದು. ಓಂಕಾರವು ಪರಾಪರಬ್ರಹ್ಮಗಳೆರಡಕ್ಕೂ ಪ್ರತೀಕವಾಗಿರುವದರಿಂದ ಇದನ್ನು ಬ್ರಹ್ಮವೆಂದು ಉಪಾಸನೆ ಮಾಡಿದರೆ ಎರಡನ್ನೂ ಪಡೆಯಬಹುದು.

೧೮–೨೨. ಈ ಓಂಕಾರದ ಮೂಲಕ ತಿಳಿಯುವ ಬ್ರಹ್ಮದ ಸಾಕ್ಷಾತ್ಸ್ವರೂಪವೇನೆಂದರೆ– ಹುಟ್ಟುವದು ಬೆಳೆಯುವದು ಮುಂತಾದ ವಿಕಾರಗಳು ಇದಕ್ಕಿಲ್ಲ. ಶರೀರದಲ್ಲಿಯೇ ಆತ್ಮನಾಗಿರುತ್ತಿದ್ದರೂ ಶರೀರದ ವಿಕಾರಗಳು ಯಾವುವೂ ಇದಕ್ಕಿಲ್ಲವಾದಕಾರಣ ಧರ್ಮಾಧರ್ಮಗಳನ್ನು ಇದು ಮೀರಿರುವದು ಎಲ್ಲಾ ನಾಮರೂಪಗಳೂ ಇದಕ್ಕೆ ಉಪಾಧಿಯಾಗಿರುತ್ತವೆ; ಇದು ಅಣುವಿಗಿಂತ ಅಣು, ಮಹತ್ತಿಗಿಂತ ಮಹತ್ತು. ವಿಜ್ಞಾನಸ್ವರೂಪದಲ್ಲಿರುವ ಇದಕ್ಕೆ ಯಾವ ವಿಕಾರವೂ ನಿಜವಾಗಿ ಇಲ್ಲ; ವಿಶೇಷಜ್ಞಾನದ ಅಂತಃಕರಣದಲ್ಲಿದ್ದುಕೊಂಡು ನಾನಾಚಲನಗಳನ್ನು ಪಡೆಯುವಂತೆ ತೋರಿಕೊಳ್ಳುತ್ತಿರುವದು. ನಿಶ್ಚಯವಾಗಿ ಇದಕ್ಕೆ ಶರೀರವೇ ಇಲ್ಲದ್ದರಿಂದ ಸರ್ವವ್ಯಾಪಿಯಾದ ಕೂಟಸ್ಥಜ್ಞಾನರೂಪವಾದ ಇದೇ ನಾನೆಂದು ಅರಿತವನಿಗೆ ಶೋಕವು ಇಲ್ಲವಾಗುತ್ತದೆ

೨೩–೨೫ ''ನಿಷ್ಕಾಮನಾಗಿ ಆತ್ಮನನ್ನೇ ಬಯಸುವದೇ ಈ ಆತ್ಮಜ್ಞಾನಕ್ಕೆ ಮುಖ್ಯಸಾಧನವು ಕೆಟ್ಟ ನಡತೆಯನ್ನು ಬಿಟ್ಟು ಮನಸ್ಸಮಾಧಾನವನ್ನು ಹೊಂದಿ ಗುರುವಿನ ಮೂಲಕ ತಿಳಿದುಕೊಳ್ಳುವವನಿಗೆ ಬ್ರಹ್ಮವೆಂಬ ಆತ್ಮಯಾಥಾತ್ಮ್ಯವು ತಿಳಿಯುವದು ಯಾವ ಧರ್ಮಕ್ಕೂ ನಿಲುಕದೆ ನಿತ್ಯವಾಗಿರುವ ''ಈ ಬ್ರಹ್ಮತತ್ತ್ವವು ಇಂಥ ಅಧಿಕಾರಿಗೊಬ್ಬನಿಗೇ ತಿಳಿಯುವದು

## ಒಂದನೆಯ ಅಧ್ಯಾಯ – ಮೂರನೆಯ ವಲ್ಲಿ

೧–೨ ''ಈ ಶರೀರದಲ್ಲಿ ಇಬ್ಬರು ಆತ್ಮರಿರುವರು. ಇವರಲ್ಲಿ ಒಬ್ಬನು ನಾವೆಲ್ಲರೂ ಕಲ್ಪಿಸಿಕೊಂಡಿರುವ ಸಂಸಾರಿಯು; ಇನ್ನೊಬ್ಬನು ಪರಮಾರ್ಥಸ್ವರೂಪನಾಗಿರುವ ಅಸಂಸಾರಿಯು. ಜ್ಞಾನಿಗಳೂ ಪಂಚಾಗ್ನಿವಿದ್ಯೆಯನ್ನು ಬಲ್ಲವರೂ ಅಸಂಸಾರಿಯಾದ ಬ್ರಹ್ಮವನ್ನು ಹೊಂದುವರು ಕರ್ಮಿಗಳು ಉಪಾಸನೆಯಿಂದ ಹೊಂದುವ ಅಪರಬ್ರಹ್ಮವನ್ನೂ ಬ್ರಹ್ಮಜ್ಞಾನಿಗಳು ಜ್ಞಾನದಿಂದ ಪಡೆಯುವ ಪರಬ್ರಹ್ಮವನ್ನೂ ತಿಳಿದುಕೊಂಡರೆ ಬ್ರಹ್ಮಜ್ಞಾನವು ಪೂರ್ತಿಯಾಗುವದು.

೩–೯. ''ಶರೀರವೆಂಬುದೊಂದು ಗಾಡಿಯು. ಇಲ್ಲಿ ಆತ್ಮನೇ ರಥಿಕನು, ಬುದ್ಧಿಯು ಗಾಡಿಯನ್ನು ನಡೆಸುವವನು, ಮನಸ್ಸೆಂಬುದೇ ಕಡಿವಾಣವು, ಇಂದ್ರಿಯಗಳು ಕುದುರೆಗಳು, ಶಬ್ದಾದಿವಿಷಯಗಳೇ ಇವು ನಡೆಯುವ ರಸ್ತೆಗಳು ಈ ಗಾಡಿಯಲ್ಲಿ ಶರೀರೇಂದ್ರಿಯಮನಸ್ಸುಗಳಿಂದೊಡಗೂಡಿರುವ ಜೀವನು ಪ್ರಯಾಣಮಾಡುತ್ತಾ ಸಂಸಾರವನ್ನೂ ಮೋಕ್ಷವನ್ನೂ ಪಡೆಯುತ್ತಿರುವನು. ಬುದ್ಧಿಯೆಂಬ ಸಾರಥಿಯು ಅವಿವೇಕಿಯಾಗಿದ್ದರೆ ಕುದುರೆಗಳನ್ನು ಮನಸ್ಸುಬಂದ ದಾರಿಯಲ್ಲಿ ಕೈಬಿಡುತ್ತಾನಾಗಿ ರಥಿಕನಾದ ಜೀವನು ಸಂಸಾರದಲ್ಲಿ ತೊಳಲಬೇಕಾಗುವದು. ಆದರೆ ಆ ಸಾರಥಿಯು ವಿವೇಕಿಯಾಗಿದ್ದರೆ ಕುದುರೆಗಳನ್ನು ಹತೋಟಿಯಲ್ಲಿಟ್ಟುಕೊಂಡು ಮತ್ತೆ ಹಿಂತಿರುಗುವ ಸಂಭವವಿಲ್ಲದಂಥ ಪರಮಾತ್ಮಸ್ಥಾನವನ್ನು ಮುಟ್ಟಿಸುತ್ತಾನೆ.

೧೦–೧೧. "ಈ ಪರಮಾತ್ಮನ ಸ್ಥಾನವನ್ನು ವಿವೇಕದಿಂದ ಸೇರುವ ಬಗೆ ಹೇಗೆಂದರೆ ಇಂದ್ರಿಯ, ವಿಷಯ, ಮನಸ್ಸು, ಬುದ್ಧಿ, ಮಹತ್ತು, ಅವ್ಯಾಕೃತ– ಇವು ಒಂದಕ್ಕಿಂತ ಒಂದು ಸೂಕ್ಷ್ಮವಾಗಿರುವವು. ಇವುಗಳೆಲ್ಲವೂ ಆತ್ಮನಲ್ಲಿ ಕಲ್ಪಿತವಾಗಿರುವದರಿಂದ ಇವೆಲ್ಲವನ್ನೂ ತುಂಬಿಕೊಂಡಿರುವ ಆತ್ಮನೇ ಕೊನೆಯ ತತ್ತ್ವ. ಈ ಆತ್ಮತತ್ತ್ವವನ್ನು ಮೇಲೆ ಹೇಳಿದಂತೆ ಸ್ಥೂಲಸೂಕ್ಷ್ಮಕಾರತಮ್ಯದಿಂದ ಅರಿತುಕೊಂಡರೆ ಇನ್ನೇನೂ ಅರಿಯಬೇಕಾದದ್ದು ಇರುವದಿಲ್ಲವಾಗಿ ಅದೇ ಕೊನೆಯ ಗತಿ

೧೨–೧೫. "ಈ ಆತ್ಮನು ಎಲ್ಲರಲ್ಲಿಯೂ ಇರುತ್ತಿದ್ದರೂ ಸ್ಥೂಲಬುದ್ಧಿಗಳಿಗೆ ಗೊತ್ತಾಗುವದಿಲ್ಲ. ಸೂಕ್ಷ್ಮವಾಗಿ ನೋಡುವವರಿಗೆ ಮಾತ್ರ ಕಾಣುತ್ತಾನೆ ಇಂದ್ರಿಯಗಳನ್ನು ಮನಸ್ಸಿನಲ್ಲಿ ಲಯಮಾಡಿ, ಆ ಮನಸ್ಸನ್ನು ಬುದ್ಧಿಯಲ್ಲಿ ಲಯಿಸಿಕೊಂಡು, ಆ ಬುದ್ಧಿಯನ್ನು ಹಿರಣ್ಯಗರ್ಭನಲ್ಲಿಟ್ಟು ಅತ್ಯಂತವಾಗಿ ನಿರ್ಮಲಮಾಡಿಕೊಂಡು ಕೊನೆಗೆ ಬುದ್ಧಿಯಲ್ಲಿ ಆಗುವ ಎಲ್ಲಾ ಅರಿವುಗಳಿಗೂ ಸಾಕ್ಷಿಯಾದ ಕೂಟಸ್ಥನಾದ ಆತ್ಮನಲ್ಲಿ ಆ ಬುದ್ಧಿಯನ್ನೂ ಲಯಮಾಡಿಕೊಳ್ಳಬೇಕು. ಇದನ್ನು ಅರಿಯುವ ದಾರಿಯು ಕತ್ತಿಯ ಅಲುಗಿನ ಮೇಲೆ ನಡೆಯುವಷ್ಟು ಎಚ್ಚರಿಕೆಯಿಂದ ಹೋಗತಕ್ಕದ್ದಾದ್ದರಿಂದ ವಿವೇಕದಿಂದಲೂ ಸದ್ಗುರುವಿನುಪದೇಶದಿಂದಲೂ ಇದನ್ನು ತಿಳಿದುಕೊಳ್ಳಬೇಕು. ಈ ಆತ್ಮವು ಬಲು ಸೂಕ್ಷ್ಮವಾಗಿರುವದು. ಇದಕ್ಕೆ ಶಬ್ದವಿಲ್ಲ, ಸ್ಪರ್ಶವಿಲ್ಲ, ರೂಪವಿಲ್ಲ, ರಸವಿಲ್ಲ, ಗಂಧವಿಲ್ಲ, ಆದಿಯಿಲ್ಲ, ಅಂತವಿಲ್ಲ. ಎಲ್ಲಕ್ಕೂ ದೊಡ್ಡದಾಗಿ ಅಲ್ಲಾಡದೆ, ಸವೆಯದೆ ಒಂದೇ ರೂಪದಲ್ಲಿರುವದು."

೧೬–೧೭. ನಚಿಕೇತನಿಗೆ ಯಮನು ಹೇಳಿರುವ ಈ ಉಪಾಖ್ಯಾನವನ್ನು ಯೋಗ್ಯರಿಂದ ಕೇಳಿ ಯೋಗ್ಯರಿಗೆ ಉಪದೇಶಮಾಡಿದವನಿಗೆ ಉತ್ತಮಗತಿಯಾಗುತ್ತದೆ. ಬ್ರಹ್ಮಸಭೆಯಲ್ಲಾಗಲಿ ಶ್ರಾದ್ಧಕಾಲದಲ್ಲಿಯಾಗಲಿ ಬ್ರಾಹ್ಮಣರಿಗೆ ಇದನ್ನು ಶ್ರವಣಮಾಡಿಸುವದರಿಂದ ಅನಂತಫಲವುಂಟು.

## ಎರಡನೆಯ ಅಧ್ಯಾಯ - ಒಂದನೆಯ ವಲ್ಲಿ

೧–೨. "ಇಂದ್ರಿಯಗಳಿಗೆ ಸ್ವಭಾವದಿಂದ ಹೊರನೋಟವೇ ಇರುವದು. ಆದ್ದರಿಂದ ಇಂದ್ರಿಯಗಳಿಗೆ ವಶನಾದವನು ವಿಷಯಾಸಕ್ತನಾಗುವನೇ ಹೊರತು ಒಳಗಿರುವ ಆತ್ಮನನ್ನು ನೋಡುವದಿಲ್ಲ. ಇಂದ್ರಿಯಗಳಿಂದಾಗುವ ವಿಷಯಸುಖವು ಅನಿತ್ಯವೆಂಬುದನ್ನು ತಿಳಿದುಕೊಂಡವರು ಆ ಇಂದ್ರಿಯಗಳನ್ನು ಬಿಗಿಹಿಡಿದು ಒಳಗಿನ ಆತ್ಮನನ್ನೇ ನೋಡುವರು.

೩–೧೦. "ಇಂದ್ರಿಯಗಳಿಂದ ವಿಷಯಗಳನ್ನು ತಿಳಿಯುವಾಗ ನಮಗೆ ಉಂಟಾಗುವಂತೆ ತೋರುವ ಅರಿವೇ ನಮ್ಮ ಆತ್ಮವು. ಕರ್ಮಫಲವನ್ನು ಅನುಭವಿಸುವಂತಿರುವ ನಮ್ಮ ಆತ್ಮನೂ ಕರ್ಮೋಪಾಸನೆಗಳಿಗೆ ಗುರಿಯಾಗಿರುವ ಸಮಸ್ತಜಗತ್ತಿನ ಸೃಷ್ಟಿಕರ್ತನಾದ ಈಶ್ವರನೂ ಬೇರೆಯಲ್ಲ. ಯಾವ ಸಂಸಾರವೂ ಇಲ್ಲದ ಒಬ್ಬ ಆತ್ಮನೇ ಈ ಎರಡು ಬಗೆಯಲ್ಲಿಯೂ ತೋರಿಕೊಳ್ಳುತ್ತಿರುವನು.

೧೧–೧೫. "ನಮ್ಮ ಆತ್ಮನು ಅಳತೆಗೆ ಕಟ್ಟುಬಿದ್ದಿರುವಂತೆ ಅವಿದ್ಯೆಯ ದೃಷ್ಟಿಯಿಂದ ಕಾಣುತ್ತಿದ್ದರೂ ಸರಿಯಾಗಿ ನೋಡಿದರೆ ಇವನೇ ಅನಂತವಾದ ಬ್ರಹ್ಮವಾಗಿರುವನು. ಇವನಲ್ಲಿ ಭೇದವನ್ನು ಕಂಡಾತನಿಗೆ ಸಂಸಾರವೂ ಅಭೇದವನ್ನು ಕಂಡಾತನಿಗೆ ಬ್ರಹ್ಮಸಾಯುಜ್ಯವೂ ದೊರೆಯುವವು.

## ಎರಡನೆಯ ಅಧ್ಯಾಯ - ಎರಡನೆಯ ವಲ್ಲಿ

೧–೨. ಈ ನಮ್ಮ ಶರೀರದಲ್ಲಿರುವ ಆತ್ಮನೇ ಬ್ರಹ್ಮವಾದ್ದರಿಂದ ಇವನ ಸ್ವರೂಪವನ್ನು ಪಡೆದರೆ ಸಂಸಾರದ ಕಟ್ಟು ಕಳಚಿಕೊಳ್ಳುವದು. ಮುಂದಕ್ಕೆಂದಿಗೂ ಸಂಸಾರದಲ್ಲಿ ಕಾಲಿಡದೆ ಇರುವನು. ಎಲ್ಲಾ ಶರೀರಗಳಲ್ಲಿಯೂ ಈ ಒಬ್ಬ ಆತ್ಮನೇ ಇರುವನೆಂದು ತಿಳಿಯಬೇಕು

೩–೭. ಇಂದ್ರಿಯಗಳ ಕಾರ್ಯವೂ ಪ್ರಾಣವೃತ್ತಿಗಳೂ ಈ ಆತ್ಮನಿಗಾಗಿಯೇ ನಡೆಯುತ್ತಿರುವವು, ಈ ಆತ್ಮನೇ ಕಾರ್ಯಕಾರಣಗಳಿಗೆಲ್ಲ ಬಲವನ್ನು ಕೊಟ್ಟಿರುವನು ಇವನಿಂದಲೇ ಪ್ರೇರಿತವಾಗಿ ಅವು ಒಂದರೊಡನೊಂದು ಸೇರಿ ಕೆಲಸಮಾಡುತ್ತಿರುವವು. ಹೀಗೆ ನಾನಾವಿಧದಿಂದ ಸಿದ್ಧವಾಗಿರುವ ಆತ್ಮನನ್ನು ಬ್ರಹ್ಮವೆಂದು ಅರಿಯಬೇಕು. ಇಲ್ಲದಿದ್ದರೆ ಅಂಥವನಿಗೆ ಸ್ಥಾವರಜಂಗಮರೂಪ ಶರೀರವನ್ನು ಪಡೆಯುತ್ತಿರುವದೇ ಗತಿ.

೮–೧೧. „ಇಂದ್ರಿಯಾದಿಗಳು ತಮ್ಮ ಕಾರ್ಯವನ್ನು ಮಾಡದೆ ಇರುವ ಕನಸಿನಲ್ಲಿಯೂ ಈ ಆತ್ಮನು ತನ್ನ ಇಚ್ಛೆಯಿಂದ ವಸ್ತುಗಳನ್ನು ನಿರ್ಮಿಸಿಕೊಂಡು ಇರುವನು. ಇವನೇ ಬ್ರಹ್ಮವು. ಸಮಸ್ತ ಲೋಕಗಳೂ ಇವನನ್ನೇ ಆಶ್ರಯಿಸಿಕೊಂಡಿರುವವು. ಇವನನ್ನು ಮೀರಿ ಯಾವನೂ ಇರಲಾರನು. ಬೆಂಕಿಯು ತಾನು ಸುಡುವ ಕಟ್ಟಿಗೆಯೇ ಮುಂತಾದವುಗಳನ್ನು ಹೊಕ್ಕು ಆಯಾ ಆಕಾರಗಳನ್ನು ಹೊಂದುವಂತೆಯೂ ವಾಯುವು ಕೊಳಲೇ ಮುಂತಾದವುಗಳಲ್ಲಿ ಹೊಕ್ಕು ಬೇರೆ ಬೇರೆ ರೂಪವನ್ನು ಹೊಂದುವಂತೆಯೂ ಕಂಡರೂ ಅವು ತಮ್ಮ ರೂಪದಿಂದ ಶುದ್ಧವಾಗಿ ಬೇರೆ ಇದ್ದುಕೊಂಡೇ ಇರುವಂತೆ ಆತ್ಮನು ಎಲ್ಲಾ ಶರೀರಗಳಲ್ಲಿಯೂ ಬೇರೆ ಬೇರೆಯಾಗಿ ಭೋಕ್ತೃವಾಗಿ ಕಾಣುತ್ತಿದ್ದರೂ ನಿಜವಾಗಿ ತಾನು ಆ ಶರೀರಗಳಿಗಿಂತ ಬೇರೆಯಾಗಿಯೇ ತನ್ನ ಶುದ್ಧವಾದ ರೂಪದಲ್ಲಿ ಇರುತ್ತಿರುವನು. ಸೂರ್ಯನು ಎಲ್ಲಾ ಪದಾರ್ಥಗಳನ್ನೂ ಬೆಳಗುತ್ತಿದ್ದರೂ ಆಯಾ ವಸ್ತುಗಳನ್ನು ನೋಡಿದ ಪುಣ್ಯಾಪುಣ್ಯಗಳಿಗೆ ಹೊರಚ್ಚಾಗಿರುವಂತೆಯೇ ಈ ಆತ್ಮನು ಎಲ್ಲರ ಅಂತರಾತ್ಮನಾಗಿರುತ್ತಿದ್ದರೂ ಅವಿದ್ಯೆಯಿಂದ ಜೀವರು ಕಲ್ಪಿಸಿಕೊಳ್ಳುತ್ತಿರುವ ಸಂಸಾರದೋಷಗಳಿಗೆ ಹೊರಚ್ಚಾಗಿಯೇ ಇರುವನು.

೧೨–೧೩ „ಹೀಗೆ ಎಲ್ಲಾ ಶರೀರಗಳಲ್ಲಿಯೂ ಒಬ್ಬನೇ ಆತ್ಮನು ಕಾರ್ಯಕಾರಣಗಳಿಗೆಲ್ಲಾ ಚೇತನನಾಗಿ ಅವುಗಳನ್ನು ಆಯಾ ಕರ್ಮಗಳಿಗೆ ಪ್ರೇರಿಸುತ್ತಾ ಫಲದಾತೃವಾಗಿರುತ್ತಿದ್ದರೂ ತಾನು ಯಾವ ವಿಕಾರವೂ ಇಲ್ಲದೆ ತನ್ನ ನಿತ್ಯಶುದ್ಧಸ್ವರೂಪದಲ್ಲಿಯೇ ಇರುವನೆಂದು ಯಾರು ಗುರುವಿನ ಉಪದೇಶವನ್ನು ಹೊಂದಿ ಅರಿತುಕೊಳ್ಳುವರೋ ಅವರಿಗೆ ಮಾತ್ರ ಶಾಶ್ವತಸುಖವಾದ ಮೋಕ್ಷವು ದಕ್ಕುವದು.

೧೪–೧೫. „ ಈ ಆತ್ಮವಸ್ತು ನಮ್ಮಂಥ ಅಜ್ಞರಿಗೆ ತೋರೀತೆ ಎಂದು ಸಂದೇಹಪಡಲು ಕಾರಣವಿಲ್ಲ ಅದು ಸ್ವಪ್ರಕಾಶವಾದ ನಮ್ಮ ಸ್ವರೂಪವೇ ಆಗಿದೆ.

## ಎರಡನೆಯ ಅಧ್ಯಾಯ - ಮೂರನೆಯ ವಲ್ಲಿ

೧–೪. „ ಅನಾದಿಯಾಗಿ ಅನಂತವಾಗಿರುವಂತೆ ತೋರುತ್ತಿರುವ ಈ ಸಂಸಾರವೆಂಬ ವೃಕ್ಷಕ್ಕೆ ಬೇರಿನಂತೆ ಆಧಾರವಾಗಿರುವದೇ ಬ್ರಹ್ಮವು. ಅದರ ಕಟ್ಟಲೆಯಿಂದಲೋ ಎಂಬಂತೆ ಸೂರ್ಯ, ಚಂದ್ರ, ಅಗ್ನಿ, ವಾಯು- ಮುಂತಾದವುಗಳು ವ್ಯವಸ್ಥೆಯಿಂದ ಕೆಲಸಮಾಡುತ್ತಿರುವವು.

೫. „ ಸರಿಯಾಗಿ ವಿಚಾರಮಾಡಿದರೆ ನಮ್ಮ ಅಂತಃಕರಣದಲ್ಲಿಯೇ ಆತ್ಮನ ನಿಜವು ಸ್ಫುಟ

ನಾಗಿ ತೋರುವದು; ಲೋಕಾಂತರದಲ್ಲಿ ಇಷ್ಟು ಸ್ಪಷ್ಟವಾಗಿ ತೋರುವದಿಲ್ಲ, ಬ್ರಹ್ಮಲೋಕದಲ್ಲಿ ಚೆನ್ನಾಗಿ ಕಾಣುವದೆಂದು ಶಾಸ್ತ್ರಗಳಲ್ಲಿ ಹೇಳಿದೆ ನಿಜ, ಆದರೆ ಆ ಲೋಕವನ್ನು ಉತ್ಕೃಷ್ಟವಾದ ಕರ್ಮೋಪಾಸನೆಗಳಿಂದ ಪಡೆಯಬೇಕಾಗಿರುವದರಿಂದ ಅದು ಸಿಕ್ಕುವದು ತುಂಬ ಕಷ್ಟವೆ. ಆದ್ದರಿಂದ ಈ ಲೋಕದಲ್ಲಿಯೇ ಆತ್ಮತತ್ತ್ವವನ್ನು ತಿಳಿದುಕೊಳ್ಳಬೇಕು.

೬-೧೧. "ಇಂದ್ರಿಯಾದಿಗಳಲ್ಲಿ ಜ್ಞಾನವುಂಟಾಗಲಿ ಹೋಗಲಿ, ಆತ್ಮನು ತನ್ನ ಸ್ವರೂಪದಿಂದಲೇ ಇರುವನೆಂತಲೂ ಇಂದ್ರಿಯ, ಮನಸ್ಸು, ಬುದ್ಧಿ, ಅಹಂಕಾರ- ಮುಂತಾದವುಗಳನ್ನೆಲ್ಲ ಮೀರಿ ಯಾವ ಸಂಸಾರಧರ್ಮವೂ ಇಲ್ಲದವನಾಗಿರುವನೆಂತಲೂ ಅರಿತುಕೊಂಡಾತನು ಮೋಕ್ಷವನ್ನು ಹೊಂದುವನು. ಈ ಆತ್ಮನನ್ನು ಇಂದ್ರಿಯದಿಂದ ನೋಡುವದಕ್ಕೆ ಆಗುವದಿಲ್ಲ. ಮನಸ್ಸಿನಲ್ಲಿಯೇ ವಿಚಾರ ಮಾಡಿ ಅರಿತುಕೊಳ್ಳಬೇಕು. ಇಂದ್ರಿಯಾದಿಗಳ ವ್ಯಾಪಾರವಿಲ್ಲದಂತೆ ಅವುಗಳನ್ನು ನಿಲ್ಲಿಸಿಕೊಳ್ಳುವ ಅವಸ್ಥೆಗೆ ಯೋಗವೆಂದು ಹೆಸರು, ಆ ಅವಸ್ಥೆಯಲ್ಲಿ ಆತ್ಮನು ತನ್ನ ಸ್ವರೂಪದಲ್ಲಿಯೇ ಇರುವನು ಆದ್ದರಿಂದ ಅಂಥ ಯೋಗವನ್ನು ಅಭ್ಯಾಸಮಾಡುವದು ಆತ್ಮಜ್ಞಾನಕ್ಕೆ ಸಾಧಕವಾಗಿರುವದು.

೧೨-೧೬. " ಆತ್ಮನು ಇಂದ್ರಿಯಗಳಿಗಾಗಲಿ ಮನಸ್ಸಿಗಾಗಲಿ ಗೋಚರವಾಗುವನಲ್ಲವಾದರೂ ಸಮಸ್ತಜಗತ್ತಿಗೂ ಆಧಾರನಾಗಿರುವದರಿಂದ ಅವನು ಇದಾನೆಂಬುದೇ ಸರಿಯಾದ ತಿಳಿವಳಿಕೆ; ಅವನು ಇರುವದರಿಂದಲೇ ಈ ಜಗತ್ತೆಲ್ಲ 'ಇದೆ' ಎಂಬ ಅರಿವಿಗೆ ಗೋಚರವಾಗುತ್ತದೆ ಆದರೆ 'ಇದೆ' ಎಂಬುದೂ ಒಂದು ಉಪಾಧಿಯಿಂದ ತಿಳಿದ ಸ್ವರೂಪವು; ಆದ್ದರಿಂದ ಯಾವ ಉಪಾಧಿಯೂ ಇಲ್ಲದಿರುವ ಆತ್ಮನನ್ನು ಇರುವನೆಂದಾಗಲಿ ಇಲ್ಲವೆಂದಾಗಲಿ ಹೇಳುವದಕ್ಕಿಲ್ಲ ಇರುವಿಕೆಯೇ ಮುಂತಾದ ಯಾವ ವಿಶೇಷವೂ ಆತ್ಮನಲ್ಲಿಲ್ಲವೆಂಬುದೇ ಸರಿಯಾದ ತಿಳಿವು. ನಮ್ಮ ಬುದ್ಧಿಯಲ್ಲಿ ಗಂಟುಹಾಕಿಕೊಂಡಿರುವ ತಪ್ಪುತಿಳಿವುಗಳೆಲ್ಲ ಹೋದರೆ, ಆ ತಪ್ಪುತಿಳಿವಿನಿಂದಾಗಿರುವ ನಮ್ಮ ಕಾಮಗಳೆಲ್ಲ ತೊಲಗುವವು, ಕಾಮಗಳೆಲ್ಲ ಹೋದರೆ ಕಾಮದಿಂದಾಗಿರುವ ಜನನಮರಣ ಸಂಸಾರವೂ ಹೋಗಿ ನಾಶವಿಲ್ಲದ ಬ್ರಹ್ಮಸ್ವರೂಪವೇ ಪ್ರಾಪ್ತಿಯಾಗುವದು ಈ ಲೋಕದಲ್ಲಿಯೇ ಈ ಸ್ವರೂಪವನ್ನು ಕಂಡುಕೊಳ್ಳಬಹುದು. ಆದರೆ ಬ್ರಹ್ಮೋಪಾಸನೆಮಾಡಿದವರು ಉಪಾಸನೆಯ ಬಲದಿಂದ ಸುಷುಮ್ನಾನಾಡಿಯ ಮಾರ್ಗವಾಗಿ ಬ್ರಹ್ಮಲೋಕಕ್ಕೆ ಹೋಗಿ ಬಹುಕಾಲವಿರುವ ಅಮೃತತ್ವವನ್ನು ಪಡೆಯುವರು; ಅಲ್ಲಿಯೂ ಜ್ಞಾನವನ್ನು ಹೊಂದಿದರೆ ಮಾತ್ರ ಮುಖ್ಯವಾದ ಮುಕ್ತಿಯನ್ನು ಹೊಂದುವದಕ್ಕಾಗುತ್ತದೆ. ಆದ್ದರಿಂದ ಇಲ್ಲಿಯೇ ಜ್ಞಾನದಿಂದ ಮುಕ್ತರಾಗಲು ಯತ್ನಿಸಬೇಕು

೧೭-೧೮. ಒಟ್ಟು ಸಾರಾಂಶವೇನೆಂದರೆ, ಜನರ ಹೃದಯದಲ್ಲಿರುವ ಆತ್ಮನ ಸ್ವರೂಪವು ಈಗ ಸಂಸಾರಿಯಾದ ಸಣ್ಣ ಆತ್ಮನೆಂದು ತೋರುತ್ತಿದ್ದರೂ ಚೆನ್ನಾಗಿ ಅನಾತ್ಮಗಳಿಂದ ಬಿಡಿಸಿ ತಿಳಿದುಕೊಂಡರೆ ಅದೇ ಆತ್ಮನೇ ಸಹಜವಾಗಿ ನಿತ್ಯಶುದ್ಧವಾಗಿ ಯಾವ ಸಂಸಾರಧರ್ಮವೂ ಇಲ್ಲದ ಬ್ರಹ್ಮವೆಂದು ಗೊತ್ತಾಗುತ್ತದೆ ಮೃತ್ಯುವು ಉಪದೇಶಿಸಿರುವ ಈ ಬ್ರಹ್ಮವಿದ್ಯೆಯನ್ನೂ ಯೋಗಮಾರ್ಗವನ್ನೂ ಅರಿತು ನಚಿಕೇತನು ಬ್ರಹ್ಮವನ್ನು ಪಡೆದು ಪರಿಶುದ್ಧವಾದ ಸಂಸಾರವರ್ಜಿತವಾದ ಬ್ರಹ್ಮವಾದನು ಇದರಂತೆ ಯಾರು ಯಾರು ಈ ವಿದ್ಯೆಯನ್ನು ತಿಳಿದುಕೊಳ್ಳುವರೋ ಅವರೆಲ್ಲ ಅಂಥ ಬ್ರಹ್ಮಸ್ವರೂಪವನ್ನೇ ಪಡೆಯುವರು.

———o———

# ಕಾಠಕೋಪನಿಷತ್ತು

(ಸಂಸ್ಕೃತಮೂಲ)

* ಓಂ। ಸಹನಾವವತು। ಸಹ ನೌ ಭುನಕ್ತು। ಸಹ ವೀರ್ಯಂ ಕರವಾವಹೈ। ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವಹೈ ॥ ಓಂ ಶಾನ್ತಿಃ ಶಾನ್ತಿಃ ಶಾನ್ತಿಃ ॥

## ಅಥ ಪ್ರಥಮಾಧ್ಯಾಯೇ ಪ್ರಥಮಾ ವಲ್ಲೀ

ಓಂ। ಉಶನ್ಹವೈ ವಾಜಶ್ರವಸಃ ಸರ್ವವೇದಸಂ ದದೌ। ತಸ್ಯ ಹ ನಚಿಕೇತಾ ನಾಮ ಪುತ್ರ ಆಸ ॥ ೧ ॥

ತಗ್ಂ ಹ ಕುಮಾರಗ್ಂ ಸನ್ತಂ ದಕ್ಷಿಣಾಸು ನೀಯಮಾನಾಸು ಶ್ರದ್ಧಾವಿವೇಶ ಸೋಽಮನ್ಯತ ॥ ೨ ॥

ಪೀತೋದಕಾ ಜಗ್ಧತೃಣಾ ದುಗ್ಧದೋಹಾ ನಿರಿನ್ದ್ರಿಯಾಃ ।
ಅನನ್ದಾ ನಾಮ ತೇ ಲೋಕಾಸ್ತಾನ್ ಸ ಗಚ್ಛತಿ ತಾ ದದತ್ ॥ ೩ ॥

ಸ ಹೋವಾಚ ಪಿತರಂ ತತ ಕಸ್ಮೈ ಮಾಂ ದಾಸ್ಯಸೀತಿ ।
ದ್ವಿತೀಯಂ ತೃತೀಯಂ ತಗ್ಂ ಹೋವಾಚ ಮೃತ್ಯವೇ ತ್ವಾ ದದಾಮೀತಿ ॥ ೪ ॥

ಬಹೂನಾಮೇಮಿ ಪ್ರಥಮೋ ಬಹೂನಾಮೇಮಿ ಮಧ್ಯಮಃ ।
ಕಿಗ್ಂ ಸ್ವಿದ್ಯಮಸ್ಯ ಕರ್ತವ್ಯಂ ಯನ್ಮಯಾದ್ಯ ಕರಿಷ್ಯತಿ ॥ ೫ ॥

ಅನುಪಶ್ಯ ಯಥಾ ಪೂರ್ವೇ ಪ್ರತಿಪಶ್ಯ ತಥಾ ಪರೇ
ಸಸ್ಯಮಿವ ಮರ್ತ್ಯಃ ಪಚ್ಯತೇ ಸಸ್ಯಮಿವಾಜಾಯತೇ ಪುನಃ ॥ ೬ ॥

ವೈಶ್ವಾನರಃ ಪ್ರವಿಶತ್ಯತಿಥಿರ್ಬ್ರಾಹ್ಮಣೋ ಗೃಹಾನ್ ।
ತಸ್ಯೈತಾಗ್ಂ ಶಾನ್ತಿಂ ಕುರ್ವನ್ತಿ ಹರ ವೈವಸ್ವತೋದಕಮ್ ॥ ೭ ॥

ಆಶಾಪ್ರತೀಕ್ಷೇ ಸಂಗತಗ್ಂ ಸೂನೃತಾಂ ಚೇಷ್ಟಾಪೂರ್ತೇ ಪುತ್ರಪಶೂಗ್ಂಶ್ಚ ಸರ್ವಾನ್ । ಏತದ್ವೃಙ್ಕ್ತೇ ಪುರುಷಸ್ಯಾಲ್ಪಮೇಧಸೋ ಯಸ್ಯಾನಶ್ನನ್ವಸತಿ ಬ್ರಾಹ್ಮಣೋ ಗೃಹೇ ॥ ೮ ॥

ತಿಸ್ರೋ ರಾತ್ರೀರ್ಯದವಾತ್ಸೀರ್ಗೃಹೇ ಮೇಽನಶ್ನನ್ಬ್ರಹ್ಮನ್ನತಿಥಿರ್ನಮಸ್ಯಃ। ನಮಸ್ತೇಽಸ್ತು ಬ್ರಹ್ಮನ್ ಸ್ವಸ್ತಿ ಮೇಽಸ್ತು ತಸ್ಮಾತ್ಪ್ರತಿ ತ್ರೀನ್ವರಾನ್ವೃಣೀಷ್ವ ॥ ೯ ॥

ಶಾನ್ತಸಙ್ಕಲ್ಪಃ ಸುಮನಾ ಯಥಾ ಸ್ಯಾದ್ವೀತಮನ್ಯುರ್ಗೌತಮೋ ಮಾಭಿ ಮೃತ್ಯೋ । ತ್ವತ್ಪ್ರಸೃಷ್ಟಂ ಮಾಭಿವದೇತ್ಪ್ರತೀತ ಏತತ್ತ್ರಯಾಣಾಂ ಪ್ರಥಮಂ ವರಂ ವೃಣೇ ॥ ೧೦ ॥

---

* ಕೆಲವು ಪುಸ್ತಕಗಳಲ್ಲಿ 'ಸಹ ನಾವಿತಿ ಶಾನ್ತಿಃ' ಎಂದಿಷ್ಟೇ ಇದೆ.

ಯಥಾ ಪುರಸ್ತಾದ್ಭವಿತಾ ಪ್ರತೀತ ಔದ್ದಾಲಕಿರಾರುಣಿರ್ಮತ್ಪ್ರಸೃಷ್ಟಃ । ಸುಖಗ್ಂ ರಾತ್ರೀಃ ಶಯಿತಾ ವೀತಮನ್ಯುಸ್ತ್ವಾಂ ದದೃಶಿವಾನ್ಮೃತ್ಯುಮುಖಾತ್ಪ್ರಮುಕ್ತಮ್ ॥ ೧೧ ॥

ಸ್ವರ್ಗೇ ಲೋಕೇ ನ ಭಯಂ ಕಿಂಚನಾಸ್ತಿ ನ ತತ್ರ ತ್ವಂ ನ ಜರಯಾ ಬಿಭೇತಿ । ಉಭೇ ತೀರ್ತ್ವಾಶನಾಯಾಪಿಪಾಸೇ ಶೋಕಾತಿಗೋ ಮೋದತೇ ಸ್ವರ್ಗಲೋಕೇ ॥ ೧೨ ॥

ಸ ತ್ವಮಗ್ನಿಗ್ಂ ಸ್ವರ್ಗ್ಯಮಧ್ಯೇಷಿ ಮೃತ್ಯೋ ಪ್ರಬ್ರೂಹಿ ತಗ್ಂ ಶ್ರದ್ದಧಾನಾಯ ಮಹ್ಯಮ್ । ಸ್ವರ್ಗಲೋಕಾ ಅಮೃತತ್ವಂ ಭಜನ್ತ ಏತದ್ದ್ವಿತೀಯೇನ ವೃಣೇ ವರೇಣ ॥ ೧೩ ॥

ಪ್ರ ತೇ ಬ್ರವೀಮಿ ತದು ಮೇ ನಿಬೋಧ ಸ್ವರ್ಗ್ಯಮಗ್ನಿಂ ನಚಿಕೇತಃ ಪ್ರಜಾನನ್ । ಅನನ್ತಲೋಕಾಪ್ತಿಮಥೋ ಪ್ರತಿಷ್ಠಾಂ ವಿದ್ಧಿ ತ್ವಮೇತಂ ನಿಹಿತಂ ಗುಹಾಯಾಮ್ ॥ ೧೪ ॥

ಲೋಕಾದಿಮಗ್ನಿಂ ತಮುವಾಚ ತಸ್ಮೈ ಯಾ ಇಷ್ಟಕಾ ಯಾವತೀರ್ವಾ ಯಥಾ ವಾ । ಸ ಚಾಪಿ ತತ್ಪ್ರತ್ಯವದದ್ಯಥೋಕ್ತಮಥಾಸ್ಯ ಮೃತ್ಯುಃ ಪುನರೇವಾಹ ತುಷ್ಟಃ ॥ ೧೫ ॥

ತಮಬ್ರವೀತ್ಪ್ರೀಯಮಾಣೋ ಮಹಾತ್ಮಾ ವರಂ ತವೇಹಾದ್ಯ ದದಾಮಿ ಭೂಯಃ । ತವೈವ ನಾಮ್ನಾ ಭವಿತಾಯಮಗ್ನಿಃ ಸೃಙ್ಕಾಂ ಚೇಮಾಮನೇಕರೂಪಾಂ ಗೃಹಾಣ ॥ ೧೬ ॥

ತ್ರಿಣಾಚಿಕೇತಸ್ತ್ರಿಭಿರೇತ್ಯ ಸನ್ಧಿಂ ತ್ರಿಕರ್ಮಕೃತ್ತರತಿ ಜನ್ಮಮೃತ್ಯೂ । ಬ್ರಹ್ಮಜಜ್ಞಂ ದೇವಮೀಡ್ಯಂ ವಿದಿತ್ವಾ ನಿಚಾಯ್ಯೇಮಾಗ್ಂ ಶಾನ್ತಿಮತ್ಯನ್ತಮೇತಿ ॥ ೧೭ ॥

ತ್ರಿಣಾಚಿಕೇತಸ್ತ್ರಯಮೇತದ್ವಿದಿತ್ವಾ ಯ ಏವಂ ವಿದ್ವಾಂಶ್ಚಿನುತೇ ನಾಚಿಕೇತಮ್ । ಸ ಮೃತ್ಯುಪಾಶಾನ್ ಪುರತಃ ಪ್ರಣೋದ್ಯ ಶೋಕಾತಿಗೋ ಮೋದತೇ ಸ್ವರ್ಗಲೋಕೇ ॥ ೧೮ ॥

ಏಷ ತೇಽಗ್ನಿರ್ನಚಿಕೇತಃ ಸ್ವರ್ಗ್ಯೋ ಯಮವೃಣೀಥಾ ದ್ವಿತೀಯೇನ ವರೇಣ । ಏತಮಗ್ನಿಂ ತವೈವ ಪ್ರವಕ್ಷ್ಯನ್ತಿ ಜನಾಸಸ್ತೃತೀಯಂ ವರಂ ನಚಿಕೇತೋ ವೃಣೀಷ್ವ ॥ ೧೯ ॥

ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇಽಸ್ತೀತ್ಯೇಕೇ ನಾಯಮಸ್ತೀತಿ ಚೈಕೇ । ಏತದ್ವಿದ್ಯಾಮನುಶಿಷ್ಟಸ್ತ್ವಯಾಹಂ ವರಾಣಾಮೇಷ ವರಸ್ತೃತೀಯಃ ॥

ದೇವೈರತ್ರಾಪಿ ವಿಚಿಕಿತ್ಸಿತಂ ಪುರಾ ನ ಹಿ ಸುವಿಜ್ಞೇಯಮಣುರೇಷ ಧರ್ಮಃ । ಅನ್ಯಂ ವರಂ ನಚಿಕೇತೋ ವೃಣೀಷ್ವ ಮಾ ಮೋಪರೋತ್ಸೀರತಿ ಮಾ ಸೃಜೈನಮ್ ॥ ೨೧ ॥

ದೇವೈರತ್ರಾಪಿ ವಿಚಿಕಿತ್ಸಿತಂ ಕಿಲ ತ್ವಂ ಚ ಮೃತ್ಯೋ ಯನ್ನ ಸುಜ್ಞೇಯಮಾತ್ಥ । ವಕ್ತಾ ಚಾಸ್ಯ ತ್ವಾದೃಗನ್ಯೋ ನ ಲಭ್ಯೋ ನಾನ್ಯೋ ವರಸ್ತುಲ್ಯ ಏತಸ್ಯ ಕಶ್ಚಿತ್ ॥ ೨೨ ॥

ಶತಾಯುಷಃ ಪುತ್ರಪೌತ್ರಾನ್ ವೃಣೀಷ್ವ ಬಹೂನ್ಪಶೂನ್ಹಸ್ತಿಹಿರಣ್ಯಮಶ್ವಾನ್ । ಭೂಮೇರ್ಮಹದಾಯತನಂ ವೃಣೀಷ್ವ ಸ್ವಯಂ ಚ ಜೀವ ಶರದೋ ಯಾವದಿಚ್ಛಸಿ ॥ ೨೩ ॥

ಏತತ್ತುಲ್ಯಂ ಯದಿ ಮನ್ಯಸೇ ವರಂ ವೃಣೀಷ್ವ ವಿತ್ತಂ ಚಿರಜೀವಿಕಾಂ ಚ । ಮಹಾಭೂಮೌ ನಚಿಕೇತಸ್ತ್ವಮೇಧಿ ಕಾಮಾನಾಂ ತ್ವಾ ಕಾಮಭಾಜಂ ಕರೋಮಿ ॥ ೨೪ ॥

ಯೇ ಯೇ ಕಾಮಾಃ ದುರ್ಲಭಾ ಮರ್ತ್ಯಲೋಕೇ ಸರ್ವಾನ್ಕಾಮಾಗ್ಂ ಶ್ಛನ್ದತಃ ಪ್ರಾರ್ಥಯಸ್ವ । ಇಮಾ ರಾಮಾಃ ಸರಥಾಃ ಸತೂರ್ಯಾ ನ ಹೀದೃಶಾ ಲಮ್ಭನೀಯಾ ಮನುಷ್ಯೈಃ । ಆಭಿರ್ಮತ್ಪ್ರತ್ತಾಭಿಃ ಪರಿಚಾರಯಸ್ವ ನಚಿಕೇತೋ ಮರಣಂ ಮಾನುಪ್ರಾಕ್ಷೀಃ ॥ ೨೫ ॥

ಶ್ವೋಭಾವಾ ಮರ್ತ್ಯಸ್ಯ ಯದನ್ತಕೈತತ್ಸರ್ವೇನ್ದ್ರಿಯಾಣಾಂ ಜರಯನ್ತಿ ತೇಜಃ । ಅಪಿ ಸರ್ವಂ ಜೀವಿತಮಲ್ಪಮೇವ ತವೈವ ವಾಹಾಸ್ತವ ನೃತ್ಯಗೀತೇ ॥

ನ ವಿತ್ತೇನ ತರ್ಪಣೀಯೋ ಮನುಷ್ಯೋ ಲಪ್ಸ್ಯಾಮಹೇ ವಿತ್ತಮದ್ರಾಕ್ಷ್ಮ ಚೇತ್ತ್ವಾ । ಜೀವಿಷ್ಯಾಮೋ ಯಾವದೀಶಿಷ್ಯಸಿ ತ್ವಂ ವರಸ್ತು ಮೇ ವರಣೀಯಃ ಸ ಏವ ॥ ೨೭ ॥

ಅಜೀರ್ಯತಾಮಮೃತಾನಾಮುಪೇತ್ಯ ಜೀರ್ಯನ್ಮರ್ತ್ಯಃ ಕ್ವಧಃಸ್ಥಃ ಪ್ರಜಾನನ್ । ಅಭಿಧ್ಯಾಯನ್ವರ್ಣರತಿಪ್ರಮೋದಾನತಿದೀರ್ಘೇ ಜೀವಿತೇ ಕೋ ರಮೇತ ॥ ೨೮ ॥

ಯಸ್ಮಿನ್ನಿದಂ ವಿಚಿಕಿತ್ಸನ್ತಿ ಮೃತ್ಯೋ ಯತ್ಸಾಂಪರಾಯೇ ಮಹತಿ ಬ್ರೂಹಿ ನಸ್ತತ್ । ಯೋಽಯಂ ವರೋ ಗೂಢಮನುಪ್ರವಿಷ್ಟೋ ನಾನ್ಯಂ ತಸ್ಮಾನ್ನಚಿಕೇತಾ ವೃಣೀತೇ ॥ ೨೯ ॥

ಇತಿ ಕಾಠಕೋಪನಿಷದಿ ಪ್ರಥಮಾಧ್ಯಾಯೇ ಪ್ರಥಮಾ ವಲ್ಲೀ

## ಅಥ ದ್ವಿತೀಯಾ ವಲ್ಲೀ

ಅನ್ಯಚ್ಛ್ರೇಯೋಽನ್ಯದುತೈವ ಪ್ರೇಯಸ್ತೇ ಉಭೇ ನಾನಾರ್ಥೇ ಪುರುಷಗ್ಂ ಸಿನೀತಃ । ತಯೋಃ ಶ್ರೇಯ ಆದದಾನಸ್ಯ ಸಾಧು ಭವತಿ ಹೀಯತೇಽರ್ಥಾದ್ಯ ಉ ಪ್ರೇಯೋ ವೃಣೀತೇ ॥ ೧ ॥

ಶ್ರೇಯಶ್ಚ ಪ್ರೇಯಶ್ಚ ಮನುಷ್ಯಮೇತಸ್ತೌ ಸಂಪರೀತ್ಯ ವಿವಿನಕ್ತಿ ಧೀರಃ । ಶ್ರೇಯೋ ಹಿ ಧೀರೋಽಭಿಪ್ರೇಯಸೋ ವೃಣೀತೇ ಪ್ರೇಯೋ ಮನ್ದೋ ಯೋಗಕ್ಷೇಮಾದ್ವೃಣೀತೇ ॥ ೨ ॥

ಸ ತ್ವಂ ಪ್ರಿಯಾನ್ಪ್ರಿಯರೂಪಾಗ್‌ಂಶ್ಚ ಕಾಮಾನಭಿಧ್ಯಾಯನ್ನಚಿಕೇತೋಽತ್ಯಸ್ರಾಕ್ಷೀಃ । ನೈತಾಗ್‌ಂ ಸೃಙ್ಕಾಂ ವಿತ್ತಮಯೀಮವಾಪ್ತೋ ಯಸ್ಯಾಂ ಮಜ್ಜನ್ತಿ ಬಹವೋ ಮನುಷ್ಯಾಃ ॥ ೩ ॥

ದೂರಮೇತೇ ವಿಪರೀತೇ ವಿಷೂಚೀ ಅವಿದ್ಯಾ ಯಾ ಚ ವಿದ್ಯೇತಿ ಜ್ಞಾತಾ । ವಿದ್ಯಾಭೀಪ್ಸಿನಂ ನಚಿಕೇತಸಂ ಮನ್ಯೇ ನ ತ್ವಾ ಕಾಮಾ ಬಹವೋಽಲೋಲುಪನ್ತ ॥

ಅವಿದ್ಯಾಯಾಮನ್ತರೇ ವರ್ತಮಾನಾಃ ಸ್ವಯಂ ಧೀರಾಃ ಪಣ್ಡಿತಮ್ಮನ್ಯಮಾನಾಃ । ದನ್ದ್ರಮ್ಯಮಾಣಾಃ ಪರಿಯನ್ತಿ ಮೂಢಾ ಅನ್ಧೇನೈವ ನೀಯಮಾನಾ ಯಥಾನ್ಧಾಃ ॥ ೫ ॥

ನ ಸಾಮ್ಪರಾಯಃ ಪ್ರತಿಭಾತಿ ಬಾಲಂ ಪ್ರಮಾದ್ಯನ್ತಂ ವಿತ್ತಮೋಹೇನ ಮೂಢಮ್ । ಅಯಂ ಲೋಕೋ ನಾಸ್ತಿ ಪರ ಇತಿ ಮಾನೀ ಪುನಃ ಪುನರ್ವಶಮಾಪದ್ಯತೇ ಮೇ ॥ ೬ ॥

ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ ಶೃಣ್ವನ್ತೋಽಪಿ ಬಹವೋ ಯಂ ನ ವಿದ್ಯುಃ । ಆಶ್ಚರ್ಯೋ ವಕ್ತಾ ಕುಶಲೋಽಸ್ಯ ಲಬ್ಧಾಶ್ಚರ್ಯೋ ಜ್ಞಾತಾ ಕುಶಲಾನುಶಿಷ್ಟಃ ॥ ೭ ॥

ನ ನರೇಣಾವರೇಣ ಪ್ರೋಕ್ತ ಏಷ ಸುವಿಜ್ಞೇಯೋ ಬಹುಧಾ ಚಿನ್ತ್ಯಮಾನಃ । ಅನನ್ಯಪ್ರೋಕ್ತೇ ಗತಿರತ್ರ ನಾಸ್ತ್ಯಣೀಯಾನ್ಹ್ಯತರ್ಕ್ಯಮಣುಪ್ರಮಾಣಾತ್ ॥ ೮ ॥

ನೈಷಾ ತರ್ಕೇಣ ಮತಿರಾಪನೇಯಾ ಪ್ರೋಕ್ತಾನ್ಯೇನೈವ ಸುಜ್ಞಾನಾಯ ಪ್ರೇಷ್ಠ । ಯಾಂ ತ್ವಮಾಪಃ ಸತ್ಯಧೃತಿರ್ಬತಾಸಿ ತ್ವಾದೃಙ್ನೋ ಭೂಯಾನ್ನಚಿಕೇತಃ ಪ್ರಷ್ಟಾ ॥ ೯ ॥

ಜಾನಾಮ್ಯಹಗ್‌ಂ ಶೇವಧಿರಿತ್ಯನಿತ್ಯಂ ನ ಹ್ಯಧ್ರುವೈಃ ಪ್ರಾಪ್ಯತೇ ಹಿ ಧ್ರುವಂ ತತ್ । ತತೋ ಮಯಾ ನಾಚಿಕೇತಶ್ಚಿತೋಽಗ್ನಿರನಿತ್ಯೈರ್ದ್ರವ್ಯೈಃ ಪ್ರಾಪ್ತವಾನಸ್ಮಿ ನಿತ್ಯಮ್ ॥ ೧೦ ॥

ಕಾಮಸ್ಯಾಪ್ತಿಂ ಜಗತಃ ಪ್ರತಿಷ್ಠಾಂ ಕ್ರತೋರಾನನ್ತ್ಯಮಭಯಸ್ಯ ಪಾರಮ್ । ಸ್ತೋಮಮಹದುರುಗಾಯಂ ಪ್ರತಿಷ್ಠಾಂ ದೃಷ್ಟ್ವಾ ಧೃತ್ಯಾ ಧೀರೋ ನಚಿಕೇತೋಽತ್ಯಸ್ರಾಕ್ಷೀಃ ॥ ೧೧ ॥

ತಂ ದುರ್ದರ್ಶಂ ಗೂಢಮನುಪ್ರವಿಷ್ಟಂ ಗುಹಾಹಿತಂ ಗಹ್ವರೇಷ್ಠಂ ಪುರಾಣಮ್ । ಅಧ್ಯಾತ್ಮಯೋಗಾಧಿಗಮೇನ ದೇವಂ ಮತ್ವಾ ಧೀರೋ ಹರ್ಷಶೋಕೌ ಜಹಾತಿ ॥ ೧೨ ॥

ಏತಚ್ಛ್ರುತ್ವಾ ಸಂಪರಿಗೃಹ್ಯ ಮರ್ತ್ಯಃ ಪ್ರವೃಹ್ಯ ಧರ್ಮ್ಯಮಣುಮೇತ
ಮಾಪ್ಯ। ಸ ಮೋದತೇ ಮೋದನೀಯಗ್ಂ ಹಿ ಲಬ್ಧ್ವಾ ವಿವೃತಗ್ಂ ಸದ್ಮ ನಚಿ
ಕೇತಸಂ ಮನ್ಯೇ ॥ ೧೩ ॥

ಅನ್ಯತ್ರ ಧರ್ಮಾದನ್ಯತ್ರಾಧರ್ಮಾದನ್ಯತ್ರಾಸ್ಮಾತ್ಕೃತಾಕೃತಾತ್।
ಅನ್ಯತ್ರ ಭೂತಾಚ್ಚ ಭವ್ಯಾಚ್ಚ ಯತ್ತತ್ಪಶ್ಯಸಿ ತದ್ವದ ॥ ೧೪ ॥

ಸರ್ವೇ ವೇದಾ ಯತ್ಪದಮಾಮನನ್ತಿ ತಪಾಗ್ಂಸಿ ಸರ್ವಾಣಿ ಚ ಯದ್ವ
ದನ್ತಿ। ಯದಿಚ್ಛನ್ತೋ ಬ್ರಹ್ಮಚರ್ಯಂ ಚರನ್ತಿ ತತ್ತೇ ಪದಗ್ಂ ಸಂಗ್ರಹೇಣ
ಬ್ರವೀಮ್ಯೋಮಿತ್ಯೇತತ್ ॥ ೧೫ ॥

ಏತದ್ಧ್ಯೇವಾಕ್ಷರಂ ಬ್ರಹ್ಮ ಏತದ್ಧ್ಯೇವಾಕ್ಷರಂ ಪರಮ್।
ಏತದ್ಧ್ಯೇವಾಕ್ಷರಂ ಜ್ಞಾತ್ವಾ ಯೋ ಯದಿಚ್ಛತಿ ತಸ್ಯ ತತ್ ॥ ೧೬ ॥

ಏತದಾಲಮ್ಬನಗ್ಂ ಶ್ರೇಷ್ಠಮೇತದಾಲಮ್ಬನಂ ಪರಮ್।
ಏತದಾಲಮ್ಬನಂ ಜ್ಞಾತ್ವಾ ಬ್ರಹ್ಮಲೋಕೇ ಮಹೀಯತೇ ॥ ೧೭ ॥

ನ ಜಾಯತೇ ಮ್ರಿಯತೇ ವಾ ವಿಪಶ್ಚಿನ್ನಾಯಂ ಕುತಶ್ಚಿನ್ನ ಬಭೂವ
ಕಶ್ಚಿತ್। ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ ನ ಹನ್ಯತೇ ಹನ್ಯಮಾನೇ
ಶರೀರೇ ॥ ೧೮ ॥

ಹನ್ತಾ ಚೇನ್ಮನ್ಯತೇ ಹನ್ತುಗ್ಂ ಹತಶ್ಚೇನ್ಮನ್ಯತೇ ಹತಮ್।
ಉಭೌ ತೌ ನ ವಿಜಾನೀತೋ ನಾಯಗ್ಂ ಹನ್ತಿ ನ ಹನ್ಯತೇ ॥ ೧೯ ॥

ಅಣೋರಣೀಯಾನ್ಮಹತೋ ಮಹೀಯಾನಾತ್ಮಾಸ್ಯ ಜನ್ತೋರ್ನಿಹಿತೋ
ಗುಹಾಯಾಮ್। ತಮಕ್ರತುಃ ಪಶ್ಯತಿ ವೀತಶೋಕೋ ಧಾತುಪ್ರಸಾದಾನ್ಮಹಿ
ಮಾನಮಾತ್ಮನಃ ॥ ೨೦ ॥

ಆಸೀನೋ ದೂರಂ ವ್ರಜತಿ ಶಯಾನೋ ಯಾತಿ ಸರ್ವತಃ।
ಕಸ್ತಂ ಮದಾಮದಂ ದೇವಂ ಮದನ್ಯೋ ಜ್ಞಾತುಮರ್ಹತಿ ॥ ೨೧ ॥

ಅಶರೀರಗ್ಂ ಶರೀರೇಷ್ವನವಸ್ಥೇಷ್ವವಸ್ಥಿತಮ್।
ಮಹಾನ್ತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ ॥ ೨೨ ॥

ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ
ಶ್ರುತೇನ। ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ
ತನೂಗ್ಂ ಸ್ವಾಮ್ ॥ ೨೩ ॥

ನಾವಿರತೋ ದುಶ್ಚರಿತಾನ್ನಾಶಾನ್ತೋ ನಾಸಮಾಹಿತಃ।
ನಾಶಾನ್ತಮಾನಸೋ ವಾಪಿ ಪ್ರಜ್ಞಾನೇನೈನಮಾಪ್ನುಯಾತ್ ॥ ೨೪ ॥

ಯಸ್ಯ ಬ್ರಹ್ಮ ಚ ಕ್ಷತ್ರಂ ಚ ಉಭೇ ಭವತ ಓದನಃ।
ಮೃತ್ಯುರ್ಯಸ್ಯೋಪಸೇಚನಂ ಕ ಇತ್ಥಾ ವೇದ ಯತ್ರ ಸಃ ॥ ೨೫ ॥

ಇತಿ ಕಾಠಕೋಪನಿಷದಿ ಪ್ರಥಮಾಧ್ಯಾಯೇ ದ್ವಿತೀಯಾ ವಲ್ಲೀ

## ಅಥ ತೃತೀಯಾ ವಲ್ಲೀ

ಋತಂ ಪಿಬನ್ತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ ಪರಮೇ
ಪರಾರ್ಧೇ । ಛಾಯಾತಪೌ ಬ್ರಹ್ಮವಿದೋ ವದನ್ತಿ ಪಞ್ಚಾಗ್ನಯೋ ಯೇ ಚ
ತ್ರಿಣಾಚಿಕೇತಾಃ ॥ ೧ ॥

ಯಃ ಸೇತುರೀಜಾನಾನಾಮಕ್ಷರಂ ಬ್ರಹ್ಮ ಯತ್ಪರಮ್ ।
ಅಭಯಂ ತಿತೀರ್ಷತಾಂ ಪಾರಂ ನಾಚಿಕೇತಗ್ಂ ಶಕೇಮಹಿ ॥ ೨ ॥

ಆತ್ಮಾನಗ್ಂ ರಥಿನಂ ವಿದ್ಧಿ ಶರೀರಗ್ಂ ರಥಮೇವ ತು ।
ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ ॥ ೩ ॥

ಇನ್ದ್ರಿಯಾಣಿ ಹಯಾನಾಹುರ್ವಿಷಯಾಗ್ಂಸ್ತೇಷು ಗೋಚರಾನ್ ।
ಆತ್ಮೇನ್ದ್ರಿಯಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ ॥ ೪ ॥

ಯಸ್ತ್ವವಿಜ್ಞಾನವಾನ್ ಭವತ್ಯಯುಕ್ತೇನ ಮನಸಾ ಸದಾ ।
ತಸ್ಯೇನ್ದ್ರಿಯಾಣ್ಯವಶ್ಯಾನಿ ದುಷ್ಟಾಶ್ವಾ ಇವ ಸಾರಥೇಃ ॥ ೫ ॥

ಯಸ್ತು ವಿಜ್ಞಾನವಾನ್ಭವತಿ ಯುಕ್ತೇನ ಮನಸಾ ಸದಾ ।
ತಸ್ಯೇನ್ದ್ರಿಯಾಣಿ ವಶ್ಯಾನಿ ಸದಶ್ವಾ ಇವ ಸಾರಥೇಃ ॥ ೬ ॥

ಯಸ್ತ್ವವಿಜ್ಞಾನವಾನ್ ಭವತ್ಯಮನಸ್ಕಃ ಸದಾಶುಚಿಃ ।
ನ ಸ ತತ್ಪದಮಾಪ್ನೋತಿ ಸಗ್ಂಸಾರಂ ಚಾಧಿಗಚ್ಛತಿ ॥ ೭ ॥

ಯಸ್ತು ವಿಜ್ಞಾನವಾನ್ಭವತಿ ಸಮನಸ್ಕಃ ಸದಾ ಶುಚಿಃ ।
ಸ ತು ತತ್ಪದಮಾಪ್ನೋತಿ ಯಸ್ಮಾದ್ಭೂಯೋ ನ ಜಾಯತೇ ॥ ೮ ॥
ವಿಜ್ಞಾನಸಾರಥಿರ್ಯಸ್ತು ಮನಃಪ್ರಗ್ರಹವಾನ್ನರಃ ।
ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್ ॥ ೯ ॥
ಇನ್ದ್ರಿಯೇಭ್ಯಃ ಪರಾ ಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ ।
ಮನಸಸ್ತು ಪರಾ ಬುದ್ಧಿರ್ಬುದ್ಧೇರಾತ್ಮಾ ಮಹಾನ್ ಪರಃ ॥ ೧೦ ॥
ಮಹತಃ ಪರಮವ್ಯಕ್ತಮವ್ಯಕ್ತಾತ್ಪುರುಷಃ ಪರಃ ।
ಪುರುಷಾನ್ನ ಪರಂ ಕಿಂಚಿತ್ಸಾ ಕಾಷ್ಠಾ ಸಾ ಪರಾ ಗತಿಃ ॥ ೧೧ ॥
ಏಷ ಸರ್ವೇಷು ಭೂತೇಷು ಗೂಢೋಽತ್ಮಾ ನ ಪ್ರಕಾಶತೇ ।
ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ ॥ ೧೨ ॥
ಯಚ್ಛೇದ್ವಾಙ್ಮನಸೀ ಪ್ರಾಜ್ಞಸ್ತದ್ಯಚ್ಛೇಜ್ಜ್ಞಾನ ಆತ್ಮನಿ ।
ಜ್ಞಾನಮಾತ್ಮನಿ ಮಹತಿ ನಿಯಚ್ಛೇತ್ತದ್ಯಚ್ಛೇಚ್ಛಾನ್ತ ಆತ್ಮನಿ ॥ ೧೩ ॥
ಉತ್ತಿಷ್ಠತ ಜಾಗ್ರತ ಪ್ರಾಪ್ಯ ವರಾನ್ನಿಬೋಧತ ।
ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ ದುರ್ಗಂ ಪಥಸ್ತತ್ಕವಯೋ ವದನ್ತಿ ॥

ಅಶಬ್ದಮಸ್ಪರ್ಶಮರೂಪಮವ್ಯಯಂ ತಥಾರಸಂ ನಿತ್ಯಮಗನ್ಧವಚ್ಚ
ಯತ್ । ಅನಾದ್ಯನನ್ತಂ ಮಹತಃ ಪರಂ ಧ್ರುವಂ ನಿಚಾಯ್ಯ ತಂ ಮೃತ್ಯುಮುಖಾ
ತ್ಪ್ರಮುಚ್ಯತೇ ॥ ೧೫ ॥

ನಾಚಿಕೇತಮುಪಾಖ್ಯಾನಂ ಮೃತ್ಯುಪ್ರೋಕ್ತಗ್ಂ ಸನಾತನಮ್ ।
ಉಕ್ತ್ವಾ ಶ್ರುತ್ವಾ ಚ ಮೇಧಾವೀ ಬ್ರಹ್ಮಲೋಕೇ ಮಹೀಯತೇ ॥ ೧೬ ॥

ಯ ಇಮಂ ಪರಮಂ ಗುಹ್ಯಂ ಶ್ರಾವಯೇದ್ಬ್ರಹ್ಮಸಂಸದಿ । ಪ್ರಯತಃ
ಶ್ರಾದ್ಧಕಾಲೇ ವಾ ತದಾನನ್ತ್ಯಾಯ ಕಲ್ಪತೇ ತದಾನನ್ತ್ಯಾಯ ಕಲ್ಪತ ಇತಿ

ಇತಿ ಕಾಠಕೋಪನಿಷದಿ ತೃತೀಯಾ ವಲ್ಲೀ

## ಇತಿ ಕಾಠಕೋಪನಿಷದಿ ಪ್ರಥಮೋಽಧ್ಯಾಯಃ

## ಅಥ ದ್ವಿತೀಯಾಧ್ಯಾಯೇ ಪ್ರಥಮಾ ವಲ್ಲೀ

ಪರಾಞ್ಚಿ ಖಾನಿ ವ್ಯತೃಣತ್ಸ್ವಯಂಭೂಸ್ತಸ್ಮಾತ್ಪರಾಙ್ ಪಶ್ಯತಿ ನಾನ್ತ
ರಾತ್ಮನ್ । ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷದಾವೃತ್ತಚಕ್ಷುರಮೃತತ್ವಮಿ
ಚ್ಛನ್ ॥ ೧ ॥

ಪರಾಚಃ ಕಾಮಾನನುಯನ್ತಿ ಬಾಲಾಸ್ತೇ ಮೃತ್ಯೋರ್ಯನ್ತಿ ವಿತತಸ್ಯ
ಪಾಶಮ್ । ಅಥ ಧೀರಾ ಅಮೃತತ್ವಂ ವಿದಿತ್ವಾ ಧ್ರುವಮಧ್ರುವೇಷ್ವಿಹ ನ ಪ್ರಾರ್ಥ
ಯನ್ತೇ ॥ ೨ ॥

ಯೇನ ರೂಪಂ ರಸಂ ಗನ್ಧಂ ಶಬ್ದಾನ್ಸ್ಪರ್ಶಾಗ್ಂಶ್ಚ ಮೈಥುನಾನ್ ।
ಏತೇನೈವ ವಿಜಾನಾತಿ ಕಿಮತ್ರ ಪರಿಶಿಷ್ಯತೇ । ಏತದ್ವೈ ತತ್ ॥ ೩ ॥

ಸ್ವಪ್ನಾನ್ತಂ ಜಾಗರಿತಾನ್ತಂ ಚೋಭೌ ಯೇನಾನುಪಶ್ಯತಿ ।
ಮಹಾನ್ತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ ॥ ೪ ॥

ಯ ಇಮಂ ಮಧ್ವದಂ ವೇದ ಆತ್ಮಾನಂ ಜೀವಮನ್ತಿಕಾತ್ ।
ಈಶಾನಂ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ । ಏತದ್ವೈ ತತ್ ॥ ೫ ॥

ಯಃ ಪೂರ್ವಂ ತಪಸೋ ಜಾತಮದ್ಭ್ಯಃ ಪೂರ್ವಮಜಾಯತ ।
ಗುಹಾಂ ಪ್ರವಿಶ್ಯ ತಿಷ್ಠನ್ತಂ ಯೋ ಭೂತೇಭಿರ್ವ್ಯಪಶ್ಯತ । ಏತದ್ವೈ ತತ್ ॥ ೬ ॥

ಯಾ ಪ್ರಾಣೇನ ಸಂಭವತ್ಯದಿತಿರ್ದೇವತಾಮಯೀ ।
ಗುಹಾಂ ಪ್ರವಿಶ್ಯ ತಿಷ್ಠನ್ತೀಂ ಯಾ ಭೂತೇಭಿರ್ವ್ಯಜಾಯತ । ಏತದ್ವೈ ತತ್ ॥ ೭ ॥

ಅರಣ್ಯೋರ್ನಿಹಿತೋ ಜಾತವೇದಾ ಗರ್ಭ ಇವ ಸುಭೃತೋ ಗರ್ಭಿಣೀಭಿಃ ।
ದಿವೇ ದಿವ ಈಡ್ಯೋ ಜಾಗೃವದ್ಭಿರ್ಹವಿಷ್ಮದ್ಭಿರ್ಮನುಷ್ಯೇಭಿರಗ್ನಿಃ । ಏತದ್ವೈ ತತ್ ॥

ಯತಶ್ಚೋದೇತಿ ಸೂರ್ಯೋಽಸ್ತಂ ಯತ್ರ ಚ ಗಚ್ಛತಿ ।
ತಂ ದೇವಾಃ ಸರ್ವೇ ಅರ್ಪಿತಾಸ್ತದು ನಾತ್ಯೇತಿ ಕಶ್ಚನ । ಏತದ್ವೈ ತತ್ ॥ ೯ ॥

ಯದೇವೇಹ ತದಮುತ್ರ ಯದಮುತ್ರ ತದನ್ವಿಹ ।
ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ ॥ ೧೦ ॥

ಮನಸೈವೇದಮಾಪ್ತವ್ಯಂ ನೇಹ ನಾನಾಸ್ತಿ ಕಿಂಚನ।
ಮೃತ್ಯೋಃ ಸ ಮೃತ್ಯುಂ ಗಚ್ಛತಿ ಯ ಇಹ ನಾನೇವ ಪಶ್ಯತಿ ॥ ೧೧ ॥
ಅಙ್ಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ ।
ಈಶಾನಂ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ। ಏತದ್ವೈ ತತ್ ॥ ೧೨ ॥
ಅಙ್ಗುಷ್ಠಮಾತ್ರಃ ಪುರುಷೋ ಜ್ಯೋತಿರಿವಾಧೂಮಕಃ।
ಈಶಾನೋ ಭೂತಭವ್ಯಸ್ಯ ಸ ಏವಾದ್ಯ ಸ ಉ ಶ್ವಃ। ಏತದ್ವೈ ತತ್ ॥ ೧೩ ॥
ಯಥೋದಕಂ ದುರ್ಗೇ ವೃಷ್ಟಂ ಪರ್ವತೇಷು ವಿಧಾವತಿ।
ಏವಂ ಧರ್ಮಾನ್ ಪೃಥಕ್ಪಶ್ಯಂಸ್ತಾನೇವಾನುವಿಧಾವತಿ ॥ ೧೪ ॥
ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ।
ಏವಂ ಮುನೇರ್ವಿಜಾನತ ಆತ್ಮಾ ಭವತಿ ಗೌತಮ ॥ ೧೫ ॥

ಇತಿ ಕಾಠಕೋಪನಿಷದಿ ದ್ವಿತೀಯಾಧ್ಯಾಯೇ ಪ್ರಥಮಾ ವಲ್ಲೀ

## ಅಥ ದ್ವಿತೀಯಾ ವಲ್ಲೀ

ಪುರಮೇಕಾದಶದ್ವಾರಮಜಸ್ಯಾವಕ್ರಚೇತಸಃ।
ಅನುಷ್ಠಾಯ ನ ಶೋಚತಿ ವಿಮುಕ್ತಶ್ಚ ವಿಮುಚ್ಯತೇ। ಏತದ್ವೈ ತತ್ ॥ ೧ ॥
ಹಂಸಃ ಶುಚಿಷದ್ವಸುರನ್ತರಿಕ್ಷಸದ್ಧೋತಾ ವೇದಿಷದತಿಥಿರ್ದುರೋಣಸತ್ ।
ನೃಷದ್ವರಸದೃತಸದ್ವ್ಯೋಮಸದಬ್ಜಾ ಗೋಜಾ ಋತಜಾ ಅದ್ರಿಜಾ ಋತಂ ಬೃಹತ್ ॥ ೨ ॥
ಊರ್ಧ್ವಂ ಪ್ರಾಣಮುನ್ನಯತ್ಯಪಾನಂ ಪ್ರತ್ಯಗಸ್ಯತಿ।
ಮಧ್ಯೇ ವಾಮನಮಾಸೀನಂ ವಿಶ್ವೇ ದೇವಾ ಉಪಾಸತೇ ॥ ೩ ॥
ಅಸ್ಯ ವಿಸ್ರಂಸಮಾನಸ್ಯ ಶರೀರಸ್ಥಸ್ಯ ದೇಹಿನಃ।
ದೇಹಾದ್ವಿಮುಚ್ಯಮಾನಸ್ಯ ಕಿಮತ್ರ ಪರಿಶಿಷ್ಯತೇ। ಏತದ್ವೈ ತತ್ ॥ ೪ ॥
ನ ಪ್ರಾಣೇನ ನಾಪಾನೇನ ಮರ್ತ್ಯೋ ಜೀವತಿ ಕಶ್ಚನ।
ಇತರೇಣ ತು ಜೀವನ್ತಿ ಯಸ್ಮಿನ್ನೇತಾವುಪಾಶ್ರಿತೌ ॥ ೫ ॥
ಹನ್ತ ತ ಇದಂ ಪ್ರವಕ್ಷ್ಯಾಮಿ ಗುಹ್ಯಂ ಬ್ರಹ್ಮ ಸನಾತನಮ್ ।
ಯಥಾ ಚ ಮರಣಂ ಪ್ರಾಪ್ಯ ಆತ್ಮಾ ಭವತಿ ಗೌತಮ ॥ ೬ ॥
ಯೋನಿಮನ್ಯೇ ಪ್ರಪದ್ಯನ್ತೇ ಶರೀರತ್ವಾಯ ದೇಹಿನಃ।
ಸ್ಥಾಣುಮನ್ಯೇಽನುಸಂಯನ್ತಿ ಯಥಾಕರ್ಮ ಯಥಾಶ್ರುತಮ್ ॥ ೭ ॥
ಯ ಏಷ ಸುಪ್ತೇಷು ಜಾಗರ್ತಿ ಕಾಮಂ ಕಾಮಂ ಪುರುಷೋ ನಿರ್ಮಿಮಾಣಃ। ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತಮುಚ್ಯತೇ। ತಸ್ಮಿಁಲ್ಲೋಕಾಃ ಶ್ರಿತಾಃ ಸರ್ವೇ ತದು ನಾತ್ಯೇತಿ ಕಶ್ಚನ। ಏತದ್ವೈ ತತ್ ॥ ೮ ॥
ಅಗ್ನಿರ್ಯಥೈಕೋ ಭುವನಂ ಪ್ರವಿಷ್ಟೋ ರೂಪಂ ರೂಪಂ ಪ್ರತಿರೂಪೋ ಬಭೂವ।
ಏಕಸ್ತಥಾ ಸರ್ವಭೂತಾನ್ತರಾತ್ಮಾ ರೂಪಂ ರೂಪಂ ಪ್ರತಿರೂಪೋ ಬಹಿಶ್ಚ ॥

ವಾಯುರ್ಯಥೈಕೋ ಭುವನಂ ಪ್ರವಿಷ್ಟೋ ರೂಪಂ ರೂಪಂ ಪ್ರತಿ ರೂಪೋ ಬಭೂವ । ಏಕಸ್ತಥಾ ಸರ್ವಭೂತಾನ್ತರಾತ್ಮಾ ರೂಪಂ ರೂಪಂ ಪ್ರತಿ ರೂಪೋ ಬಹಿಶ್ಚ ॥ ೧೦ ॥

ಸೂರ್ಯೋ ಯಥಾ ಸರ್ವಲೋಕಸ್ಯ ಚಕ್ಷುರ್ನ ಲಿಪ್ಯತೇ ಚಾಕ್ಷುಷೈರ್ಬಾಹ್ಯದೋಷೈಃ । ಏಕಸ್ತಥಾ ಸರ್ವಭೂತಾನ್ತರಾತ್ಮಾ ನ ಲಿಪ್ಯತೇ ಲೋಕದುಃಖೇನ ಬಾಹ್ಯಃ ॥ ೧೧ ॥

ಏಕೋ ವಶೀ ಸರ್ವಭೂತಾನ್ತರಾತ್ಮಾ ಏಕಂ ರೂಪಂ ಬಹುಧಾ ಯಃ ಕರೋತಿ । ತಮಾತ್ಮಸ್ಥಂ ಯೇಽನುಪಶ್ಯನ್ತಿ ಧೀರಾಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಮ್ ॥ ೧೨ ॥

ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮೇಕೋ ಬಹೂನಾಂ ಯೋ ವಿದಧಾತಿ ಕಾಮಾನ್ । ತಮಾತ್ಮಸ್ಥಂ ಯೇಽನುಪಶ್ಯನ್ತಿ ಧೀರಾಸ್ತೇಷಾಂ ಶಾನ್ತಿಃ ಶಾಶ್ವತೀ ನೇತರೇಷಾಮ್ ॥ ೧೩ ॥

ತದೇತದಿತಿ ಮನ್ಯನ್ತೇಽನಿರ್ದೇಶ್ಯಂ ಪರಮಂ ಸುಖಮ್ । ಕಥಂ ನು ತದ್ವಿಜಾನೀಯಾಂ ಕಿಮು ಭಾತಿ ವಿಭಾತಿ ವಾ ॥ ೧೪ ॥

ನ ತತ್ರ ಸೂರ್ಯೋ ಭಾತಿ ನ ಚನ್ದ್ರತಾರಕಂ ನೇಮಾ ವಿದ್ಯುತೋ ಭಾನ್ತಿ ಕುತೋಽಯಮಗ್ನಿಃ । ತಮೇವ ಭಾನ್ತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ ॥ ೧೫ ॥

ಇತಿ ಕಾಠಕೋಪನಿಷದಿ ದ್ವಿತೀಯಾಧ್ಯಾಯೇ ದ್ವಿತೀಯಾ ವಲ್ಲೀ

## ಅಥ ತೃತೀಯಾ ವಲ್ಲೀ

ಊರ್ಧ್ವಮೂಲೋಽವಾಕ್ಶಾಖ ಏಷೋಽಶ್ವತ್ಥಃ ಸನಾತನಃ । ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತಮುಚ್ಯತೇ । ತಸ್ಮಿಁಲ್ಲೋಕಾಃ ಶ್ರಿತಾಃ ಸರ್ವೇ ತದು ನಾತ್ಯೇತಿ ಕಶ್ಚನ । ಏತದ್ವೈ ತತ್ ॥ ೧ ॥

ಯದಿದಂ ಕಿಂಚ ಜಗತ್ಸರ್ವಂ ಪ್ರಾಣ ಏಜತಿ ನಿಃಸೃತಮ್ ।
ಮಹದ್ಭಯಂ ವಜ್ರಮುದ್ಯತಂ ಯ ಏತದ್ವಿದುರಮೃತಾಸ್ತೇ ಭವನ್ತಿ ॥ ೨ ॥

ಭಯಾದಸ್ಯಾಗ್ನಿಸ್ತಪತಿ ಭಯಾತ್ತಪತಿ ಸೂರ್ಯಃ ।
ಭಯಾದಿನ್ದ್ರಶ್ಚ ವಾಯುಶ್ಚ ಮೃತ್ಯುರ್ಧಾವತಿ ಪಞ್ಚಮಃ ॥ ೩ ॥

ಇಹ ಚೇದಶಕದ್ಬೋದ್ಧುಂ ಪ್ರಾಕ್ಶರೀರಸ್ಯ ವಿಸ್ರಸಃ ।
ತತಃ ಸರ್ಗೇಷು ಲೋಕೇಷು ಶರೀರತ್ವಾಯ ಕಲ್ಪತೇ ॥ ೪ ॥

ಯಥಾದರ್ಶೇ ತಥಾತ್ಮನಿ ಯಥಾ ಸ್ವಪ್ನೇ ತಥಾ ಪಿತೃಲೋಕೇ । ಯಥಾಪ್ಸು ಪರೀವ ದದೃಶೇ ತಥಾ ಗನ್ಧರ್ವಲೋಕೇ ಛಾಯಾತಪಯೋರಿವ ಬ್ರಹ್ಮಲೋಕೇ ।
ಇನ್ದ್ರಿಯಾಣಾಂ ಪೃಥಗ್ಭಾವಮುದಯಾಸ್ತಮಯೌ ಚ ಯತ್ ।
ಪೃಥಗುತ್ಪದ್ಯಮಾನಾನಾಂ ಮತ್ವಾ ಧೀರೋ ನ ಶೋಚತಿ ॥ ೬ ॥

ಇನ್ದ್ರಿಯೇಭ್ಯಃ ಪರಂ ಮನೋ ಮನಸಃ ಸತ್ತ್ವಮುತ್ತಮಮ್ ।
ಸತ್ತ್ವಾದಧಿ ಮಹಾನಾತ್ಮಾ ಮಹತೋಽವ್ಯಕ್ತಮುತ್ತಮಮ್ ॥ ೭ ॥
ಅವ್ಯಕ್ತಾತ್ತು ಪರಃ ಪುರುಷೋ ವ್ಯಾಪಕೋಽಲಿಙ್ಗ ಏವ ಚ ।
ಯಂ ಜ್ಞಾತ್ವಾ ಮುಚ್ಯತೇ ಜನ್ತುರಮೃತತ್ವಂ ಚ ಗಚ್ಛತಿ ॥ ೮ ॥
ನ ಸಂದೃಶೇ ತಿಷ್ಠತಿ ರೂಪಮಸ್ಯ ನ ಚಕ್ಷುಷಾ ಪಶ್ಯತಿ ಕಶ್ಚನೈನಮ್ ।
ಹೃದಾ ಮನೀಷಾ ಮನಸಾಭಿಕ್ಲೃಪ್ತೋ ಯ ಏತದ್ವಿದುರಮೃತಾಸ್ತೇ ಭವನ್ತಿ ॥
ಯದಾ ಪಞ್ಚಾವತಿಷ್ಠನ್ತೇ ಜ್ಞಾನಾನಿ ಮನಸಾ ಸಹ ।
ಬುದ್ಧಿಶ್ಚ ನ ವಿಚೇಷ್ಟತಿ ತಾಮಾಹುಃ ಪರಮಾಂ ಗತಿಮ್ ॥ ೧೦ ॥
ತಾಂ ಯೋಗಮಿತಿ ಮನ್ಯನ್ತೇ ಸ್ಥಿರಾಮಿನ್ದ್ರಿಯಧಾರಣಾಮ್ ।
ಅಪ್ರಮತ್ತಸ್ತದಾ ಭವತಿ ಯೋಗೋ ಹಿ ಪ್ರಭವಾಪ್ಯಯೌ ॥ ೧೧ ॥
ನೈವ ವಾಚಾ ನ ಮನಸಾ ಪ್ರಾಪ್ತುಂ ಶಕ್ಯೋ ನ ಚಕ್ಷುಷಾ ।
ಅಸ್ತೀತಿ ಬ್ರುವತೋಽನ್ಯತ್ರ ಕಥಂ ತದುಪಲಭ್ಯತೇ ॥ ೧೨ ॥
ಅಸ್ತೀತ್ಯೇವೋಪಲಬ್ಧವ್ಯಸ್ತತ್ತ್ವಭಾವೇನ ಚೋಭಯೋಃ ।
ಅಸ್ತೀತ್ಯೇವೋಪಲಬ್ಧಸ್ಯ ತತ್ತ್ವಭಾವಃ ಪ್ರಸೀದತಿ ॥ ೧೩ ॥
ಯದಾ ಸರ್ವೇ ಪ್ರಮುಚ್ಯನ್ತೇ ಕಾಮಾ ಯೇಽಸ್ಯ ಹೃದಿ ಶ್ರಿತಾಃ ।
ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ । ॥ ೧೪ ॥
ಯದಾ ಸರ್ವೇ ಪ್ರಭಿದ್ಯನ್ತೇ ಹೃದಯಸ್ಯೇಹ ಗ್ರನ್ಥಯಃ ।
ಅಥ ಮರ್ತ್ಯೋಽಮೃತೋ ಭವತ್ಯೇತಾವದ್ಧ್ಯನುಶಾಸನಮ್ ॥ ೧೫ ॥

ಶತಂ ಚೈಕಾ ಚ ಹೃದಯಸ್ಯ ನಾಡ್ಯಸ್ತಾಸಾಂ ಮೂರ್ಧಾನಮಭಿನಿಃಸೃತೈಕಾ । ತಯೋರ್ಧ್ವಮಾಯನ್ನಮೃತತ್ವಮೇತಿ ವಿಷ್ವಙ್ಙನ್ಯಾ ಉತ್ಕ್ರಮಣೇ ಭವನ್ತಿ ॥ ೧೬ ॥

ಅಙ್ಗುಷ್ಠಮಾತ್ರಃ ಪುರುಷೋಽನ್ತರಾತ್ಮಾ ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ । ತಂ ಸ್ವಾಚ್ಛರೀರಾತ್ಪ್ರವೃಹೇನ್ಮುಞ್ಜಾದಿವೇಷೀಕಾಂ ಧೈರ್ಯೇಣ । ತಂ ವಿದ್ಯಾಚ್ಛುಕ್ರಮಮೃತಂ ತಂ ವಿದ್ಯಾಚ್ಛುಕ್ರಮಮೃತಮಿತಿ ॥ ೧೭ ॥

ಮೃತ್ಯುಪ್ರೋಕ್ತಾಂ ನಚಿಕೇತೋಽಥ ಲಬ್ಧ್ವಾ ವಿದ್ಯಾಮೇತಾಂ ಯೋಗವಿಧಿಂ ಚ ಕೃತ್ಸ್ನಮ್ । ಬ್ರಹ್ಮಪ್ರಾಪ್ತೋ ವಿರಜೋಽಭೂದ್ವಿಮೃತ್ಯುರನ್ಯೋಽಪ್ಯೇವಂ ಯೋ ವಿದಧ್ಯಾತ್ಮಮೇವ ॥ ೧೮ ॥

ಓಂ । ಸಹ ನಾವವತು । ಸಹ ನೌ ಭುನಕ್ತು । ಸಹ ವೀರ್ಯಂ ಕರವಾವಹೈ । ತೇಜಸ್ವಿ ನಾವಧೀತಮಸ್ತು ಮಾ ವಿದ್ವಿಷಾವಹೈ ॥ ಓಂ ಶಾನ್ತಿಃ ಶಾನ್ತಿಃ ಶಾನ್ತಿಃ ॥

ಇತಿ ಕಾಠಕೋಪನಿಷತ್ಸಮಾಪ್ತಾ

———o———

# ಅನುಕ್ರಮಣಿಕೆ

## (ಭಾಷ್ಯದಲ್ಲಿ ಬಂದಿರುವ ಕ್ಲಿಷ್ಟಪದಗಳ ಅರ್ಥ)

---

**೧. ಅಚಿನ್ತ್ಯಶಕ್ತಿ**–
ಇಂಥದ್ದೆಂದು ಯೋಚಿಸುವದಕ್ಕೂ ಆಗದ ಶಕ್ತಿ.

**೨. ಅಣು**–
ಸೂಕ್ಷ್ಮ, ಇಂದ್ರಿಯಗಳಿಗೆ ನಿಲುಕದ

**೩. ಅಧಿಕಾರಿ**–
ಕರ್ಮಕ್ಕೆ ಅಥವಾ ವಿದ್ಯೆಗೆ ತಕ್ಕವನು

**೪ ಅಧಿಯಜ್ಞ**–
ಯಜ್ಞದ ವಿಷಯದಲ್ಲಿ

**೫. ಅಧ್ಯಸ್ತ**–
ಇಲ್ಲದ ಕಡೆಯಲ್ಲಿ ಹುಟ್ಟುಗಟ್ಟಿದ.

**೬ ಅಧ್ಯಾತ್ಮ**–
ನಮ್ಮೊಳಗಿನ, ಶರೀರ, ಪ್ರಾಣ, ಇಂದ್ರಿಯ, ಮನಸ್ಸು, ಬುದ್ಧಿ, ಆತ್ಮ - ಇವುಗಳ ವಿಷಯ

**೭ ಅಧ್ಯಾತ್ಮಯೋಗ**–
ಮನಸ್ಸನ್ನು ವಿಷಯಗಳಿಂದ ಒಳಕ್ಕೆಳೆದುಕೊಂಡು ಆತ್ಮನಲ್ಲಿ ಇಡುವದು

**೮. ಅಧ್ಯಾಸ**–
ಒಂದನ್ನು ಮತ್ತೊಂದಾಗಿ ತಿಳಿಯುವದು.

**೯ ಅನಾದ್ಯವಿದ್ಯಾ**–
ಎಂದುಂಟಾಯಿತೆಂದು ಹೇಳುವದಕ್ಕೆ ಬಾರದೆ ಇರುವ ತಪ್ಪುತಿಳಿವು.

**೧೦. ಅಪರಬ್ರಹ್ಮ**–
ಕಡಿಮೆಯ ಬ್ರಹ್ಮ, ಧ್ಯಾನಕ್ಕೆ ಇಟ್ಟುಕೊಳ್ಳುವ ಸಗುಣಬ್ರಹ್ಮ

**೧೧. ಅವಿದ್ಯಾ**–
ನಿಜವನ್ನು ತಿಳಿಯದೆ ಇರುವದು, ಅನಾತ್ಮವನ್ನು ಕಾಣುವ ತಪ್ಪುತಿಳಿವು; ಉಪಾಧಿಯ ಕಾರಣದಿಂದ ತಪ್ಪಾಗಿ ಭೇದವನ್ನು ಕಾಣುವದು, ಭೇದವನ್ನು ಕಲ್ಪಿಸಿ ತೋರುವ ತಪ್ಪುತಿಳಿವು.

**೧೨. ಅವಿದ್ಯಾಮಾಯಾಚ್ಛನ್ನ**–
ಅವಿದ್ಯೆಯಿಂದಾದ ಮಾಯೆಯಿಂದ ಮುಚ್ಚಿರುವ

**೧೩. ಅವ್ಯಕ್ತ**–
ಇಂದ್ರಿಯಗಳಿಗೆ ಗೋಚರಿಸದೆ ಇರುವದು, ಮಹತ್ತತ್ತ್ವಕ್ಕೂ ಕಾರಣವಾದ ನಾಮರೂಪಗಳ ಸೂಕ್ಷ್ಮರೂಪ. ಇದಕ್ಕೆ ಅವ್ಯಾಕೃತ, ಮಾಯೆ, ಬೀಜ- ಮುಂತಾದ ಹೆಸರುಗಳೂ ಉಂಟು.

**೧೪. ಅವ್ಯಕ್ತಾದಿಸ್ಥಾವರಾನ್ತ**–
ಅವ್ಯಾಕೃತದಿಂದ ಹಿಡಿದು ಮರಗಿಡಗಳಂಥ ಪ್ರಾಣಿಗಳವರೆಗಿನ ಸಂಸಾರ.

**೧೫. ಅವ್ಯಾಕೃತ**–
ಬಿಡಿಬಿಡಿಯಾಗಿಲ್ಲದ, ನಾಮರೂಪಗಳ ಸೂಕ್ಷ್ಮರೂಪ

**೧೬. ಅಸಂಸ್ಕೃತಬುದ್ಧಿ**–
ಸರಿಯಾಗಿ ತಿದ್ದಿಕೊಳ್ಳದೆ ಇರುವ ಬುದ್ಧಿ.

**೧೭. ಆಕಾಶ**–
ಪಂಚಭೂತಗಳಲ್ಲಿ ಒಂದು, ಅವ್ಯಾಕೃತವೇ ಮುಂತಾದ ಹೆಸರಿನಿಂದ ಕರೆಯಲ್ಪಡುವ ಜಗದ್ಬೀಜ

**೧೮. ಆಗಮ**–
ಸಂಪ್ರದಾಯದಿಂದ ಬಂದಿರುವ ಗುರೂಪದೇಶ.

**೧೯. ಆತ್ಮ**–
ತಾನು. ಜೀವನ ನಿಜವಾದ ಸ್ವರೂಪವಾಗಿರುವ ಪರಮಾತ್ಮ

**೨೦ ಆಲಮ್ಬನ**–
ಸಾಲಗ್ರಾಮದಲ್ಲಿ ವಿಷ್ಣುವನ್ನು ಧ್ಯಾನಿಸುವಂತೆ, ಯಾವದರಲಿ ಬ್ರಹ್ಮವನ್ನು ಧ್ಯಾನಿಸುತ್ತಾರೋ ಅದು.

**೨೧. ಆಸುರಪಕ್ಷ**–
ದೇಹಾಭಿಮಾನವುಳ್ಳವರಿಗೆ ಮೆಚ್ಚಾಗಿರುವ ನಾಸ್ತಿಕಪಕ್ಷ

**೨೨ ಉಪನಿಷತ್**–
ಬ್ರಹ್ಮವಿದ್ಯೆ, ವಿರಾಟ್ಪುರುಷನ ವಿಷಯವಾದ ಉಪಾಸನೆ; ಈ ವಿದ್ಯೆಗಳನ್ನು ತಿಳಿಸುವ ಗ್ರಂಥ.

**೨೩. ಉಪಾಧಿ**–
ವಸ್ತುವನ್ನು ಅಳತೆಗೆ ಸಿಕ್ಕಿಸುವ ಸುತ್ತುಗಟ್ಟು, ಉದಾ· ಆತ್ಮನಿಗೆ ದೇಹ, ಇಂದ್ರಿಯ. ಪ್ರಾಣ, ಮನಸ್ಸು, ಬುದ್ಧಿ- ಇವು ಉಪಾಧಿಗಳು.

**೨೪. ಏಕದೇಶವಿಜ್ಞಾನ**–
ಒಂದಂಶದ ಜ್ಞಾನ, ಒಂದೊಂದು ವಿಷಯದಲ್ಲಿ ಆಗುವ ವೃತ್ತಿಜ್ಞಾನ

**೨೫. ಏಕಾಗ್ರತೆ**–
ಮನಸ್ಸು ಒಕ್ಕಡೆಗೆ ನಿಲ್ಲುವಂತೆ ತಿದ್ದಿದ ವೃತ್ತಿ.

**೨೬. ಓಂಶಬ್ದವಾಚ್ಯ**–
ಓಂ ಎಂಬ ಶಬ್ದದಿಂದ ಹೇಳಲ್ಪಡುವ ಬ್ರಹ್ಮ.

**೨೭. ಕರ್ಮಿಗಳು—**
ಯಜ್ಞವೇ ಮುಂತಾದ ಕರ್ಮಗಳನ್ನು ಮಾಡುವವರು.

**೨೮. ಕಾರ್ಯಪ್ರವಿಲಾಪನ—**
ಕಾರ್ಯವನ್ನು ಅಡಗಿಸುವದು, ಕಾರ್ಯವು ಕಾರಣಕ್ಕಿಂತ ಬೇರೆಯಲ್ಲವೆಂದು ತಿಳಿಯುವದು.

**೨೯. ಕಾರ್ಯಕರಣೋಪಾಧಿ—**
ಶರೀರೇಂದ್ರಿಯಗಳೆಂಬ ಉಪಾಧಿ

**೩೦. ಕುತಾರ್ಕಿಕ—**
ಭೇದವನ್ನು ಸಿದ್ಧಾಂತಮಾಡುವ ಕೆಟ್ಟ ತರ್ಕದವ.

**೩೧. ಕುದೃಷ್ಟಿ—**
ಇರುವದನ್ನು ಇಲ್ಲವೆಂದು ಸಿದ್ಧಾಂತಮಾಡುವ ಕೆಟ್ಟ ತಿಳಿವಳಿಕೆ

**೩೨. ಕ್ಷಣಭಂಗವಾದ—**
ಒಂದೊಂದು ಕ್ಷಣಕ್ಕೂ ಬೇರೆ ಬೇರೆ ಜ್ಞಾನವು ಹುಟ್ಟಿ ನಾಶವಾಗುವದೆಂದೂ ಮುಂದಿನ ಕ್ಷಣದಲ್ಲಿ ಅದರಂತೆ ಬೇರೆ ಜ್ಞಾನವು ಹುಟ್ಟುವದರಿಂದ ಜ್ಞಾನವು ಒಂದೇ ಎಂಬ ಭ್ರಮೆಯಾಗುವದೆಂದೂ ಹೇಳುವವರ ಮತ.

**೩೩. ಕ್ರಿಯಾಕಾರಕಫಲ—**
ಕರ್ಮ, ಅದರ ಸಾಮಗ್ರಿಗಳು, ಅದರಿಂದಾಗುವ ಪ್ರಯೋಜನ.

**೩೪ ಖ—**
ಆಕಾಶ, ಆಕಾಶವೇ ಮುಂತಾದಭೂತಗಳಿಂದಾಗಿರುವ, ಭೌತಿಕವಿಷಯಗಳನ್ನು ತೋರಿಸಿಕೊಡುವ, ಇಂದ್ರಿಯಗಳು

**೩೫. ಗಂಧರ್ವನಗರ—**
ಆಕಾಶದಲ್ಲಿ ಕಲ್ಪಿತವಾಗಿ ತೋರಿ ಹಾರುವ ನೋಟ.

**೩೬ ಗತಿ—**
ಹೋಗುವದು, ತಿಳಿದುಕೊಳ್ಳುವದು

**೩೭. ಗುಹಾಹಿತ—**
ಬುದ್ಧಿಯಲ್ಲಿ ತೋರಿಕೊಳ್ಳುವ ಆತ್ಮ.

**೩೮. ಗ್ರಂಥಿ—**
ಅವಿದ್ಯೆಯಿಂದ ಆದ ತೊಡಕಿನ ಅರಿವು, ಕಾಮ.

**೩೯. ಜಾಗರಿತಾಂತ—**
ಎಚ್ಚರದಲ್ಲಿ ತಿಳಿಯಬರುವ ವಸ್ತು.

**೪೦. ಜ್ಞೇಯ—**
ಅರಿತುಕೊಳ್ಳಬೇಕಾದ ಬ್ರಹ್ಮ.

**೪೧. ತ್ರಿಕರ್ಮ—**
ಯಜ್ಞ, ಅಧ್ಯಯನ, ದಾನ

**೪೨. ದರ್ಶನಶ್ರವಣಮನನವಿಜ್ಞಾನಲಿಂಗ—**
ನೋಡುವದು, ಕೇಳುವದು, ಯೋಚಿಸುವದು, ಅರಿಯುವದು— ಎಂಬ ವೃತ್ತಿಗಳಿಂದ ಗೊತ್ತುಮಾಡಿಕೊಳ್ಳಬೇಕಾದ ಆತ್ಮ.

**೪೩. ದೇವ—**
ದೇವತೆ, ಇಂದ್ರಿಯ, ಪರಮಾತ್ಮ

**೪೪. ಧರ್ಮ—**
ಆತ್ಮವಸ್ತು.

**೪೫. ನಾಮರೂಪ—**
ಹೆಸರು, ಆಕಾರ, ಹೊರಗೆ ತೋರುವ ಪ್ರಪಂಚ.

**೪೬. ನಿತ್ಯವಿಜ್ಞಪ್ತಿ—** ಯಾವಾಗಲೂ ಇದ್ದುಕೊಂಡಿರುವ ಚೈತನ್ಯ.

**೪೭ ನಿರನ್ವಯನಾಶ—**
ಕಾರಣರೂಪವೂ ಉಳಿಯದಂತೆ ನಾಶವಾಗುವದು.

**೪೮ ನಿರುಪಾಧಿಕ—**
ಉಪಾಧಿಗಳಿಲ್ಲದ (ಆತ್ಮರೂಪ).

**೪೯. ನಿಃಶ್ರೇಯಸ—**
ಎಲ್ಲಕ್ಕೂ ಹೆಚ್ಚಿನ ಹಿತ, ಮೋಕ್ಷ

**೫೦. ನಿವೃತ್ತಿ—**
ಕರ್ಮಗಳನ್ನು ಬಿಡುವದು, ಜ್ಞಾನಮಾರ್ಗ

**೫೧. ಪರಬ್ರಹ್ಮ—**
ವೇದಾಂತದಿಂದ ಅರಿತುಕೊಳ್ಳಬೇಕಾದ ಹೆಚ್ಚಿನ ಬ್ರಹ್ಮ.

**೫೨. ಪರಮಪುರುಷಾರ್ಥ—**
ಪುರುಷಾರ್ಥಗಳಲ್ಲಿ ಮುಖ್ಯವಾದದ್ದು, ಮೋಕ್ಷ.

**೫೩. ಪರಾರ್ಥ—**
ಮತ್ತೊಬ್ಬನಿಗಾಗಿರುವ ವಸ್ತು.

**೫೪. ಪರಾರ್ಧ—**
ಬ್ರಹ್ಮಸ್ಥಾನ, ಬುದ್ಧಿ.

**೫೫. ಪಾಷಂಡ—**
ಅಥವಾ 'ಪಾಖಂಡ', ಅವೈದಿಕಮತ, ತಪ್ಪು ಮತ

**೫೬. ಪುರುಷ—**
ಎಲ್ಲವನ್ನೂ ವ್ಯಾಪಿಸಿರುವ ಆತ್ಮ.

**೫೭. ಪುರಾಣ—**
ಹಿಂದಕ್ಕೂ ಈಗಲೂ ಹೊಸಬನಾಗಿಯೇ ಇರುವ ಆತ್ಮ.

**೫೮. ಪ್ರತಿಷೇಧ–**
ಶಾಸ್ತ್ರದಲ್ಲಿ ಮಾಡಬೇಡವೆಂದು ಹೇಳಿರುವದು.

**೫೯. ಪ್ರತೀಕ–**
ಉಪಾಸನೆಗೆಂದು ಇಟ್ಟುಕೊಂಡ ಗುರುತಿನ ವಸ್ತು, ಉದಾ: ಓಂಕಾರವನ್ನು ಬ್ರಹ್ಮವೆಂದು ಉಪಾಸನೆಮಾಡಿದರೆ ಓಂಕಾರವು ಬ್ರಹ್ಮಕ್ಕೆ ಪ್ರತೀಕವು

**೬೦. ಪ್ರತ್ಯಗಾತ್ಮ–**
ನಮ್ಮೊಳಗಿನ ಆತ್ಮ

**೬೧. ಪ್ರತ್ಯವಾಯ–**
ಕರ್ಮವನ್ನು ಬಿಟ್ಟದ್ದರಿಂದ ಆಗುವದೆಂದು ಕರ್ಮಮೀಮಾಂಸಕರು ಹೇಳುವ ದೋಷ.

**೬೨. ಪ್ರಥಮಜ–**
ಮೊದಲು ಹುಟ್ಟಿದವನು, ಹಿರಣ್ಯಗರ್ಭ

**೬೩. ಪ್ರಥಮಶರೀರಿ–**
ಶರೀರವುಳ್ಳವರಲ್ಲಿ ಮೊದಲನೆಯವನು, ವಿರಾಟ್ಪುರುಷ

**೬೪. ಪ್ರಯೋಜನ–**
ನಮಗೆ ಆಗಬೇಕಾದದ್ದು, ಗ್ರಂಥದ ನಾಲ್ಕು ಅನುಬಂಧಗಳಲ್ಲಿ ಒಂದು.

**೬೫. ಪ್ರವೃತ್ತಿ–**
ಕರ್ಮಗಳಲ್ಲಿ ತೊಡಗುವದು

**೬೬. ಪ್ರಾಕೃತ–**
ಪ್ರಕೃತಿಯಿಂದಾಗಿರುವ ದೇಹಾದಿಗಳಲ್ಲಿ ಅಭಿಮಾನವಿರುವ.

**೬೭. ಪ್ರಾಣ–**
ಪ್ರಾಣವೃತ್ತಿ, ಹಿರಣ್ಯಗರ್ಭ.

**೬೮. ಬುದ್ಧಿ–**
ನಿಶ್ಚಯವನ್ನು ಮಾಡುವ ಅಂತಃಕರಣವೃತ್ತಿ.

**೬೯. ಬ್ರಹ್ಮಚರ್ಯ–**
ಗುರುವಿನ ಬಳಿಯಲ್ಲಿದ್ದು ಶಾಸ್ತ್ರಾಭ್ಯಾಸ, ಬ್ರಹ್ಮವಿಚಾರವೇ ಮುಂತಾದದ್ದನ್ನು ಮಾಡುವದು; ಮೈಥುನವನ್ನು ಬಿಟ್ಟಿರುವದು

**೭೦. ಬ್ರಹ್ಮಜಜ್ಞ–**
ಹಿರಣ್ಯಗರ್ಭನಿಂದ ಹುಟ್ಟಿ ಸರ್ವಜ್ಞನಾಗಿರುವ ವಿರಾಟ್ಪುರುಷ

**೭೧. ಬ್ರಹ್ಮವಿದ್ಯಾಚಾರ್ಯ–**
ಬ್ರಹ್ಮವಿದ್ಯೆಯನ್ನು ಹೇಳಿಕೊಡುವ ಗುರು

**೭೨. ಬ್ರಹ್ಮಾತ್ಮೈಕತ್ವ–**
ಬ್ರಹ್ಮರೂಪವಾಗಿರುವ ಆತ್ಮನು ಒಬ್ಬನೇ ಆಗಿರುವದು

**೭೩. ಬ್ರಹ್ಮಾದಿಸ್ತಂಬಪರ್ಯನ್ತ–**
ಅಥವಾ 'ಬ್ರಹ್ಮಾದಿ ಸ್ಥಾವರಾನ್ತ' ಅತ್ಯಂತ ಸಾತ್ತ್ವಿಕಸ್ಥಿತಿಯಲ್ಲಿರುವ ಬ್ರಹ್ಮನಿಂದ ಹಿಡಿದು ಅತ್ಯಂತತಾಮಸಸ್ಥಿತಿಯಲ್ಲಿರುವ ಸ್ಥಾವರಪ್ರಾಣಿಯ ವರೆಗೆ.

**೭೪. ಬ್ರಹ್ಮಲೋಕ–**
ಬ್ರಹ್ಮನು ಇರುವ ಸತ್ಯಲೋಕ, ಬ್ರಹ್ಮತತ್ತ್ವ.

**೭೫. ಭೂತಸೂಕ್ಷ್ಮ–**
ಸೂಕ್ಷ್ಮಭೂತಗಳಿಂದಾಗಿರುವ ವಸ್ತು.

**೭೬. ಭೋಕ್ತೃ–**
ಶರೀರ, ಇಂದ್ರಿಯ, ಅಂತಃಕರಣ–ಇವುಗಳಿಂದ ಕೂಡಿರುವ ಆತ್ಮ.

**೭೭. ಮನಸ್ಸು–**
ಸಂಕಲ್ಪವಿಕಲ್ಪಗಳನ್ನು ಮಾಡುವ, ಎಂದರೆ ಇಂಥದ್ದನ್ನು ಮಾಡಬೇಕೆಂದೂ ಇದು ಇಂಥದ್ದೆಂದೂ ಗೊತ್ತುಮಾಡುವ ವೃತ್ತಿ.

**೭೮. ಮನ್ದಬ್ರಹ್ಮವಿತ್–**
ಬ್ರಹ್ಮವನ್ನು ಚೆನ್ನಾಗಿ ಅರಿಯದವ, ಅಪರಬ್ರಹ್ಮವನ್ನು ಉಪಾಸನೆಮಾಡುವವ.

**೭೯. ಮರೀಚ್ಯುದಕ–**
ಬಿಸಿಲ್ಗುದುರೆ, ದೂರಕ್ಕೆ ನೀರಿನಂತೆ ತೋರಿ ಹತ್ತಿರಕ್ಕೆ ಹೋದರೆ ಬರಿಯ ಬಯಲಾಗಿರುವ ಮರಳುಪ್ರದೇಶ.

**೮೦. ಮಹಾನ್ ಆತ್ಮಾ–**
ಹಿರಣ್ಯಗರ್ಭ, ಅವ್ಯಕ್ತದಿಂದ ಉಂಟಾಗಿರುವ ಚಿದ್ರೂಪಜಡರೂಪಗಳ ಒಟ್ಟು.

**೮೧. ಮಾಯಾ–**
ಕಣ್ಣುಕಟ್ಟಿನಿಂದ ತೋರುವ ವಸ್ತು, ಅವಿದ್ಯೆ, ಅವಿದ್ಯೆಯಿಂದ ತೋರುವ ಜಗದ್ಬೀಜ

**೮೨ ಮೃತ್ಯು–**
ಅವಿದ್ಯೆ, ಕಾಮ, ಕರ್ಮ

**೮೩ ಮೃತ್ಯುಪಾಶ–**
ಮೃತ್ಯುವಿನ ಬಲೆ, ಅಧರ್ಮ, ಅಜ್ಞಾನ, ರಾಗದ್ವೇಷ ಮುಂತಾದವು; ದೇಹೇಂದ್ರಿಯಾದಿಗಳನ್ನು ಮತ್ತೆ ಮತ್ತೆ ಹೊಂದಿ ಅಗಲುತ್ತಿರುವದು

**೮೪. ಮಿಥ್ಯಾಜ್ಞಾನವಿಜೃಂಭಿತ–**
ತಪ್ಪುತಿಳುವಳಿಕೆಯಿಂದ ಹರಡಿಕೊಂಡಿರುವ

**೮೫ ಯೋಗ–**
ಯಾವ ಅನರ್ಥದ ಸಂಬಂಧವೂ ಇಲ್ಲದ 'ಸಮಾಧಿ' ಎಂಬ ಅವಸ್ಥೆ; ಇಂದ್ರಿಯಗಳನ್ನೂ ಮನಸ್ಸನ್ನೂ ಬಿಗಿಹಿಡಿದಿರುವದು.

**೮೬. ಯೋಗಕ್ಷೇಮ-**
ತನಗೆ ಬೇಕಾದದ್ದನ್ನು ಸಂಪಾದಿಸಿ ಅದನ್ನು ಕಾಪಾಡಿಕೊಳ್ಳುವದು.

**೮೭. ಯೋಗಿ-**
ಧ್ಯಾನವನು ಮಾಡುವವ

**೮೮. ವಾಸುದೇವ-**
ಪರಮಾತ್ಮತತ್ತ್ವ.

**೮೯. ವಿಕ್ರಿಯೆ-**
ಅನಾತ್ಮವಸ್ತುಗಳಲ್ಲಿರುವ ಆರು ಬಗೆಯ ವಿಕಾರ; ಹುಟ್ಟುವದು, ಇರುವದು, ಬೆಳೆಯುವದು, ಮಾರ್ಪಡುವದು, ಸವೆಯುವದು, ನಾಶವಾಗುವದು

**೯೦. ವಿಕ್ಷಿಪ್ತಚಿತ್ತ-**
ಚದರುವ ಚಿತ್ತವುಳ್ಳ, ಏಕಾಗ್ರವಾದ ಮನಸ್ಸಿಲ್ಲದ.

**೯೧. ವಿಜ್ಞಾನಕ್ರಿಯಾಶಕ್ತಿ-**
ಹಿರಣ್ಯಗರ್ಭನಲ್ಲಿರುವ ಎರಡು ಶಕ್ತಿಗಳು.

**೯೨ ವಿಜ್ಞಾನಘನ-**
ಅಥವಾ 'ವಿಜ್ಞಾನೈಕರಸ' ಅರಿವಿನ ಗಟ್ಟಿ, ಚೈತನ್ಯವೊಂದೇ ಆಗಿರುವದು

**೯೩. ವಿಧಿ-**
ಶಾಸ್ತ್ರದಲ್ಲಿ ಇಂಥ ಕರ್ಮಗಳನ್ನು ಮಾಡಬೇಕೆಂದು ಕಟ್ಟುಮಾಡಿರುವದು.

**೯೪. ವಿರಾಟ್-**
ಸ್ಥೂಲಪ್ರಪಂಚದ ಅಭಿಮಾನಿಯಾದ ಆತ್ಮ

**೯೫. ವಿಷಯ-**
ಗ್ರಂಥವು ಏನನ್ನು ಹೇಳುವದೋ ಅದು. ನಾಲ್ಕು ಅನುಬಂಧಗಳಲ್ಲಿ ಒಂದು

**೯೬. ವಿಷ್ಣು-**
ಎಲ್ಲೆಲ್ಲಿಯೂ ವ್ಯಾಪಿಸಿರುವ ಪರಮಾತ್ಮ.

**೯೭. ವೃತ್ತಿ-**
ಗ್ರಂಥದ ವಿವರಣೆ: ಭಾಷ್ಯ; ನಡತೆ; ಮನಸ್ಸಿನ ಮಾರ್ಪಾಡು.

**೯೮. ವೈರಾಜಪದ-**
ವಿರಾಟ್ಪುರುಷನ ಸ್ಥಾನ; ಜ್ಞಾನಕರ್ಮಸಮುಚ್ಚಯದಿಂದ ಪಡೆಯುವ ಗತಿ; ಇದಕ್ಕೆ 'ಸ್ವರ್ಗ'ವೆಂದೂ ಹೆಸರುಂಟು.

**೯೯. ಶ್ರೇಯಸ್-**
ಹಿತವಾದದ್ದು.

**೧೦೦. ಸಮಾಧಾನ-**
ಮನಸ್ಸನ್ನು ನಿಲ್ಲಿಸಿಕೊಂಡಿರುವದು.

**೧೦೧. ಸಂಬನ್ಧ-**
ನಾಲ್ಕು ಅನುಬಂಧಗಳಲ್ಲಿ ಒಂದು, ಹಿಂದಿನ ಗ್ರಂಥಭಾಗಕ್ಕೂ ಇದಕ್ಕೂ ಇರುವ ಸಂಬಂಧ.

**೧೦೨. ಸರ್ವಜ್ಞ-**
ಎಲ್ಲವನ್ನೂ ಅರಿಯುವ ಆತ್ಮಚೈತನ್ಯ.

**೧೦೩. ಸರ್ವಾತ್ಮ-**
ಎಲ್ಲರಿಗೂ ಸ್ವರೂಪವಾಗಿರುವ ಪರಮಾತ್ಮ; ಎಲ್ಲದರ ರೂಪದಲ್ಲಿಯೂ ಇರುವ ಪರಮಾತ್ಮ

**೧೦೪. ಸಾಧ್ಯಸಾಧನಲಕ್ಷಣ-**
ಇದನ್ನು ಮಾಡಿ ಇದನ್ನು ಪಡೆಯಬೇಕೆಂಬ ರೂಪದ

**೧೦೫. ಸಾಮಾನ್ಯವಿಜ್ಞಾನ-**
ಆತ್ಮಸ್ವರೂಪವಾಗಿರುವ ಚೈತನ್ಯ.

**೧೦೬ ಸಾಂಪರಾಯ-**
ಪರಲೋಕಕ್ಕಾಗಿ ಮಾಡುವ ಕರ್ಮ, ಉಪಾಸನೆ.

**೧೦೭. ಸುಷುಮ್ನಾ-**
ನೆತ್ತಿಯ ನಡುಭಾಗದಲ್ಲಿ ಹಾದು ಹೋಗಿರುವದೆಂದು ಯೋಗಿಗಳು ಹೇಳುವ ಒಂದು ನಾಡಿ; ಇದರ ಮೂಲಕ ಉಪಾಸಕರು ಬ್ರಹ್ಮವನ್ನು ಪಡೆಯುವರಂತೆ

**೧೦೮ ಸೋಪಾಧಿಕ-**
ಉಪಾಧಿಯಿಂದ ತೋರುವ (ಆತ್ಮರೂಪ).

**೧೦೯. ಸ್ಥಾಣು-**
ಮರಗಿಡಗಳೇ ಮುಂತಾದ ಸ್ಥಾವರ.

**೧೧೦. ಸ್ವರ್ಗಲೋಕ-**
ವಿರಾಡುಪಾಸನೆಯಿಂದ ಪಡೆಯುವ ಸುಖದ ಲೋಕ.

**೧೧೧ ಸ್ವಪ್ನಾನ್ತ-**
ಕನಸಿನಲ್ಲಿ ತಿಳಿಯಬರುವ ವಸ್ತು.

**೧೧೨. ಸಂಸಾರ-**
ಹುಟ್ಟುಹೊಂದುಗಳನ್ನೆ ಅನುಭವಿಸುತ್ತಾ ತೊಳಲುವದು.

**೧೧೩. ಸಂಹತ-**
ಕೂಡಿಕೊಂಡಿರುವ, ಉದಾಹರಣೆಗೆ: ಶರೀರ, ಇಂದ್ರಿಯ, ಪ್ರಾಣ, ಮನಸ್ಸು, ಬುದ್ಧಿ—ಇವುಗಳು ಒಂದಕ್ಕೊಂದು ಕೂಡಿಕೊಂಡಿರುವದರಿಂದ ಸಂಹತ, ಆತ್ಮನು ಇವುಗಳಿಂದ ಕೂಡಿಲ್ಲದೆ ಬೇರೆ ಇದ್ದು ಇವುಗಳನ್ನು ನೋಡುತ್ತಿರುವದಾದ್ದರಿಂದ ಅಸಂಹತ.

**೧೧೪. ಹಾರ್ದಾಕಾಶ-**
ಹೃದಯದಲ್ಲಿ ಕೆಲಸಮಾಡುವ ಬುದ್ಧಿ.

# ತಿದ್ದುಪಡಿ

| ಪುಟ | ಸಾಲು | ಈಗ ಇರುವದು | ಇರಬೇಕಾದದ್ದು |
|---|---|---|---|
| ೩ | ೨ | ವಿದ್ಯೆಯನ್ನೂ | ವಿದ್ಯೆಯನ್ನು |
| ೪ | ೩ | ಅಗ್ನಿವಿದ್ಯೆಯು 'ಉಪನಿಷತ್ತು' | ಅಗ್ನಿವಿದ್ಯೆಯು ಕೂಡ 'ಉಪನಿಷತ್ತು' |
| ೬ | ೨೯ | (ಟಿಪ್ಪಣಿಯಲ್ಲಿ) § | † |
| ,, | ೩೦ | ( ,, ) † | ‡ |
| ,, | ೩೧ | ( ,, ) ‡ | § |
| ೯ | ೧೯ | ಈ ಎಲ್ಲವನ್ನೂ | ಈ ಮೇಲೆ ಹೇಳಿದ ಎಲ್ಲವನ್ನೂ |
| ೧೦ | ೨೫ | ಕಳುಹಿಸಿದ ಮೇಲೆ 'ಅದೇ ನನ್ನ ಮಗನೇ ಬಂದಿರುವನು' | ಕಳುಹಿಸಿದ ಮೇಲೆ ಗುರುತುಹಿಡಿದು ಎಂದರೆ ನೆನಪುಮಾಡಿಕೊಂಡು 'ಅದೇ ನನ್ನ ಮಗನೇ ಈಗ ಬಂದಿರುವನು' |
| ,, | ೨೬ | ಆಗಲಿ | ಆಗಲಿ ಎಂದರ್ಥ |
| ೧೧ | ೧೨ | ಮಗನಾದ ನೀನು ಉಳಿದ | ಉಳಿದ |
| ೧೫ | ೧೬ | ಹುಟ್ಟಿದವನು, ಬ್ರಹ್ಮಜನು | ಹುಟ್ಟಿದವನು ಬ್ರಹ್ಮಜನು |
| ೧೬ | ೮ | ಉಪಾಸನೆ ‡ | ಉಪಾಸನೆ † |
| ,, | ೨೧ | ಹೊಂದಿ † | ಹೊಂದಿ ‡ |
| ೨೪ | ೧೭ | ಅದನ್ನೂ ಬಿಟ್ಟು | ಅದನ್ನು ಬಿಟ್ಟು |
| ೨೫ | ೧೦ | (ಪ್ರೇಯಸ್ಸಿಗಿಂತ, | (ಶ್ರೇಯಸ್ಸಿಗಿಂತ.) |
| | ೧೧ | ಕಾಣುವ) | ಕಾಣುವ |
| ೨೬ | ೨೩ | ಪ್ರೇಯಸ್ಸೂ ಪ್ರೇ:ಯಸ್ಸೂ | ಶ್ರೇಯಸ್ಸೂ ಪ್ರೇಯಸ್ಸೂ |
| ೨೯ | ೧೪ | ಇದೇ ಲೋಕವು ಮತ್ತೊಂದು | ಇದೇ ಲೋಕವು ; ಮತ್ತೊಂದು |
| ೩೧ | ೭ | ತಾನಾಗಿ ಆಚಾರ್ಯನಿಂದ | ತಾನಾಗಿರುವ ಆಚಾರ್ಯನಿಂದ |
| ,, | ೨೯ | ಊಹಿಸುವ ಮಾತಲ್ಲ | ಊಹಿಸುವ ತರ್ಕವಲ್ಲ |
| ೩೭ | ೨೭ | ‡ ಗುರುತಾಗಿ ಸಾಲಗ್ರಾಮವನ್ನು | ‡ ಗುರುತಾಗಿ. ಸಾಲಗ್ರಾಮವನ್ನು |
| ೩೮ | ೨೫ | ಆಕಾಶ, ಸೂರ್ಯ, ಮನಸ್ಸು, ನಾಮ, ಮನಸ್ಸು. | ಆಕಾಶ, ಸೂರ್ಯ, ನಾಮ, ಮನಸ್ಸು. |
| ೪೦ | ೯ | ಎಂದು | ಎಂದರೆ |
| ,, | ೧೩ | ಯಾವ ವಸ್ತು | ಯಾವ ಯಾವ ವಸ್ತು |

| ಪುಟ | ಸಾಲು | ಈಗ ಇರುವದು | ಇರಬೇಕಾದದ್ದು |
|---|---|---|---|
| ೪೩ | ೧೨ | ನಾಗಿ§ ಯಾವ ವಿಕಾರವೂ ಇಲ್ಲದೆ | ನಾಗಿ ಯಾವ ವಿಕಾರವೂ ಇಲ್ಲದೆ§ |
| ೪೮ | ೨೨ | ಉಪಾಚಾರದ | ಉಪಚಾರದ |
| ೫೪ | ೧೮ | ಆತ್ಮವೆಂದು | ಆತ್ಮನೆಂದು |
| ,, | ೨೧ | ಅವೇ ಸೂಕ್ಷ್ಮವಾದವು | ಅದೇ ಸೂಕ್ಷ್ಮವಾಯಿತು |
| ೫೫ | ೨೦ | (೧–೪–೩) ವನ್ನು ನೋಡಿ. | (೧–೪–೩) ಭಾಷ್ಯವನ್ನು ನೋಡಿ |
| ೫೭ | ೧ | ಆದ್ದರಿಂದಲೇ | ಆದ್ದರಿಂದಲೇ (ಈ) ಆತ್ಮನು |
| ೫೯ | ೬ | ಬಿಸಿಲು, ಕಿರಣ, ಹಗ್ಗ, | ಬಿಸಿಲು, ಹಗ್ಗ, |
| ೬೧ | ೨೨ | ಇಲ್ಲವೇ ಇಲ್ಲ. | ಇಲ್ಲವೇ ಇಲ್ಲವೆಂಬದನ್ನು ತಿಳಿಸುವದಕ್ಕೆ ಬ್ರಹ್ಮವು ಶಬ್ದಾದಿಗಳಿಗೆ ಕಾರಣವೆಂದು ಹೇಳಿದೆ. |
| ೬೪ | ೩೦ | ತೆಗೆದುಕೊಳ್ಳಬೇಕು. | ತೆಗೆದುಕೊಳ್ಳಬೇಕು. ೧–೨–೨೨ ನೆಯ ಮಂತ್ರದ ಭಾಷ್ಯವನ್ನು ನೋಡಿ |
| ೭೧ | ೨೩ | ಅರ್ಥವನ್ನು | ಅರ್ಥವನ್ನೂ |
| ೭೨ | ೨೧ | ಅಗ್ನಿ ಮುಂತಾದ ಅಧಿದೈವದ | ಅಧಿದೈವದ ಅಗ್ನಿ ಮುಂತಾದ |
| ೭೪ | ೧೩ | ಪಡೆದು* | ಪಡೆದು |
| ೭೬ | ೫ | ವನೇ ಹೊರತು ಅವನಂಥವನು ಮತ್ತೊಬ್ಬನು ಹುಟ್ಟುವದಿಲ್ಲ. | ವನೇ ಹೊರತು ಮತ್ತೊಬ್ಬನು ಇರುವದಿಲ್ಲ, ಅವನಂಥವನು ಮತ್ತೊಬ್ಬನು ಹುಟ್ಟುವದೂ ಇಲ್ಲ. |
| ೭೭ | ೧೩ | ಗಟ್ಟಿಯೇ | ಗಟ್ಟಿಯೇ ಆಗಿ ಒಂದೇ ಬಗೆಯಾಗಿರುವ |
| ,, | ೧೪ | ಆಗಿರುವ | — |
| ,, | ೩೧ | ಒಪ್ಪುವದಿಲ್ಲ | ಒಪ್ಪುವದಿಲ್ಲ. ಎಚ್ಚರದಲ್ಲಿಯೂ ಇದರಂತೆಯೇ |
| ೭೮ | ೧೨ | ವಿಮುಕ್ತನಾಗಿ ವಿಮುಕ್ತನಾಗು | ವಿಮುಕ್ತನಾಗಿದ್ದು ವಿಮುಕ್ತನಾಗು |
| ೭೯ | ೧೦ | ಸ್ವರೂಪನಾದ, ವಕ್ರವಲ್ಲದ | ಸ್ವರೂಪನಾದ, ಆತ್ಮನ(ಪುರವು) ವಕ್ರವಲ್ಲದ |
| ,, | ೨೪ | ಮುಂತಾದವು | ಮುಂತಾದವರು |
| ,, | ೨೬ | ಸುತ್ತುಗಳನ್ನು | ಸುತ್ತುಗಳನ್ನೂ |
| ,, | ೨೭ | ಕೊತ್ತಲುಗಳೆಂಬ, ಕೀಲುಗಳೆಂಬ ಯಂತ್ರಗಳನ್ನು ಕೂದಲುಗಳೆಂಬ ಗೋಪುರ- | ಕೊತ್ತಲುಗಳನ್ನೂ, ಕೀಲುಗಳೆಂಬ ಯಂತ್ರಗಳನ್ನೂ ಕೂದಲುಗಳೆಂಬ ಗೋಪುರಗಳನ್ನೂ |
| ೮೧ | ೨೯ | ಧರ್ಮಗಳನ್ನೇ | ಧರ್ಮಗಳೇ |
| ೮೩ | ೧ | ಈ ಶರೀರವು ಕೆಳಕ್ಕೆ | ಈ (ಶರೀರವು) ಕೆಳಕ್ಕೆ |
| ,, | ೬ | ಜೀವಿಸಿರುವದಿಲ್ಲ : | ಯಾವನೂ ಜೀವಿಸಿರುವದಿಲ್ಲ ; |
| ,, | ೧೧ | ಇರುತ್ತಿರುವ ಬೇರೆಯೊಬ್ಬನ | ಇರುತ್ತಿರುವ ಯಾವನೋ ಬೇರೆಯೊಬ್ಬನ |

| ಪುಟ | ಸಾಲು | ಈಗ ಇರುವುದು | ಇರಬೇಕಾದದ್ದು |
|---|---|---|---|
| ೮೪ | ೧೭ | ಎಂಬ ಶ್ರುತಿಯೂ | ಎಂಬ ಬೇರೆ ಶ್ರುತಿಯೂ |
| ೮೬ | ೩೦ | ಮಾಡುವೆನೆಂಬ | ನೋಡುವೆನೆಂಬ |
| ೮೮ | ೨೬ | ಹಾಗೆ ಅರ್ಥಮಾಡಿಕೊಳ್ಳಬೇಕು | ಹಾಗೆ ಗೌಣವಾಗಿ ಅರ್ಥಮಾಡಿಕೊಳ್ಳಬೇಕು. |
| ೯೦ | ೨೭ | ಪ್ರಕೃತಕ್ಕೆ | ಪ್ರಕೃತವಿಷಯದ ಸಾಧನಕ್ಕೆ |
| ೯೭ | ೯ | ಸ್ವರೂಪವನ್ನು | ಸ್ವರೂಪವನ್ನೂ |
| ೧೦೦ | ೧೩ | ಎಂದರೆ | ಎಂದರೆ ಅದಕ್ಕಾಗಿ ಮಾಡಬೇಕಾದ ಯೋಗವನ್ನು |
| ೧೦೩ | ೩ | ರಿಂದ ಇದ್ವೇ | ರಿಂದ (ಈ ಬ್ರಹ್ಮವು) ಇದ್ವೇ |
| ,, | ೪ | ನಿಲ್ಲುವದು | ನಿಲ್ಲುವದು § |
| ,, | ೮ | ಕೂಡಿಕೊಂಡೇ § | ಕೂಡಿಕೊಂಡೇ |
| ,, | ೩೧ | ಸಾಕ್ಷಿಜ್ಞಾನಕ್ಕೆ | ಸಾಕ್ಷಾತ್ ಜ್ಞಾನಕ್ಕೆ |
| ೧೦೪ | ೨೩ | ಅಣುವಲ್ಲ | ಅಣುವಲ್ಲ, ಹ್ರಸ್ವವಲ್ಲ |
| ,, | ೯ | ಪಡಿಸಿಕೊಳ್ಳ | ಪಡಿಸಿಕೊಂಡು ಮುಂದಕ್ಕೆ ಬಿಡ |
| ,, | ೧೦ | ಅದಿತ್ಯನ | ಆದಿತ್ಯನ |
| ,, | ೨೩ | ನೊಸೆಯು | ನೊವೆಯು |
| ,, | ೩೦ | ಎಂದು | ಎಂದೂ |
| ೧೧೫ | ೭ | ಒಂದರೊಡನೆಂದು | ಒಂದರೊಡನೊಂದು |
| ೧೧೭ | ೧೧ | ಪ್ರೀತೋದಕಾ | ಪೀತೋದಕಾ |
| ೧೧೮ | ೨೧ | ವಿದ್ವಾಂಶ್ಚಿನುತೇ | ವಿದ್ವಾಗ್ಂಶ್ಚಿನುತೇ |
| ೧೧೯ | ೧೦ | ಕಾಮಾಃ | ಕಾಮಾ |
| ,, | ೧೯ | ಕ್ಷದಸ್ಥಃ | ಕಥ ಸ್ಥಃ |
| ೧೨೦ | ೪ | ನಚಿಕೇತೋಂ | ನಚಿಕೇತೋऽ |
| ೧೨೨ | ೨೫ | ಗೂಢೋऽತ್ಮಾ | ಗೂಢೋऽऽತ್ಮಾ |
| ,, | ೩೦ | ಪ್ರಥಕ್ತ್ವಮಯೋ | ಪಥಕ್ತ್ವಮಯೋ |
| ೧೨೩ | ೮ | ತೃತೀಯಾ | ಪ್ರಥಮಾಧ್ಯಾಯೇ ತೃತೀಯಾ |
| ೧೨೪ | ೮ | ಈಶಾನಂ | ಈಶಾನೋ |

——o——

# ಅಧ್ಯಾತ್ಮಪ್ರಕಾಶಕಾರ್ಯಾಲಯದ
# ಪರಿಚಯ

---

(ಕಾರ್ಯಾಲಯವು ಸ್ಥಾಪಿತವಾದದ್ದು ಕ್ರಿ. ಶ ೧೯೩೦)

೧. **ಈ ಕಾರ್ಯಾಲಯದ ಮುಖ್ಯೋದ್ದೇಶವು** ಅಧ್ಯಾತ್ಮವಿದ್ಯೆಯಲ್ಲಿ ಜನರಿಗೆ ಹೆಚ್ಚಿನ ಆದರವನ್ನುಂಟುಮಾಡುವದೇ ಎಂಬುದು ಇದುವರೆಗೆ ಆಗಿರುವ ಕಾರ್ಯದಿಂದಲೇ ವಾಚಕರಿಗೆ ಗೊತ್ತಾಗುವದು ಈ ಮುಖ್ಯೋದ್ದೇಶಕ್ಕೆ **ಸಹಕಾರಿಯಾಗಿಟ್ಟುಕೊಂಡಿರುವ ಉದ್ದೇಶಗಳು** ಯಾವವೆಂದರೆ :-

(೧) ಅಧ್ಯಾತ್ಮವಿಚಾರದಲ್ಲಿ ಸಾಮಾನ್ಯರಿಗೂ ಸವಿಯುಂಟಾಗುವಂತೆ ಆದಷ್ಟು ಪ್ರಯತ್ನವನ್ನು ಮಾಡುವದು, ಮತ್ತು ಆಗಲೆ ಈ ವಿಚಾರದಲ್ಲಿ ತೊಡಗಿರುವವರು ಅದೇ ಹಾದಿಯಲ್ಲಿ ಮುಂದುವರಿಯುವಂತೆ ಮಾಡುವ ತಕ್ಕ ಸಲಕರಣೆಗಳನ್ನು ಅಣಿಮಾಡುವದು.

(೨) ಮೂಢವಿಶ್ವಾಸಗಳನ್ನು ಕಿತ್ತುಹಾಕಿ ಆತ್ಮವಿಚಾರಕ್ಕೆ ಅನುಕೂಲವಾಗಿ ಒದಗುವಂಥ ಸಾಧನಗಳನ್ನು ಅಭ್ಯಾಸಮಾಡಬೇಕೆನ್ನುವವರಿಗೆ ಸಹಾಯವನ್ನು ಒದಗಿಸುವದು.

(೩) ಅಧ್ಯಾತ್ಮವಿಚಾರದಲ್ಲಿ ತೊಡಗಿರುವವರಿಗೆ ಒಬ್ಬರೊಬ್ಬರ ಪರಿಚಯಕ್ಕೆ ಅವಕಾಶವನ್ನು ಕಲ್ಪಿಸುವದಕ್ಕೂ ಸಾಧ್ಯವಾದ ಕಡೆಗಳಲ್ಲಿ ವಿಚಾರಸಂಘಗಳನ್ನು ಏರ್ಪಡಿಸುವದಕ್ಕೂ ಸಹಾಯವನ್ನು ಮಾಡುವದು

೨. ಈ ಉದ್ದೇಶಗಳು ನೆರವೇರುವಂತೆ ಉಪಯೋಗಿಸುತ್ತಿರುವ **ಮುಖ್ಯ ಸಾಧನ**ವೇನೆಂದರೆ:-

ಓದುವವರಿಗೆ ಅನುಕೂಲವಾದ ರೀತಿಯಲ್ಲಿ ಅಧ್ಯಾತ್ಮವಿಚಾರದ ಹಳೆಯ ಗ್ರಂಥಗಳನ್ನು ಮುದ್ರಿಸಿ ಬೆಳಕಿಗೆ ಹಿಡಿಯುವದು; ಮತ್ತು ಜನರ ಮನಸ್ಸನ್ನು ಅಧ್ಯಾತ್ಮವಿಚಾರಕ್ಕೆ ಒಲಿಸುವಂತೆ ಹೊಸ ಗ್ರಂಥಗಳನ್ನು ಬರೆಯಿಸಿ ವಾಚಕರ ಮುಂದಿಡುವದು.

೩. **ಇದುವರೆಗೆ ಆಗಿರುವ ಕೆಲಸ**ವೇನೆಂಬುದು ಗ್ರಂಥಾವಳಿಯ ಪಟ್ಟಿಯಿಂದ ಗೊತ್ತಾಗುವದು. ಒಳ್ಳೊಳ್ಳೆಯ ಸುಪಿತ ಬರಹಗಾರರಿಂದ ಬರೆಸಿದ ಪಾತ್ರ, ನೀತಿ- ಮುಂತಾದ ವಿಷಯಗಳ ಲೇಖನಗಳನ್ನೊಳಗೊಂಡ **'ಅಧ್ಯಾತ್ಮಪ್ರಕಾಶ'**ವೆಂಬ ಮಾಸಪತ್ರಿಕೆಯನ್ನು ಎರಡು ವರ್ಷಗಳ ಕಾಲ ನಡೆಸಲಾಯಿತು; ತಕ್ಕಷ್ಟು ಗ್ರಾಹಕರ ಸಂಖ್ಯೆಯಿಲ್ಲದ್ದರಿಂದ ಸದ್ಯಕ್ಕೆ ಅದನ್ನು ನಿಲ್ಲಿಸಿರುತ್ತದೆ.

೪. **ಇಲ್ಲಿ ನಡೆಯುವ ಕೆಲಸವು ಧರ್ಮಾರ್ಥವಾಗಿ ನಡೆಯುವದಲ್ಲದೆ ಕಾರ್ಯಾಲಯಕ್ಕೆ ಬರುವ ಹಣವೆಲ್ಲ ಗ್ರಂಥಪ್ರಕಾಶವೇ ಮುಂತಾದ ಧಾರ್ಮಿಕಕಾರ್ಯಕ್ಕೇ ವಿನಾಸಲಾಗಿರುವದು.** ಕಾರ್ಯಾಲಯದ ಆಯ-ವ್ಯಯದ ಲೆಕ್ಕವನ್ನು ಬೇರೆಯಾಗಿ ಬರೆದಿಟ್ಟಿರುತ್ತದೆ

**೫. ಇನ್ನು ಮುಂದೆ ಆಗಬೇಕಾಗಿರುವ ಕೆಲಸವು** ಬೇಕಾದಷ್ಟು ಇದೆ. ಇದುವರೆಗೆ ಪೂರ ಬರೆದು ಅಚ್ಚಾಗುವದಕ್ಕೆ ಸಿದ್ಧವಾಗಿದ್ದರೂ ತಕ್ಕಷ್ಟು ಧನದ ಅನುಕೂಲವಿಲ್ಲದ್ದರಿಂದ ಹಿಂದೆ ನಿಂತಿರುವ ಗ್ರಂಥಗಳು ಯಾವವೆಂದರೆ:—

(೧) **ವೇದಾಂತಪ್ರವೇಶಿಕೆ**– ಶ್ರೀಭಗವತ್ಪಾದಾಚಾರ್ಯರವರ ಅದ್ವೈತಪಂಚರತ್ನದ ಆಧಾರದಿಂದ ಪರಮಾರ್ಥತತ್ತ್ವವನ್ನು ವಿವರಿಸುವ ಗ್ರಂಥ.

(೨) **ತತ್ತ್ವಸಮಾಸ**– ಎಂಬ ಕಪಿಲಸೂತ್ರ. ಸಾಂಖ್ಯಸಿದ್ಧಾಂತಕ್ಕೂ ವೇದಾಂತಕ್ಕೂ ಇರುವ ತಾರತಮ್ಯವನ್ನು ತಿಳಿಯಲು ಅನುಕೂಲವಾಗಿರುವ ಚಿಕ್ಕ ಗ್ರಂಥ,

(೩) **ಪಂಚೀಕರಣ**– ಓಂಕಾರವನ್ನು ಅರಿತು ಸಮಾಧಿಯನ್ನು ಹೊಂದುವ ಮಾರ್ಗವನ್ನು ತಿಳಿಸುವದು. ಶ್ರೀಶಂಕರಾಚಾರ್ಯರವರು ಬರೆದದ್ದೆಂದು ಪ್ರಸಿದ್ಧವಾಗಿರುವ ಗ್ರಂಥ. ಸುರೇಶ್ವರಾಚಾರ್ಯರೆಂಬ ಇವರ ಶಿಷ್ಯರು ಬರೆದಿರುವ ವ್ಯಾಖ್ಯಾನವೂ ಇದೆ

(೪) **ಉಪದೇಶಸಹಸ್ರಿ**– ಶ್ರೀಶಂಕರಭಗವತ್ಪಾದರವರು ಬರೆದಿರುವ ಗದ್ಯರೂಪವಾಗಿರುವ ಗ್ರಂಥ ಶ್ರವಣಮನನನಿದಿಧ್ಯಾಸನಕ್ಕೆ ತಕ್ಕ ಮೂರು ಪ್ರಕರಣಗಳು ಇದರಲ್ಲಿವೆ

(೫) **ಉಪದೇಶಸಹಸ್ರಿ- ಪದ್ಯಬಂಧ**. ಇದು ಶಂಕರಾಚಾರ್ಯರವರು ಬರೆದಿರುವ ಅಮೂಲ್ಯವಾದ ವೇದಾಂತಗ್ರಂಥ ವೇದಾಂತಸಿದ್ಧಾಂತವನ್ನು ಬೇರೆಬೇರೆಯ ದೃಷ್ಟಿಯಿಂದ ಮನಗಾಣಿಸುವ ಉಪನ್ಯಾಸಗಳ ಹಾಗೆ ಇರುವ ಅನೇಕ ಪ್ರಕರಣಗಳು ಇದರಲ್ಲಿವೆ.

(೬) **ನೈಷ್ಕರ್ಮ್ಯಸಿದ್ಧಿ**– ಶ್ರೀಶಂಕರಾಚಾರ್ಯರವರ ಬೆಂಬಳಿಯ ಶಿಷ್ಯರಾದ ಶ್ರೀಸುರೇಶ್ವರಾಚಾರ್ಯರವರು ಅನುಗ್ರಹಿಸಿರುವ ಅತ್ಯುತ್ತಮವಾದ ಗ್ರಂಥ.

(೭) **ಪ್ರಶ್ನೋಪನಿಷತ್ತು** ಶ್ರೀಶಂಕರಾಚಾರ್ಯರವರ ಭಾಷ್ಯಸಮೇತ

(೮) **ಅಪರೋಕ್ಷಾನುಭೂತಿ**– ಶ್ರೀಶಂಕರಾಚಾರ್ಯರವರು ಬರೆದಿರುವ ವೇದಾಂತ ಪ್ರಕರಣ.

(೯) **ಭಗವದ್ಗೀತಾರ್ಥಸರ್ವಸ್ವ**. ಗೀತೆಯಲ್ಲಿ ಅಡಗಿರುವ ಸಾಧನಸಿದ್ಧಾಂತವಿಷಯವಾದ ತತ್ತ್ವಾರ್ಥವನ್ನೆಲ್ಲ ಸೂರೆಗೊಡುವ ಹೊಸ ವಚನಗ್ರಂಥ. ಸುಮಾರು ಡೆಮ್ಮಿ ೫೦೦ ಪುಟಗಳಷ್ಟಾಗಬಹುದು ಗೀತೆಯ ಉಪದೇಶದ ವಿಷಯದಲ್ಲಿ ಬರುವ ಸಂದೇಹಗಳನ್ನೆಲ್ಲ ಇಲ್ಲಿ ವಿಚಾರಕ್ಕೆ ತೆಗೆದುಕೊಂಡು ಪರಿಹರಿಸಲಾಗಿದೆ

(೧೦) **ಅಲಾತಶಾಂತಿಪ್ರಕರಣ**- ಶ್ರೀಗೌಡಪಾದರ ಕಾರಿಕೆಯ ನಾಲ್ಕನೆಯ ಭಾಗ

ಇವಿಷ್ಟು ಈಗ ಬರೆದು ಸಿದ್ಧವಾಗಿವೆ ಈ ಗ್ರಂಥಗಳಿಗೆಲ್ಲ ಇದುವರೆಗೆ ಕಾರ್ಯಾಲಯದಲ್ಲಿ ಅಚ್ಚಾಗಿರುವ ಗ್ರಂಥಗಳಿಗಿರುವಂತೆಯೆ ಟಿಪ್ಪಣಿ, ಸಾರಾಂಶ, ಶಬ್ದಾನುಕ್ರಮಣಿಕೆ, ಪರಿಶಿಷ್ಟ—ಮುಂತಾದ ಸಲಕರಣೆಗಳನ್ನು ಜೋಡಿಸಿರುತ್ತದೆ ಇವುಗಳಲ್ಲದೆ ತೈತ್ತಿರೀಯ, ಬೃಹದಾರಣ್ಯಕದ ನಾಲ್ಕನೆಯ ಅಧ್ಯಾಯ—ಇವುಗಳು ಅರ್ಧ ಭಾಗ ಬರೆದಿವೆ. ಇನ್ನು ಕೇನ, ಐತರೇಯ, ಛಾಂದೋಗ್ಯ, ಬೃಹದಾರಣ್ಯಕ— ಈ ಉಪನಿಷತ್ತುಗಳೂ ಸಭಾಷ್ಯವಾಗಿ ಪ್ರಕಟವಾಗಬೇಕು; ಭಗವದ್ಗೀತೆ, ಬ್ರಹ್ಮಸೂತ್ರ— ಇವುಗಳ ಭಾಷ್ಯಗಳು ಹೊರಕ್ಕೆ ಬರಬೇಕಾಗಿದೆ.

ವೇದಾಂತಸಿದ್ಧಾಂತವನ್ನೆಲ್ಲ ಈಗಿನ ಪರಿಸ್ಥಿತಿಗೆ ತಕ್ಕಂತೆ ತಿಳಿಗನ್ನಡದಿಂದ ವಿಸ್ತಾರವಾಗಿ ವಿವರಿಸುವ ಒಂದು ದೊಡ್ಡ ವಿಚಾರಗ್ರಂಥವನ್ನು ಹೊರಕ್ಕೆ ತರಬೇಕಾಗಿದೆ. ಇದಕ್ಕೆಲ್ಲ ಉತ್ಸಾಹಶೀಲರಾದ ವಿದ್ವಾಂಸರ ಸಹಾಯವೂ ಧನಿಕರಾದ ಉದಾರಾಶಯರ ಸಹಾಯವೂ ಅವಶ್ಯವಾಗಿದೆ.

**೬. ಈ ಕಾರ್ಯಕ್ಕೆ ಮಹನೀಯರು ಮಾಡಬಹುದಾದ ಸಹಾಯ** ವೇನೆಂದರೆ :—

(೧) ಕಾರ್ಯಾಲಯದಲ್ಲಿ ಪ್ರಕಾಶವಾಗಬೇಕಾಗಿರುವ ದೊಡ್ಡ ದೊಡ್ಡ ಗ್ರಂಥಗಳಿಗೆ ತಕ್ಕಂತೆ ಸಂಭಾವನೆಯನ್ನು ಕೊಟ್ಟು **ಆಶ್ರಯದಾತರಾಗಬಹುದು.** ಅನೇಕರು ಹೀಗೆ ಸಹಾಯ ಮಾಡಿರುತ್ತಾರೆ ಅಂಥವರ ಹೆಸರುಗಳನ್ನು ಆಗಾಗ್ಗೆ ಪ್ರಕಟಿಸುತ್ತಾ ನಮ್ಮ ಗ್ರಂಥಗಳು ಪ್ರಕಟವಾದ ಹಾಗೆ ಅವರಿಗೆ ಒಂದೊಂದು ಪ್ರತಿಯನ್ನು ಸಮರ್ಪಿಸುತ್ತಾ ಬರುವೆವು.

(೨) ಭಾಗಭಾಗವಾಗಿ ಪ್ರಕಟವಾಗುವ ಗ್ರಂಥಕ್ಕೆ ಹೆಚ್ಚಿಗೆಯ ಪೋಷಣದ್ರವ್ಯವನ್ನು ಕೊಟ್ಟು **ಪೋಷಕರಾಗಬಹುದು.** ಅವರ ಹೆಸರನ್ನು ಪ್ರಕಟಿಸುತ್ತಾ ಬರುವೆವು

(೩) **ವಿಚಾರಸಂಘಗಳನ್ನು ಏರ್ಪಡಿಸಿ ಸಹಾಯಕರಾಗಬಹುದು.** ಐದು ಜನಕ್ಕೆ ಕಡಿಮೆಯಿಲ್ಲದ ಸದಸ್ಯರಿರುವ ಸಂಘಗಳಿಗೆ ನಮ್ಮ ಗ್ರಂಥಗಳನ್ನು ಶೇಕಡ ೧೨½ ಕಡಿಮೆಯ ಬೆಲೆಗೆ ಕೊಡುವೆವು, ಹತ್ತು ಅಥವಾ ಹೆಚ್ಚು ಜನರಿದ್ದರೆ ಅವರು ನಮ್ಮ ಎಲ್ಲಾ ಪುಸ್ತಕಗಳನ್ನು ಒಂದೇ ಗಂಟಿಗೆ ಕೊಂಡರೆ ಕೂಡಲೆ ಶೇಕಡ ೧೨½ ಡಿಸ್ಕೌಂಟು (ಉತ್ತಾರ) ಕೊಡುವದಲ್ಲದೆ, ಒಂದು ವರ್ಷದೊಳಗಾಗಿ ಹತ್ತು ಲಾಟು ಪುಸ್ತಕಗಳನ್ನು ಕೊಂಡು ನಮ್ಮ ಬಿಲ್ಲಿನ ನಂಬರು ಮತ್ತು ತಾರೀಕು ತಿಳಿಸುವ ಒಂದು ಪಟ್ಟಿಯನ್ನು ಕಳುಹಿಸಿದರೆ ಒಟ್ಟುವ್ಯಾಪಾರದ ಮೊಬಲಗಿಗೆ ಮತ್ತೆ ಸೇಕಡ ೧೨½ ಪುರಸ್ಕಾರವನ್ನು ಕೊಡುತ್ತೇವೆ ಹೀಗೆ ಅವರಿಗೆ ಒಟ್ಟಿನಲ್ಲಿ ಶೇಕಡ ೨೫ರಂತೆ ಸೋಡಿಬಿಟ್ಟಂತೆ ಆಗುವದು, ಎಲ್ಲ ಸದಸ್ಯರಿಗೂ ವರ್ಷದೊಳಗಾಗಿ ಒಂದೊಂದು ಲಾಟು ಪುಸ್ತಕಗಳೂ ದೊರೆತಂತಾಗಿರುವದು ವಿಚಾರಸಂಘದವರು ಗ್ರಂಥಗಳಲ್ಲಿ ತಮಗೆ ಸಂದೇಹ ಬರಬಹುದಾದ ವಿಷಯಗಳನ್ನು ಕುರಿತು ನಮಗೆ ಬರೆದು ಉತ್ತರವನ್ನು ತರಿಸಿಕೊಳ್ಳಬಹುದು ಅಂಚೆಯ ಹಾಸಲನ್ನು ಮಾತ್ರ ಅವರು ವಹಿಸಬೇಕಾಗುವದು

(೪) ಶ್ರೀಶಂಕರಜಯಂತಿಯೇ ಮುಂತಾದ **ಉತ್ಸವಕಾಲಗಳಲ್ಲಿ** ಕಾರ್ಯಾಲಯದ **ಚಿಕ್ಕ ಪುಸ್ತಕಗಳನ್ನು** ಕೊಂಡು ಓದಬೇಕೆಂಬ ಕುತೂಹಲವುಳ್ಳವರಿಗೆ **ಧರ್ಮಾರ್ಥವಾಗಿ ಹಂಚಬಹುದು.** ಒಂದೇ ಪುಸ್ತಕವನ್ನು ಇಪ್ಪತ್ತು ಪ್ರತಿಗಳಿಗೆ ಕಡಿಮೆಯಿಲ್ಲದಂತೆ ಈ ಕಾರ್ಯಕ್ಕಾಗಿ ಕೊಳ್ಳುವವರಿಗೆ ಶೇಕಡ ೨೫ರಂತೆ ಉತ್ತಾರಹಾಕಿಕೊಡುತ್ತೇವೆ. ೧೫೦ ಪ್ರತಿಗಳ ಮೇಲೆ ಕೊಳ್ಳುವವರಿಗೆ ಸೇಕಡ ೩೩⅓ ಉತ್ತಾರ ಹಾಕಿಕೊಡುತ್ತೇವೆ.

(೫) ಭಗವದ್ಗೀತೆಯೇ ಮುಂತಾದ ಭಾಗಭಾಗವಾಗಿ ಅಚ್ಚಾಗುತ್ತಿರುವ ಗ್ರಂಥಗಳಿಗೆ **ಚಂದಾದಾರರನ್ನು ಒದಗಿಸಿಕೊಡಬಹುದು, ಗ್ರಂಥಗಳನ್ನು ಮಾರಾಟ ಮಾಡಬಹುದು.** ಅಂಥವರಿಗೆ ಕೆಲಸಕ್ಕೆ ತಕ್ಕಂತೆ **ಕಮಿಷನ್** (ದಲ್ಲಾಲಿ) ಕೊಡುವೆವು.